
ಛಾಯಾರೂಪ


ಎಲ್ಲ ವೈರುದ್ಧಗಳ ಈಚೆ


ಪ್ರೇಮಪತ್ರ


ಪ್ರಶಾಂತ ಕಣಿವೆ



# ಹೆಣ್ಣಿನ ರೂಪ/ಪಾತ್ರಗಳನ್ನು ಯಶಸ್ವಿಯಾಗಿ ರೂಪಿಸಿದ ರೂಪಶ್ರೀ ಗೋಪಾಲ್

ವೃತ್ತಿಯಿಂದ ಸಾಫ್ಟ್‌ವೇರ್ ಇಂಜಿನಿಯರ್ ಆಗಿರುವ ರೂಪಶ್ರೀ ಗೋಪಾಲ್‌ಗೆ ಚಿಕ್ಕಂದಿನಿಂದಲೂ ಯಾವ ವಸ್ತುವಿನಲ್ಲಾಗಲೀ ಸೌಂದರ್ಯವನ್ನು ಹುಡುಕುವ ಆಸಕ್ತಿ. ಈಗ ಸುಮಾರು ಎರಡು ವರುಷಗಳಿಂದ ಕಲಾವಿದ ಶ್ರೀ ಡಿ. ಟಿ. ಲೋಹಿತ್ ಅವರಿಂದಲೂ ಎಂ. ಸಿ. ಅಕಾಡೆಮಿ ಆಫ್ ಆರ್ಟ್ಸ್‌ನಿಂದಲೂ ಕಲಾ ಶಿಕ್ಷಣ ಪಡೆಯುತ್ತಿರುವ ಈಕೆ, ಈ ಅಲ್ಪಾವಧಿಯಲ್ಲಿ ಕಲಾಭಿವ್ಯಕ್ತಿಯ ನಿಟ್ಟಿನಲ್ಲಿ ಮಾಡಿರುವ ಸಾಧನೆ ಸ್ತುತ್ಯರ್ಹ.

ಕಳೆದ ಏಪ್ರಿಲ್ ೭ರಿಂದ ೧೧ರವರೆಗೆ ಬೆಂಗಳೂರು ಜಯನಗರ ೩ನೇ ಬ್ಲಾಕಿನಲ್ಲಿರುವ ಪ್ಯಾಲೆಟ್ ಆರ್ಟ್ಸ್ ಗ್ಯಾಲರಿಯಲ್ಲಿ ಜರುಗಿದ ಈಕೆಯ ಮೊದಲನೆಯ ಏಕವ್ಯಕ್ತಿ ಕಲಾ ಪ್ರದರ್ಶನದಲ್ಲಿ ಸುಮಾರು ೨೦ ತೈಲ ವರ್ಣ ಕೃತಿಗಳು ಪ್ರದರ್ಶಿತವಾಗಿದ್ದವು. ಸಮಾಜದಲ್ಲಿ ಮಹಿಳೆಯ ಹಲವಾರು ಪಾತ್ರ/ರೂಪಗಳನ್ನು ಬೇರೆ ಬೇರೆ ಹೆಸರುಗಳಿಂದ (ಉದಾ : ಸಖಿ, ಆಲಾಪ್, ಉಪಾಸನಾ, ಪ್ರಯಾಸ್, ಸ್ವಚ್ಛಂದ್, ಸಾಧನಾ, ವಸುಧಾ ಇತ್ಯಾದಿ) ಚಿತ್ರಿಸಿ, ಕ್ಯಾನ್ವಾಸಿನಲ್ಲಿ ಸೆರೆಹಿಡಿಯುವ ಇವರ ಪ್ರಯತ್ನ ಸಾಕಷ್ಟು ಯಶಸ್ವಿಯಾಯಿತು. ಇವಲ್ಲದೆ ಪ್ರದರ್ಶನದಲ್ಲಿ ಬೇರೆ ಬೇರೆ ವಿಷಯಗಳನ್ನು ಆರಿಸಿಕೊಂಡು ಮಾಡಿದ ಹಲವಾರು ಮನಮೋಹಕ ಚಿತ್ರಗಳು ಇದ್ದವು.

ಈ ಉದಯೋನ್ಮುಖ ಕಲಾವಿದೆಯ ಕುಂಚದಿಂದ ಇನ್ನೂ ಹಲವಾರು ಉತ್ತಮ ಕಲಾಕೃತಿಗಳನ್ನು ನಿರೀಕ್ಷಿಸಬಹುದು ಹಾಗೂ ಇವರ ಚಿತ್ರಗಳು ಸಾಕಷ್ಟು ಜನಪ್ರಿಯವಾಗಬಲ್ಲವು.

ಕೆ. ಎಸ್. ಪಾರ್ಥಸಾರಥಿ
ಸಿ-೨, ಐಕ್ಯತಾ, ೬೦/೨, ೧೭ನೇ ಕ್ರಾಸ್
೪ನೇ ಮತ್ತು ೫ನೇ ಮುಖ್ಯರಸ್ತೆ ನಡುವೆ
ಮಲ್ಲೇಶ್ವರಂ, ಬೆಂಗಳೂರು- ೫೬೦ ೦೫೫


ಉಪಾಸನಾ

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಶ್ರೀಹರಿ, ರವೀಂದ್ರ, ಮೋನಪ್ಪ, ಸ್ಯಾಮ್
ಸತೀಶ್ ಯಲ್ಲಾಪುರ, ಎನ್. ಆರ್. ಬೊಮ್ನಳ್ಳಿ

ಮುಖಪುಟ : ಡಾ|| ಎಸ್. ಕೆ. ಕರೀಂಖಾನ್, (ಚಿತ್ರಕೃಪೆ : ಸೌಜನ್ಯ-ಕೆ. ಪಿ. ಎನ್.)

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಒಂ**ದು ಹನಿ ಮಳೆಯೂ ಬೀಳದ ಗ್ರಾಮವೊಂದು ನೀರಿನ ಪ್ರವಾಹದಿಂದ ಆತಂಕಕ್ಕೀಡಾಗುವುದು ಈ ಶತಮಾನದ ಒಂದು ವಿಚಿತ್ರ ವಿದ್ಯಮಾನ. ಗುಲ್ಬರ್ಗ ಜಿಲ್ಲೆಯಲ್ಲಿ ಈಚೆಗೆ ಇಂತಹ ವಿಪತ್ತು ಕಂಡುಬಂತು. ಮಳೆ ಸುರಿಯುವುದು ಮಹಾರಾಷ್ಟ್ರದ ಕೊಯ್ನಾ ಅಣೆಕಟ್ಟಿನ ಆಯಕಟ್ಟಿನಲ್ಲಿ, ಆದರೆ ಹಾನಿಯುಂಟಾಗುವುದು ಮುನ್ನೂರು ಮೈಲಿಯಾಚೆಯ ಗುಲ್ಬರ್ಗದ ಹಳ್ಳಿಗಳಲ್ಲಿ. ಪ್ರಾಣಹಾನಿ, ಬೆಳೆ ನಾಶ, ಮನೆಗಳು ಕುಸಿಯುವುದು ಇತ್ಯಾದಿ ದುರಂತವಿಲ್ಲದಿದ್ದರೆ ಇದೊಂದು ಅದ್ಭುತ ವಿಸ್ಮಯವೆಂದು ಮೂಗಿನ ಮೇಲೆ ಬೆರಳಿಡಬಹುದಾಗಿತ್ತು. ಅತ್ತ ಸೂರತ್‌ನಲ್ಲಿ ಮನೆಗಳು ಮುಳುಗುವಷ್ಟು ಪ್ರವಾಹ. ಅದು ಮಳೆಯಿಂದಾದುದಲ್ಲ, ಹತ್ತಿರದ ಅಣೆಕಟ್ಟಿನಿಂದ ವಿಪರೀತ ನೀರನ್ನು ಹೊರಗೆ ಹರಿಯಲು ಬಿಟ್ಟಿದ್ದರಿಂದ ಉಂಟಾದ ಅನಾಹುತ. ಊರಿನೊಳಕ್ಕೆ ಅಷ್ಟು ನೀರು ನುಗ್ಗಿದರೆ ಯಾವ ಚರಂಡಿ ವ್ಯವಸ್ಥೆ ತಾನೆ ಅದಷ್ಟನ್ನೂ ಹೊತ್ತು ಹೊರಹಾಕಲು ಸಮರ್ಥವಾದೀತು! ಮೊದಲೇ ಚರಂಡಿಗಳಲ್ಲಿ ಪ್ಲಾಸ್ಟಿಕ್, ತೆಂಗಿನಕಾಯಿ ಮೊಟ್ಟೆ ಇತ್ಯಾದಿಗಳನ್ನು ತುಂಬಿರುತ್ತಾರೆ; ಇನ್ನು ಪ್ರವಾಹವನ್ನು ಎದುರಿಸಲು ಹೇಗೆ ತಾನೆ ಸಾಧ್ಯ! ವಾತಾವರಣದಲ್ಲಿ ಅತೀವ ವ್ಯತ್ಯಯಗಳು ಉಂಟಾಗುತ್ತಿರುವುದು ನಿಜವಿರಬಹುದು. ಆದರೆ ಈ ವರ್ಷದ ಬಹುತೇಕ ಪ್ರವಾಹಗಳ ಜವಾಬ್ದಾರಿಯನ್ನು ನಮ್ಮ ಅಣೆಕಟ್ಟು ನಿರ್ವಹಣಾ ವ್ಯವಸ್ಥೆಯ ನ್ಯೂನತೆಗಳು ಹೊರಬೇಕಾಗಿದೆ. ಮುಂಬೈನಂತಹ ನಗರದಲ್ಲಾದರೆ ಸಮುದ್ರತೀರದ ಅಗಾಧ ಮಳೆಯಿಂದ ಪ್ರವಾಹ ಬಂತೆನ್ನಬಹುದು, ಆದರೆ ಅದು ಗುಲ್ಬರ್ಗದ ಹಳ್ಳಿಗಳಿಗೆ ಅನ್ವಯಿಸುವುದಿಲ್ಲ. ನೀರು ಬಂದಾಗ ಬಿಟ್ಟುಬಿಟ್ಟರೆ ನಾಳೆ ಕಟ್ಟೆ ತುಂಬುತ್ತದೋ ಇಲ್ಲವೋ ಎಂಬ ಅನುಮಾನ. ಅದರಿಂದಾಗಿ ಕಡೆಯಂಗುಲದವರೆಗೂ ನೀರು ಹಿಡಿದಿಡುವುದು ಪದ್ಧತಿ. ಅದಾದನಂತರ ಅನಿರೀಕ್ಷಿತವಾಗಿ ಹೆಚ್ಚಿನ ಮಳೆಯಾದರೆ ಹೊರ ಹರಿವು ವಿಪರೀತವಾಗಿರಬೇಕಾಗುತ್ತದೆ. ಅನಾಹುತ ಅನಿವಾರ್ಯ ಫಲ. ಕಟ್ಟೆಗಳ ನಿರ್ಮಾಣದ ನ್ಯೂನತೆಯ ಜೊತೆಗೆ ಹಲವು ವರ್ಷಗಳ ಹೂಳು ತುಂಬಿಕೊಂಡಿರುವುದು ಕಟ್ಟೆಗಳ ನೀರಿನ ಪ್ರಮಾಣವನ್ನು ಕುಗ್ಗಿಸಿ ಹೊರಹರಿವನ್ನು ಹೆಚ್ಚಿಸುತ್ತದೆ. ನಿಸರ್ಗದ ಹೊಡೆತ ಒಂದು ಕಡೆ, ಮಾನವ ನಿರ್ಮಿತ ದುರಂತಗಳ ಸಾಲು ಇನ್ನೊಂದೆಡೆ. ಗುಲ್ಬರ್ಗದ ಹಳ್ಳಿಗಳಲ್ಲಿ ಪ್ರವಾಹ, ಅಲ್ಲಿಂದ ಐವತ್ತು ಮೈಲಿ ದೂರದಲ್ಲಿ ಮಳೆ ಇಲ್ಲದೆ ಬರಗಾಲ. ಇಪ್ಪತ್ತೊಂದನೆಯ ಶತಮಾನದಲ್ಲಿ ನಮ್ಮ ಯೋಜನೆಗಳು ಕೈಕೊಟ್ಟಿರುವುದು ಹೀಗೆ. ಚರಂಡಿಯಲ್ಲಿ ಇಡೀ ವರ್ಷ ಪ್ಲಾಸ್ಟಿಕ್ ತುಂಬುವ ಮುಂಬೈನ ಜನ ಮತ್ತು ಅವರಿಗಿಂತಲೂ ಹೆಚ್ಚಾಗಿ ನಮ್ಮ ದುರ್ದರ್ಶನ ಮಾಧ್ಯಮವು ನಗರಪಾಲಿಕೆಯನ್ನು ಮತ್ತು ರಾಜಕಾರಣಿಗಳನ್ನು ದೂಷಿಸಲು ಅಚ್ಚರಿಯ ಪದಗುಚ್ಛಗಳನ್ನು ಬಳಸುವುದುಂಟು. ವರ್ಷೇ ವರ್ಷೇ ನಡೆಯುವ ಸಂಪ್ರದಾಯಗಳ ಪಟ್ಟಿಗೆ ಇದೂ ಸೇರಿಹೋಗಿದೆ. ಮುಂದಿನ ಜುಲೈವರೆಗೆ ಇದನ್ನು ಮರೆತು ಮತ್ತೆ ಅಬ್ಬರ ಆರಂಭಿಸಬಹುದು.

ನಮ್ಮ ಪ್ರಜಾಪ್ರಭುತ್ವ ಪದ್ಧತಿಯು ಕಾರ್ಯತಃ ವಿಕಾಸಗೊಳ್ಳುತ್ತಿರುವುದು ಹೀಗೆ. ಅಣುಶಕ್ತಿ ಒಪ್ಪಂದವನ್ನು ಅಮೆರಿಕಾ ಜೊತೆ ಮಾಡಿಕೊಂಡು ನಮ್ಮ ಪ್ರಧಾನಿಯವರು ಆ ಬೃಹತ್ ರಾಷ್ಟ್ರದ ಹೀನ ಸರ್ಕಾರದ ಒತ್ತಾಯಗಳಿಗೆ ಮಣಿದು ತೆಪ್ಪಗೆ ಕುಳಿತಿದ್ದರು. ಬುಷ್ ಹೇಳಿದಂತೆ ಮಾಡದಿರುವುದು ಮಹತ್ಪಾಪವೆಂಬಂತೆ ಅವರು ಕನಲುತ್ತಿದ್ದರು. ಆದರೆ ಪ್ರಜಾಪ್ರಭುತ್ವದ ಸಕಾರಾತ್ಮಕ ಮಹತ್ವದ ಕಾರಣದಿಂದಾಗಿ ರಾಜ್ಯಸಭೆಯಲ್ಲಿ ದೀರ್ಘವಾದ ಹೇಳಿಕೆಯನ್ನು ನೀಡಿ ದೇಶದ ಸಾರ್ವಭೌಮತ್ವ ಮತ್ತು ಗೌರವಗಳಿಗೆ ಇನ್ನೂ ಅಲ್ಪಸ್ವಲ್ಪ ಮನ್ನಣೆ ಉಂಟೆಂಬುದನ್ನು ಪ್ರಧಾನಿ ಒಪ್ಪಿಕೊಂಡಿದ್ದಾರೆ. ನಮ್ಮ ಪ್ರಸ್ತುತ ಸನ್ನಿವೇಶದಲ್ಲಿ ಏನೆಲ್ಲಾ ಕೆಡಕುಗಳು ತುಂಬಿದ್ದರೂ ಸಾರ್ವಜನಿಕರ ಭಾಗವಹಿಸುವಿಕೆಯಿಂದ ಅವುಗಳಲ್ಲಿ ಕೆಲವನ್ನು ಪ್ರಜಾಪ್ರಭುತ್ವಾತ್ಮಕವಾಗಿ ಪರಿಹರಿಸಿಕೊಳ್ಳಬಹುದೆಂಬುದನ್ನು ಈ ಘಟನೆ ಸಾರಿ ಹೇಳಿದೆ. ವಿಜ್ಞಾನಿಗಳು, ರಾಜಕೀಯ ಪಕ್ಷಗಳು, ಸಾರ್ವಜನಿಕರು, ಎಲ್ಲಾ ಒಟ್ಟಾಗಿ ಬುಷ್‌ನ ಕುತಂತ್ರಗಳನ್ನು ಧಿಕ್ಕರಿಸಿದ್ದರಿಂದ ಮನಮೋಹನ ಸಿಂಗರು ಸ್ವಲ್ಪ ಹಿಂದೆ ಸರಿಯಲು ಒಪ್ಪಬೇಕಾಯಿತು. ಮುಂದಿನ ದಿನಗಳಲ್ಲಿ ಅವರ ಇಂದಿನ ಹೇಳಿಕೆಯನ್ನು ಸಮರ್ಥಿಸುತ್ತಾರೋ ಅಥವಾ ಅಮೆರಿಕಾದ ಒತ್ತಡಕ್ಕೆ ಮಣಿಯುತ್ತಾರೋ ಎಂಬುದು ಸಹ ಸಾರ್ವಜನಿಕರ ಪ್ರಜಾಪ್ರಭುತ್ವವಾದಿ ಮಧ್ಯಪ್ರವೇಶವನ್ನು ಅವಲಂಬಿಸಿರುತ್ತದೆ. ಆದ್ದರಿಂದ ನಾವು ಇನ್ನೂ ಹೆಚ್ಚು ಜಾಗ್ರತರಾಗಿರಬೇಕಾದ ಅಗತ್ಯವಿದೆ; ನಮ್ಮ ದೇಶವು ಮತ್ತೆ ಅಣುಬಾಂಬನ್ನು ಸಿಡಿಸಬೇಕೆಂಬ ಉದ್ದೇಶದಿಂದಲ್ಲ, ಆದರೆ ನಮ್ಮ ಹೆಜ್ಜೆಗಳನ್ನು ನಾವೇ ತೀರ್ಮಾನಿಸಬೇಕೆಂಬುದನ್ನು ಸ್ಥಿರಪಡಿಸುವುದಕ್ಕಾಗಿ.

ಒಂದು ಸ್ತುತ್ಯರ್ಹವಾದ ರೀತಿಯಲ್ಲಿ ಪ್ರಜಾಪ್ರಭುತ್ವದ ಗೆಲುವು ಇದು ಎನ್ನುವುದು ನಿಜ. ಆದರೆ ಸೋಲುಗಳ ಸರಮಾಲೆ ನಮ್ಮನ್ನು ನೇಣುಗಂಬಕ್ಕೇರಿಸುವಷ್ಟು ಉದ್ದವಾಗಿದೆ,

೭ನೇ ಪುಟಕ್ಕೆ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೮ ಸಂಚಿಕೆ-೨ ಸೆಪ್ಟೆಂಬರ್ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**




# ಡೋಲಾಯಮಾನದಲ್ಲಿ ನೇಪಾಳ

ಇದೇ ಜುಲೈ ೨೧ರಂದು ನೇಪಾಳದ ಒಂದು ಹಳ್ಳಿಯಲ್ಲಿ ನಡೆದ ಘಟನೆ ಇದು : ನೇಪಾಲಿ ಕಾಂಗ್ರೆಸ್ (ಡಿ) ಎಂಬ ಪಕ್ಷಕ್ಕೆ ಸೇರಿದ ಬಿಜಯ ಮಹತೊ ಮುಂತಾದವರು ಮಹೋತ್ತರಿ ಎಂಬಲ್ಲಿ ನಲವತ್ತೈದು ವರ್ಷದ ವಿಧವೆ ರಾಂಪಿಯಾರಿ ದೇವಿ ಮಹತೊ ಎಂಬುವಳನ್ನು ಬೆತ್ತಲೆಗೊಳಿಸಿ ಚೆನ್ನಾಗಿ ಥಳಿಸಿದರು. ಅವಳು ಮಾಟಗಾತಿಯಾಗಿದ್ದಳೆಂದೋ ಏನೋ ಸಬೂಬು ನೀಡಿದ್ದರು.

ನಮ್ಮ ದೇಶದಲ್ಲಿ ಇಂತಹ ಘಟನೆಗಳು ಆಗಾಗ್ಗೆ ನಡೆಯುತ್ತಿರುತ್ತವೆ. ಆ ಮಟ್ಟಿಗೆ ಭಾರತ-ನೇಪಾಳ ಸಾಮ್ಯವುಳ್ಳವು ಎನ್ನಬಹುದು. ಮಿಕ್ಕಂತೆ ವ್ಯತ್ಯಾಸಗಳು ನೂರಾರು. ಪ್ರವಾಸಿಗರನ್ನು ಚಾರಣಕ್ಕೆ ಕೊಂಡೊಯ್ಯುವ ಒಬ್ಬ ಶೆರ್ಪಾ ಅವರನ್ನೆಲ್ಲಾ ''ಕಾಮ್ರೇಡ್ಸ್'' ಎಂದೇ ಸಂಬೋಧಿಸುವುದು ನೇಪಾಳದಲ್ಲಿನ ಈಚಿನ ಪ್ರವೃತ್ತಿ. ಎಲ್ಲರೂ ಹಾಗೆ ಮಾಡುತ್ತಾರೆಂದಲ್ಲ, ಆದರೆ ಹಾಗೆ ಮಾಡುವವರಿದ್ದಾರೆ ಮತ್ತು ಅವರಿಗೆ ಅದರಲ್ಲಿ ಸಂಕೋಚವೇನೂ ಇಲ್ಲ. ''ವಿಶ್ವದ ಏಕೈಕ ಹಿಂದು ರಾಜಪ್ರಭುತ್ವ''ವನ್ನು ಮೂಲೆಗುಂಪಾಗಿಸಿರುವ ನೇಪಾಳದ ಜನತೆಗೆ ಭವಿಷ್ಯವನ್ನು ರೂಪಿಸಿಕೊಳ್ಳುವ ತವಕವಿದೆ. ಆದರೆ ಆ ಬಗ್ಗೆ ಕ್ರಿಯಾಶೀಲರಾಗಲು ಬೆಟ್ಟದಷ್ಟು ಅಡಚಣೆಗಳಿವೆ. ಕಠ್ಮಂಡುವಿನಲ್ಲಿ ಬೇರೆಲ್ಲ ರಾಜತಾಂತ್ರಿಕ ವಲಯಗಳಿಗಿಂತಲೂ ಹೆಚ್ಚು ಮುತುವರ್ಜಿಯಿಂದ ಮರೆಯಲ್ಲೇ ಕತ್ತಿ ಮಸೆಯುತ್ತಿರುವ ರಾಜತಾಂತ್ರಿಕ ಕಚೇರಿ ಎಂದರೆ ಅಮೆರಿಕಾದ್ದು. ಯಾವ ಕ್ಷೇತ್ರವನ್ನೂ ಬಿಡದೆ ಹದ್ದುಗಣ್ಣಿನಿಂದ ಹೊಂಚುಹಾಕುತ್ತಿರುವ ಅಮೆರಿಕಾಕ್ಕೆ ರಾಜಪ್ರಭುತ್ವ ಉಳಿಯಬೇಕೆನ್ನುವುದಕ್ಕಿಂತಲೂ ತನ್ನ ಶರಣಾರ್ಥಿಗಳು ಪ್ರಭುತ್ವದಲ್ಲಿರಬೇಕೆಂಬ ಆಕಾಂಕ್ಷೆ ಹೆಚ್ಚಿನದು. ಅದು ನೇಪಾಳಕ್ಕೆ ಸೀಮಿತವಾಗಿರುವಂತಹ ಆಶಯವೇನಲ್ಲ, ನಮ್ಮ ದೇಶದಲ್ಲಿ ಅಹ್ಲುವಾಲಿಯ-ಚಿದಂಬರಂಗಳನ್ನು ಅಮೆರಿಕಾ ಪೋಷಿಸುವುದಿಲ್ಲವೇ, ಹಾಗೆ. ವಿಶ್ವಸಂಸ್ಥೆಯ ಹೆಸರಿನಲ್ಲಿ ನಡೆಯುತ್ತಿರುವ ಆಹಾರ, ಆರೋಗ್ಯ, ಶಿಕ್ಷಣ, ಮುಂತಾದ ಸೇವಾಕ್ಷೇತ್ರಗಳಲ್ಲಿ ಅಮೆರಿಕಾದ್ದೇ ಮೇಲುಗೈ ಎಂಬುದನ್ನು ನೇಪಾಳದ ಜನ ತಿಳಿದಿದ್ದಾರೆ. ಮಾಧ್ಯಮಗಳಲ್ಲಂತೂ ಅಮೆರಿಕಾದ ಅಬ್ಬರಕ್ಕೆ ಸರಿಸಾಟಿಯಾಗಿ ನಿಲ್ಲಬಲ್ಲಂತಹ ಬೇರಾವ ದನಿಯೂ ನೇಪಾಳದಲ್ಲಿ ವಿರಳವೇ ಸರಿ. ಕಠ್ಮಂಡುವಿನ ಎರಡು ಪ್ರಮುಖ ಆಂಗ್ಲ ದಿನಪತ್ರಿಕೆಗಳಲ್ಲಿ ಒಂದೊಂದು ಅಕ್ಷರವೂ ಅಮೆರಿಕಾದ ವರ್ಚಸ್ಸನ್ನು ಶ್ಲಾಘಿಸುವಂತಹದ್ದೇ ಮತ್ತು ಪ್ರತಿಯೊಂದೂ ಸುದ್ದಿ ಲೇಖನ, ಸಂಪಾದಕೀಯ, ವಾಚಕರ ಪತ್ರಗಳು, ಎಲ್ಲವೂ ಅಮೆರಿಕಾದ ಮುಖವಾಣಿಯಂತೆಯೇ ಕಾರ್ಯ ನಿರ್ವಹಿಸುತ್ತವೆ. ಮಾವೋವಾದಿಗಳು ಎಲ್ಲ ಅನಾಹುತಗಳಿಗೂ ಕಾರಣವೆಂದು ಬಿಂಬಿಸುವುದು ಈ ಮಾಧ್ಯಮಗಳ ಕಾರ್ಯಶೈಲಿ. ಯಾವುದೋ ಹಳ್ಳಿಯಲ್ಲಿ ಮಾವೋವಾದಿಗಳು ಜಮೀನ್ದಾರನ ಮನೆಯನ್ನು ಮಾಲಿಕನಿಗೆ ಬಿಟ್ಟುಕೊಡುತ್ತಿಲ್ಲ, ಇನ್ನೆಲ್ಲೋ ಬ್ಯಾಂಕಿಗೆ ನುಗ್ಗಿದರು, ಹೀಗೆ ಸಮಾಚಾರದ ಸರಣಿ. ಅವೇ ವಾರ್ತೆಗಳು ನೇಪಾಳಿ ಭಾಷೆಯ ಪತ್ರಿಕೆಗಳಲ್ಲಿ ಇರುವುದಿಲ್ಲವೆಂಬುದು ಎರಡನ್ನೂ ತುಲನೆ ಮಾಡಿದಾಗ ತಿಳಿದುಬರುತ್ತದೆ.

ನೇಪಾಳದ ಈಗಿನ ಪ್ರಧಾನ ಮಂತ್ರಿಯ ದೇಹವು ದೇಶದ ಜನರ ಪ್ರಜಾಪ್ರಭುತ್ವದ ಆಕಾಂಕ್ಷೆಗೆ ಬದ್ಧವಾಗಿದೆ; ಇಲ್ಲವಾದಲ್ಲಿ ಅಷ್ಟೇನೂ ಆರೋಗ್ಯವಿಲ್ಲದ ಈ ಹಿರಿಯ ರಾಜಕಾರಣಿ ಪ್ರಧಾನಿಯಾಗಿರಲು ಸಾಧ್ಯವಾಗುವುದಿಲ್ಲ. ಆದರೆ ಆತನ ಮನಸ್ಸು ಒಮ್ಮೆ ಮಹಾರಾಜನಿಗೆ ನಮಿಸುತ್ತದೆ, ಇನ್ನೊಮ್ಮೆ ಅಮೆರಿಕಾದ ಆಣತಿಯಂತೆ ನಡೆಯಬೇಕೆಂದು ಹಾತೊರೆಯುತ್ತದೆ. ರಾಜ, ಪ್ರಧಾನಿ ಹಾಗೂ ಆತನೊಡನಿರುವ ಸಚಿವರು ಮತ್ತು ಪಕ್ಷಗಳು, ಮಾವೋವಾದಿಗಳು : ಇವು ನೇಪಾಳದ ತ್ರಿಕೋಣದ ಬಾಹುಗಳು. ಪ್ರತಿಯೊಂದೂ ತಾನು ಪ್ರಬಲವಾಗಬೇಕೆಂದು ಹವಣಿಸುತ್ತದೆಯಾದ್ದರಿಂದ ಸುಗಮವಾಗಿ ಮುನ್ನಡೆಯುವುದು ಅಶಕ್ಯ. ನಮ್ಮ ದೇಶದಲ್ಲಿ ಖಾಸಗೀಕರಣದ ಕೂಗು ಗಟ್ಟಿಯಾಗಿರುವಂತೆ ನೇಪಾಳದಲ್ಲೂ ಇದೆ. ಅದರ ಮಹತ್ವವನ್ನು ಸಾರಲು ಪತ್ರಿಕೆಯೊಂದು ಮನೋಕಾಮನಾ ದೇವಾಲಯಕ್ಕೆ ನಿರ್ಮಿಸಲಾಗಿರುವ ಕೇಬಲ್ ಕಾರ್ ಯೋಜನೆಯನ್ನು ನಿದರ್ಶನವನ್ನಾಗಿ ನೀಡಿತ್ತು. ''ಇದು ಸ್ವಿಟ್ಜರ್ಲೆಂಡಿನ ಖಾಸಗಿ ಕಂಪನಿಯೊಂದರ ಸಹಭಾಗಿತ್ವದಲ್ಲಿ ನಡೆದಿದೆ, ಜನರು ಅದನ್ನು ಸ್ವಾಗತಿಸಿದ್ದಾರೆ, ಅದು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ; ಆದ್ದರಿಂದ ಖಾಸಗಿಯು ಶ್ರೇಷ್ಠ'' ಎಂಬುದು ವಾದ. ವಿದ್ಯುಚ್ಛಕ್ತಿ ಉತ್ಪಾದನೆಗೆ ನೇಪಾಳದಲ್ಲಿ ಬೇಕಾದಷ್ಟು ಅವಕಾಶಗಳಿವೆ. ಅವನ್ನೆಲ್ಲಾ ಖಾಸಗಿಗೆ ಬಿಟ್ಟುಕೊಡಬೇಕೆಂಬುದು ಇನ್ನೊಂದು ನಿಲುವು. ಅದೇ ಮನೋಕಾಮನಾ ದೇವಾಲಯದ ಬಳಿಯ ಒಂದು ಅಂಗಡಿಯಲ್ಲಿ ಹಳಸಿದ ಕೋಕಾಕೋಲಾ ಬಗ್ಗೆ ಪ್ರವಾಸಿಗರಿಗೂ ಅಂಗಡಿಯವನಿಗೂ ಒಂದು ಚಿಕ್ಕ ಜಗಳವಾದರೆ ''ಅಲ್ಲಿ ಮಾವೋವಾದಿಗಳು ಪ್ರವೇಶಿಸಿಬಿಟ್ಟಿದ್ದಾರೆ'' ಎಂಬ ಹುಯಿಲನ್ನು ಎಬ್ಬಿಸಲಾಗುತ್ತದೆ. ಕಠ್ಮಂಡುವಿನ ಪಶುಪತಿನಾಥ ದೇವಾಲಯದೆದುರಿನಲ್ಲಿ ಉದ್ದನೆಯ ಬಿಳಿಯ ಬಟ್ಟೆ ಇರಿಸಿ ''ನಮ್ಮ ದೇಶಕ್ಕೆ ಜಾತ್ಯತೀತತೆ ಬೇಡ'' ಎಂಬ ಘೋಷಣೆಗೆ ಸಾರ್ವಜನಿಕ ಸಹಿ ಸಂಗ್ರಹಣೆ ಮಾಡುವವರಿಂದ ಯಾವ ಆತಂಕವೂ ಇಲ್ಲವೆಂಬಂತೆ ಚಿತ್ರಿಸಲಾಗುವುದು ಇನ್ನೊಂದು ವಿಪರ್ಯಾಸ. ಪೊಲೀಸರು ಹತ್ತಾರು ಕಡೆಗಳಲ್ಲಿ ವಾಹನಗಳನ್ನು ನಿಲ್ಲಿಸಿ ತಪಾಸಣೆ ಮಾಡಿ ಪ್ರವಾಸಿಗರನ್ನು 'ಮತ್ತೊಮ್ಮೆ ಬನ್ನಿ' ಎಂದು ನವಿರಾದ ಮಾತನ್ನಾಡಿದರೆ ವಾಹನದ ಚಾಲಕ ಪ್ರವಾಸಿಗರಿಗೆ ಹೇಳುತ್ತಾನೆ : ''ಜನರನ್ನು ಥಳಿಸುವುದನ್ನು ನಿಲ್ಲಿಸಿ ಎಂದು ಅವರಿಗೆ ಹೇಳಿ'' ಎಂದು.

ಅಂದರೆ, ಮೇಲ್ನೋಟಕ್ಕೆ ನೇಪಾಳದ ಪಟ್ಟಣಗಳು ಮತ್ತು ನಗರಗಳು, ಯಾತ್ರಾಸ್ಥಳಗಳು, ಬೌದ್ಧ ದೇವಾಲಯಗಳು, ಪೋಖರಾದಂತಹ ಸುಂದರ ತಾಣಗಳು, ಮುಕ್ತಿನಾಥನ ಪರ್ವತ, ಎಲ್ಲಾ ಶಾಂತವಾಗಿವೆ; ಜೀವನ ಯಥಾಸ್ಥಿತಿಯಲ್ಲಿ ಸಾಗುತ್ತಿದೆ. ಆದರೆ ಹಲವು ರಾಜಕೀಯ ಶಕ್ತಿಗಳು ಅಲ್ಲಿ ಕದನದಲ್ಲಿ ನಿರತವಾಗಿವೆ, ಪ್ರಜಾಪ್ರಭುತ್ವದ ಸೆಲೆಯು ಬತ್ತಿಹೋಗದಂತೆ ಸೆಣೆಸಲು ಮುಂದಾಗುತ್ತಿವೆ. ಅದೇ ಕಾಲದಲ್ಲಿ ''ರಾಜನು ಅಂತರ್ಮುಖಿಯಾಗಿದ್ದಾನೆ, ತಾನೇನು ತಪ್ಪು ಮಾಡಿದೆನೆಂದು ಕ್ಷಣಕ್ಷಣವೂ ಕೇಳಿಕೊಳ್ಳುತ್ತಿದ್ದಾನೆ, ಜನರ ಒಲವಿಗಾಗಿ ಭಿಕ್ಷೆ ಬೇಡಲು ಸಿದ್ಧನಿದ್ದಾನೆ'' ಎಂಬ ಮಾತುಗಳನ್ನಾಡುವವರೂ ಇಲ್ಲದಿಲ್ಲ. ಮಾವೋವಾದಿಗಳನ್ನು ನಿಶ್ಶಸ್ತ್ರೀಕರಣಕ್ಕೆ ಗುರಿಮಾಡದೆ ಯಾವ ರಾಜಕೀಯ ಪ್ರಕ್ರಿಯೆಗೂ ಅರ್ಥವಿಲ್ಲವೆಂದು ಗುಡುಗುವವರೂ ಇದ್ದಾರೆ. ಇವರೆಲ್ಲರ ನಡುವೆಯೂ ಅಮೆರಿಕಾದ ಧ್ವನಿ ಕೇಳುವಂತಾಗಬೇಕೆಂದು ವಾಷಿಂಗ್‌ಟನ್ನಿನ ಪ್ರಭುಗಳು ತಮ್ಮ ರಾಜತಾಂತ್ರಿಕ ಪ್ರತಿನಿಧಿಗೆ ಆದೇಶ ನೀಡಿದ್ದಾರೆ. ಭಾರತ ಮತ್ತು ಚೀಣಾಗಳ ಧ್ವನಿಯೇನಾದರೂ ಇದೆಯೇ, ಇದ್ದರೆ ಯಾವ ಸ್ವರೂಪದಲ್ಲಿ, ಎಂಬುದು ನೇಪಾಳದ ಪತ್ರಿಕೆಗಳಿಂದ ತಿಳಿದುಬರುವುದಿಲ್ಲ. ಮಾವೋವಾದಿ ಪ್ರಚಂಡನಿಗಿಂತಲೂ ಹೆಚ್ಚು ಪ್ರಚಂಡರು ನೇಪಾಳದ ರಾಜಕೀಯದಲ್ಲಿ ಹಸ್ತಕ್ಷೇಪ ಮಾಡುತ್ತಿರುವುದು ನೇಪಾಳದ ಜನತೆಗೆ ಗೊತ್ತಿದೆ. ಆ ದೇಶದ ವಿದ್ಯಾಸಂಸ್ಥೆಗಳಲ್ಲಿ ಯುವಕರು ತಮ್ಮ ಪ್ರಜಾಪ್ರಭುತ್ವದ ಬಗೆಗಿನ ಅಪಾರ ನಂಬಿಕೆಯನ್ನು ಮಹತ್ತರವಾದ ರೀತಿಗಳಲ್ಲಿ ಶ್ರುತಪಡಿಸುತ್ತಿದ್ದಾರೆ. ಡೋಲಾಯಮಾನ ನೇಪಾಳದ ಆರ್ಥಿಕ - ಸಾಮಾಜಿಕ - ರಾಜಕೀಯ ಭವಿಷ್ಯವು ಇವರಿಂದ ರೂಪುಗೊಳ್ಳಲಿದೆಯೆಂಬ ಭರವಸೆ ಯಾವುದೇ ವೀಕ್ಷಕನ ಮನಸ್ಸಿನಲ್ಲಿ ನಾಟುತ್ತದೆ.

# ಟಿಬೆಟ್ : ಪ್ರಸ್ಥಭೂಮಿಯಲ್ಲಿ ಮರುಭೂಮಿ ?

**ಮಾ**ನಸ ಸರೋವರ, ಗುರ್ಲಾ ಮಾಂಧಾತ ಪರ್ವತ, ಕೈಲಾಸ ಪರ್ವತ, ಸಾಗಾ ಎಂಬ ಚಿಕ್ಕ ಊರು, ಮಿಲರೇಪ ತಪಸ್ಸು ಮಾಡಿದ ಗುಹೆ, ಮುಂತಾದವುಗಳಿಂದ ಮೋಹಿತರಾಗಿರುವ ಶ್ರೀಮತಿ ವಿ. ವಿಜಯಲಕ್ಷ್ಮಿಯವರ ಅಭಿಪ್ರಾಯದಲ್ಲಿ ಭಾರತವು ೧೯೫೦ರ ದಶಕದಲ್ಲಿ ಮಾಡಬೇಕಾಗಿದ್ದ ಕೆಲಸವೊಂದನ್ನು ಮಾಡದೆ ಟಿಬೆಟ್ಟಿನ ಜನರನ್ನು ಸಂಕಷ್ಟಕ್ಕೆ ಸಿಲುಕಿಸಿದೆ. ಸಿಕ್ಕಿಂ ಹೇಗೆ ಭಾರತವನ್ನು ಸೇರಿಕೊಂಡಿತೋ ಹಾಗೆ ಟಿಬೆಟ್ ಸಹ ಸೇರಿಕೊಳ್ಳಬೇಕಾಗಿತ್ತೆಂಬುದು ಅವರ ಆಶಯ. ಜವಾಹರಲಾಲ್ ನೆಹರು ಪ್ರಧಾನಿಯಾಗಿದ್ದಾಗ ಸ್ವಲ್ಪ ಚುರುಕುತನ ಪ್ರದರ್ಶಿಸಿದ್ದಿದ್ದರೆ ಟಿಬೆಟ್ಟಿಗೆ ಹೋಗಲು ಭಾರತೀಯರು ಪ್ರಯಾಸಪಡಬೇಕಾಗುತ್ತಿರಲಿಲ್ಲ; ಅಂತಹ ಪ್ರಯಾಸವನ್ನು ಸಿಕ್ಕಿಂ ಸಂದರ್ಭದಲ್ಲಿ ಇಂದಿರಾ ಗಾಂಧಿಯವರು ನಿವಾರಿಸಿದರೆಂದು ವಿಜಯಲಕ್ಷ್ಮಿ ಬಗೆಯುತ್ತಾರೆ. ನೆಹರು ಅವರು ಪ್ರಧಾನಿಯಾಗಿದ್ದ ಕಾಲದ ಅಂತರರಾಷ್ಟ್ರೀಯ ರಾಜಕೀಯ ಸನ್ನಿವೇಶವನ್ನು ಪರಿಶೀಲಿಸಿದರೆ ನೆಹರು ''ಚುರುಕುತನ'' ಪ್ರದರ್ಶಿಸಲು ಇಚ್ಛಿಸಿದರೂ ಅದು ಸಲೀಸಿನ ಕೆಲಸವಾಗುತ್ತಿರಲಿಲ್ಲವೆಂಬುದು ಸ್ವಯಂವೇದ್ಯವಾಗಿದೆ. ಕಾಶ್ಮೀರದ ಪ್ರಶ್ನೆಗೆ ಸಂಬಂಧಿಸಿದಂತೆ ವಿಶ್ವಸಂಸ್ಥೆಯಲ್ಲಿ ಸೋವಿಯತ್ ಒಕ್ಕೂಟದ ಬೆಂಬಲವನ್ನು ಅನಿವಾರ್ಯವಾಗಿ ಪಡೆಯಬೇಕಾಗಿದ್ದ ಭಾರತವು, ಆಗ್ಗೆ ಇನ್ನೂ ವಿಶ್ವಸಂಸ್ಥೆಯಲ್ಲಿ ಸ್ಥಾನವನ್ನೇ ಹೊಂದಿರದಿದ್ದ ಚೀಣಾದೊಡನೆ ಸಂಬಂಧಗಳನ್ನು ಸಂಕೀರ್ಣಗೊಳಿಸಿಕೊಳ್ಳಲು ಸಾಧ್ಯವಿರಲಿಲ್ಲ; ಏಕೆಂದರೆ, ಚೀಣಾ ಮತ್ತು ಸೋವಿಯೆತ್ ಒಕ್ಕೂಟ ಸೈದ್ಧಾಂತಿಕವಾಗಿ ಮತ್ತು ರಾಜಕೀಯವಾಗಿ ಪರಸ್ಪರರನ್ನು ಬಹಿರಂಗವಾಗಿ ಗುಮಾನಿಯಿಂದ ನೋಡುತ್ತಿರಲಿಲ್ಲ. ಇತ್ತೀಚೆಗೆ ಟಿಬೆಟ್ಟಿನಲ್ಲಿ ಸುಮಾರು ೧೫೦೦ ಕಿಲೋಮೀಟರುಗಳಷ್ಟು ಪ್ರಯಾಣ ಕೈಗೊಂಡಿದ್ದ ಶ್ರೀಮತಿ ವಿಜಯಲಕ್ಷ್ಮಿಯವರ ಇನ್ನೊಂದು ಅನುಭವ ಗಮನಾರ್ಹ ವಾಗಿದೆ : ಅವರು ಪ್ರಯಾಣಿಸಿದ ವಾಹನದ ಚಾಲಕ ಯಾವಾಗಲೂ ಟಿಬೆಟ್ಟಿನ ಆಧುನಿಕ ಪಾಪ್ ಗಾಯನದ ಮುದ್ರಿಕೆಗಳನ್ನು ಕೇಳಿಸುತ್ತಿದ್ದ. ಅದು ಭಾರತದಲ್ಲಿ ನೆಲೆಸಿರುವ ಟಿಬೆಟನ್ನರ ನಿರ್ಮಿತಿಯೇ ಎಂದು ಕೇಳಲಾಗಿ ಆತ ಸಿಟ್ಟಿಗೆದ್ದ. ಅವನ ಇಂಗಿತಾರ್ಥ ಸ್ಪಷ್ಟ ವಾಗಿತ್ತು : ಹೊರ ದೇಶಗಳಲ್ಲಿ ನೆಲೆಸಿರುವ ಟಿಬೆಟನ್ನರು ಇಲ್ಲಿದ್ದಾಗಲೂ ತಂಪಾಗಿದ್ದರು, ಹೊರಹೋಗಿರುವಾಗಲೂ ತಂಪಾಗಿಯೇ ಇದ್ದಾರೆ; ನಾವು, ಅಂದರೆ ಇಲ್ಲೇ ಉಳಿದಿರುವ ಟಿಬೆಟನ್ನರು, ಅಂದಿನ ಕಷ್ಟಗಳನ್ನು ಪೂರ್ತಿಯಾಗಿ ಬಗೆಹರಿಸಿಕೊಳ್ಳದೆ ಇಂದೂ ತೊಳಲಾಡುತ್ತಲೇ ಇದ್ದೇವೆ. ದಲೈಲಾಮಾರ ಜೊತೆ ಹೋದ ಟಿಬೆಟನ್ನರು ವರ್ಷಕ್ಕೆ ಒಂದೆರಡು ಬಾರಿ ಯಾವುದಾದರೂ ಪ್ರತಿಭಟನಾ ಮೆರವಣಿಗೆ ನಡೆಸಿದರೆ ಅವರ ಕೆಲಸ ಮುಗಿಯಿತು; ಆದರೆ ಇಲ್ಲೇ ಉಳಿದಿರುವ ಟಿಬೆಟನ್ನರು ಜೀವನ ಹೊರೆಯಲು ಅದೆಷ್ಟು ಪ್ರಯಾಸ ಪಡಬೇಕೆಂಬುದು ಅವರಿಗೇನು ತಿಳಿಯುತ್ತದೆ ! ಅಂತಹ ಸನ್ನಿವೇಶದಲ್ಲಿ ನಾವೇ ಆಧುನಿಕ ಸಂಗೀತವನ್ನೂ ರೂಢಿಸಿಕೊಂಡಿದ್ದೇವೆ, ತಿಳಿಯಿತೆ ?

ಸುಮಾರು ಇಪ್ಪತ್ತೈದು ವರ್ಷಗಳ ಹಿಂದಿನ ಟಿಬೆಟ್ಟಿಗೆ ಹೋಲಿಸಿದರೆ ಇಂದಿನ ಟಿಬೆಟ್ಟಿಗೆ ವಿದೇಶಗಳಿಂದ ಹೆಚ್ಚಿನ ಪ್ರವಾಸಿಗರು ಹೋಗುತ್ತಿದ್ದಾರೆ. ಮಾನಸ ಸರೋವರ - ಕೈಲಾಸ ಪರ್ವತಕ್ಕೆ ಹಿಂದೆ ಒಂದು ವರ್ಷದಲ್ಲಿ ಹೋಗುತ್ತಿದ್ದ ಭಾರತೀಯರ ಸಂಖ್ಯೆ ಸುಮಾರು ೨೫೦, ಈಗ ಅದು ಎರಡು ಸಾವಿರಕ್ಕೂ ಹೆಚ್ಚು. ಅದರಿಂದಾಗಿ ಆ ಪ್ರದೇಶದಲ್ಲಿ ಹತ್ತಾರು ಬಗೆಯ ವ್ಯಾಪಾರಕ್ಕೆ ಅವಕಾಶ ವಾಗಿದೆ, ನೂರಾರು ಮಂದಿ ಟಿಬೆಟನ್ನರು ಇದರಲ್ಲಿ ತೊಡಗಿಕೊಂಡಿದ್ದಾರೆ ಮತ್ತು ಪ್ರವಾಸಿಗಳಿಗೂ ಮೊದಲಿಗಿಂತ ಹೆಚ್ಚಿನ ಸೌಲಭ್ಯಗಳು ಸಿಗುತ್ತಿವೆ. ಅದರೊಟ್ಟಿಗೆ ಭಕ್ತರಿಂದಾಗಿ ಪರಿಸರದ ಹಾನಿಯೂ ಪ್ರಾರಂಭವಾಗಿದೆ. ಮಾನಸ ಸರೋವರದೊಳಕ್ಕೆ ಪ್ಲಾಸ್ಟಿಕ್ ಚೀಲಗಳನ್ನು ಎಸೆಯುವವರು ಈ ಭಕ್ತರಲ್ಲದೆ ಇನ್ನಾರೂ ಅಲ್ಲ. ಅವರು ಹೊತ್ತಿಸುವ ಎಣ್ಣೆಯ ಹೂಬತ್ತಿಗಳು ಗಾಳಿಗೆ ಆರಿಹೋದಾಗ ಅವನ್ನು ಹಿಡಿ ಹಿಡಿಯಾಗಿ ಸರೋವರದೊಳಕ್ಕೆ ತೇಲಿಬಿಡುವವರೂ ಈ ಭಕ್ತರೇ. ಮಳೆಗಾಲದಲ್ಲಿ ಸರೋವರದ ಅಂಚಿನಿಂದ ಅದೆಷ್ಟು ಮಾನವ ವಿಸರ್ಜನೆಯು ಮಾನಸ ಸರೋವರವನ್ನು ಸೇರಿಕೊಳ್ಳುತ್ತದೋ ಲೆಕ್ಕವಿಟ್ಟವರಾರು ! ಚೀಣಾ ಸರ್ಕಾರವು ಪ್ರವಾಸಿಗರು ಮತ್ತು ಯಾತ್ರಿಗಳಿಂದ ಹೇರಳವಾಗಿ ಹಣವನ್ನು ಪಡೆಯುತ್ತದೆ; ಆದರೆ ಅತ್ಯಗತ್ಯವಾದ ಸೌಲಭ್ಯಗಳನ್ನೂ ಕಲ್ಪಿಸಿಲ್ಲ. ನೇಪಾಳದ ಗಡಿಯಿಂದ ಕೈಲಾಸ ಪರ್ವತದವರೆಗೆ ಪ್ರವಾಸಿಗರು ನಾಲ್ಕಾರು ದಿನ ತಂಗುವ ಸ್ಥಳಗಳಲ್ಲಿ ಎಲ್ಲೂ ಹೇಳಿಕೊಳ್ಳಬಹುದಾದಂತಹ ಒಂದು ಶೌಚಾಲಯವನ್ನು ನಿರ್ಮಿಸಿಲ್ಲದಿರುವುದು ಚೀಣಾ ಸರ್ಕಾರದ ಕ್ಷಮಾರ್ಹವಲ್ಲದ ಒಂದು ಲೋಪ. ಪ್ರವಾಸಿಗರಿಗೆ ಇಲ್ಲದ್ದು ಅಲ್ಲಿಯ ನಿವಾಸಿಗಳಿಗೆ ಇರಬಲ್ಲುದೆ ? ದಾರಿಯಲ್ಲಿರುವ ಜನವಸತಿಗಳು, ಊರುಗಳು, ಕಡಿಮೆ; ಆದರೆ ಅವು ಇರುವಲ್ಲೆಲ್ಲಾ ಟಿಬೆಟ್ಟಿನ ಮಕ್ಕಳು, ಹೆಂಗಸರು, ವೃದ್ಧರು, ಎಲ್ಲಾ ಪ್ರವಾಸಿಗರನ್ನು ಮುತ್ತಿ ಭಿಕ್ಷೆ ಬೇಡುತ್ತಾರೆ. ಹಿಂದೆ ಇದ್ದ ಕೆಲವು ಊರುಗಳು ಈಗ ಇಲ್ಲವಾಗಿವೆ; ಉದಾಹರಣೆಗೆ, ಬಾರ್ಖಾ ಎಂಬ ಊರು. ಅಲ್ಲೀಗ ಒಂದು ಸರ್ಕಾರಿ ಕಟ್ಟಡ ಬಿಟ್ಟರೆ ಬೇರೇನೂ ಇಲ್ಲ. ಸಾಗಾ ಬಿಟ್ಟರೆ ಬೇರೆಲ್ಲೂ ಯಾವ ಉದ್ಯಮಗಳೂ ಗೋಚರವಾಗುವುದಿಲ್ಲ. ಶಾಲೆಗಳು ಇಲ್ಲವೇ ಇಲ್ಲವೆನ್ನುವಷ್ಟು ವಿರಳ. ಸಾಗಾದಲ್ಲಿ ಬೃಹತ್ತಾದ ಕಟ್ಟಡದಲ್ಲಿ ಶಾಲೆ ಇದೆ, ಆದರೆ ಅಲ್ಲಿಗೆ ಬರುವ ಮಕ್ಕಳ ಬಟ್ಟೆ ಮತ್ತು ಪುಸ್ತಕಗಳು ಹರಿದು ಚಿಂದಿಯಾಗುವುದಷ್ಟೇ ಬಾಕಿ ಎನ್ನುವಂತೆ ತೋರುತ್ತದೆ. ಕುರಿಗಳ ಹಾಗೂ ಯಾಕ್‌ಗಳ ಪಾಲನೆಯೇ ಮೂಲ ಕಸುಬಾದ ಜನಗಳಿಗೆ ಹೊಸ ಅಧ್ಯಾಯ ಆರಂಭವಾಗುವುದೆಂದು ? ಪ್ರವಾಸಿಗರು ಬರುತ್ತಾರೆಂದು ಪ್ರದರ್ಶನಕ್ಕಾದರೂ ಟಿಬೆಟ್ಟಿನ ಈ ಭಾಗವನ್ನು ಅಂದವಾಗಿಟ್ಟಿಲ್ಲದಿರುವುದು ಒಂದು ವಿಶೇಷ ಎನ್ನಬಹುದು. ಹಾಗೆ ನೋಡಿದರೆ ಮಿಲರೇಪನ ಹಳ್ಳಿ ಹೆಚ್ಚು ಸಮೃದ್ಧವಾಗಿದೆ.

ವಿಶ್ವದಲ್ಲಿ ಆರ್ಥಿಕ ಬೆಳೆವಣಿಗೆಗೆ ಹೆಸರಾಗಿರುವ ಚೀಣಾದಲ್ಲಿ ಹೀಗೇಕೆ ಎಂಬ ಪ್ರಶ್ನೆ ಹೆಜ್ಜೆ ಹೆಜ್ಜೆಗೂ ಕಾಡುತ್ತದೆ; ಬೀಜಿಂಗ್, ಷಾಂಘೈ ಮುಂತಾದ ನಗರಗಳು ಶೋಭಿಸುವ ರೀತಿಯಲ್ಲಿ ಚೀಣಾದ ಹಳ್ಳಿಗಳು ಶೋಭಿಸುತ್ತಿಲ್ಲವೇನೋ ಎಂಬ ಶಂಕೆ ಮೂಡುತ್ತದೆ. ಅಗಾಧ ಅಭಿವೃದ್ಧಿಯ ಮಧ್ಯದಲ್ಲಿ ಟಿಬೆಟ್ಟಿನ ಈ ಪ್ರಸ್ಥಭೂಮಿ ಮಾತ್ರ ಮರುಭೂಮಿಯಾಗಿದ್ದರೆ ಅದಕ್ಕೂ ಒಂದು ವಿವರಣೆ ಅಗತ್ಯ. ಇಲ್ಲದಿದ್ದರೆ ಚೀಣಾದ ಅನಭಿವೃದ್ಧ ಮರುಭೂಮಿಯಲ್ಲಿ ಒಂದಷ್ಟು ಓಯೆಸಿಸ್‌ಗಳು ಕಂಗೊಳಿಸುತ್ತಿರುವುವೋ ಎಂಬ ಖಿನ್ನತೆ ಆವರಿಸಿಬಿಡುತ್ತದೆ. ದಲೈಲಾಮಾ ಮತ್ತು ಆತನ ಸಹಚರರು ಹಾಗೂ ಅನುಯಾಯಿಗಳು ಮೊದಲು ಟಿಬೆಟ್ಟಿಗೆ ಹಿಂದಿರುಗಿ ಅಲ್ಲಿಯ ಜನರ ಜೀವನವನ್ನು ಇನ್ನಷ್ಟು ಸಹ್ಯವಾಗಿಸಲು ಯತ್ನಿಸಿಯಾರೆ ? ಹಾಗೇನಾದರೂ ಮಾಡಿದರೆ ಭಾರತೀಯ ಪ್ರವಾಸಿಗಳು ತೆರಳುವ ಹಾದಿಯಲ್ಲಿ ಒಂದೆರಡು ಕಡೆ ಕಾಣಸಿಗುವ ಚೀಣಾದ ಪೊಲೀಸ್ ಅಧಿಕಾರಿಗಳು ಗಂಟುಮುಖಗಳನ್ನು ಸ್ವಲ್ಪ ಸಡಿಲಿಸಿ ಮಾನವ ಸಹಜ ನಗೆಮುಖಗಳನ್ನು ಪ್ರದರ್ಶಿಸಿಯಾರೋ ಏನೋ ! ಸದ್ಯಕ್ಕಂತೂ ಅವರ ಬಿಗಿತನವು ಸ್ನೇಹದ ವಾತಾವರಣವನ್ನು ನಿರ್ಮಿಸುತ್ತಿಲ್ಲ ಮತ್ತು ಪ್ರವಾಸಿಗರ ಕಣ್ಣಿಗೆ ಕಾಣುವ ಟಿಬೆಟ್ ಅಷ್ಟೇನೂ ಚೇತೋಹಾರಿಯಾಗಿಲ್ಲ. ಐವತ್ತು ವರ್ಷಗಳಲ್ಲಿ ಚೀಣಾದ ಸಮಾಜವಾದ ಕೊಟ್ಟಿರುವುದು ಇಷ್ಟೇ ಏಕೆ ಎನ್ನುವ ಪ್ರಶ್ನೆ ಬಗೆಹರಿಯುವುದಿಲ್ಲ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಮಿತ್ರ ಜಿ.ಕೆ. ಗೋವಿಂದರಾಯರ**
**ಕಸಾಯಿಖಾನೆಯ ಸುತ್ತಮುತ್ತ**
**ಜುಲೈ ಸಂಚಿಕೆ**

**ಕ**ಸಾಯಿಖಾನೆಯ ಒಳಹೋಗುವುದಿರಲಿ, ಅದರ ನೆನಪು ಮಾಡಿಕೊಳ್ಳುವುದೂ ಅಸಹ್ಯವೆನಿಸುತ್ತದೆ. ಕಸಾಯಿಖಾನೆ ಎಂದರೆ ಒಂದು ಕೊಳೆಗೇರಿ. ಊಹಿಸ ಲಾರದಷ್ಟು ಕೊಳಕು ಪ್ರದೇಶ. ಅಲ್ಲಿ ಕೆಲಸ ಮಾಡುವ ವರನ್ನು ಕಟುಕರೆಂದು ಕರೆಯುತ್ತಾರೆ. ಅದು ನೂರಕ್ಕೆ ನೂರು ಸತ್ಯ. ಹೊಟ್ಟೆಪಾಡು ಎಂತೆಂತಹ ಅಸಹ್ಯ ಕೆಲಸಗಳನ್ನು ಮಾಡಲು ತೊಡಗಿಸುತ್ತದೆ !

ಕಸಾಯಿಖಾನೆಯ ಮೇಲ್ವಿಚಾರಣೆಯ ಹೊಣೆಗಾರಿಕೆ ಅಲ್ಲಲ್ಲಿಯ ಕಾರ್ಪೊರೇಷನ್ ಮತ್ತು ಮುನಿಸಿ ಪಾಲಿಟಿಯದು. ಅಲ್ಲಿಯ ಹೆಲ್ತ್ ಆಫೀಸರ್ ಮೇಲ್ವಿ ಚಾರಣೆಯಲ್ಲಿ ಕಸಾಯಿಖಾನೆ ಕೆಲಸ ನಿರ್ವಹಿಸಬೇಕು. ಹೆಲ್ತ್ ಆಫೀಸರ್ ಆಗಲಿ ಪಶುವೈದ್ಯ ಇಲಾಖೆಯವ ರಾಗಲಿ ಕಸಾಯಿಖಾನೆ ಒಳಕ್ಕೆ ಕಾಲಿಟ್ಟಿದ್ದು ಇಲ್ಲವೇ ಇಲ್ಲ. ಅವರಿಂದ ನೇಮಿತನಾದ ನೌಕರನೂ ಎಂದೂ ಕಸಾಯಿಖಾನೆ ಒಳಹೊಕ್ಕಿದ್ದಿಲ್ಲ. ಅದಕ್ಕೆ ಕಾರಣ ಅಲ್ಲಿಯ ಕೊಳಕು, ದುರ್ಗಂಧ ಮತ್ತು ವಧೆ ಮಾಡಲಾದ ಪ್ರಾಣಿಯ ರಕ್ತ, ಮಾಂಸ, ಹೊಲಸು ಇವುಗಳ ಹರಹು.

ಇಷ್ಟು ಹೊಲಸಾಗಿ ಇಡಲಾಗಿರುವ ಕಸಾಯಿ ಖಾನೆಯನ್ನು ಆಗಾಗ ಸಂದರ್ಶಿಸಿ ಆರೋಗ್ಯ ದೃಷ್ಟಿಯಿಂದ ಶುಚಿಯಾಗಿಡಲು ತಾಕೀತ್ ಮಾಡುವುದು ಅಧಿಕಾರಿಗಳ ಕೆಲಸ ಅಲ್ಲವೇ ? ಆದರೆ ಯಾರೂ ಎಂದೂ ಈ ಪುಣ್ಯದ ಕೆಲಸ ಮಾಡಿದ್ದಿಲ್ಲ. ಅದಕ್ಕೆ ಕಾರಣ ? ಪ್ರತಿತಿಂಗಳೂ ಮಾಮೂಲನ್ನು ಅಧಿಕಾರಿಗಳಿಗೆ ಕಸಾಯಿಖಾನೆ ನಿರ್ವಹಿಸುವವನು ಕೊಡುವುದು. ''ನೀವು ಆಗಾಗ ಕಸಾಯಿಖಾನೆಗೆ ಭೇಟಿ ನೀಡಿ ತಪಾಸಣೆ ಮಾಡುವುದಿಲ್ಲವೇ?'' ಎಂದು ನನ್ನ ಮಿತ್ರರಾದ ಒಬ್ಬ ಪಶುವೈದ್ಯ ಇಲಾಖೆಯ ಅಧಿಕಾರಿಯನ್ನು ಕೇಳಿದೆ. ''ನಿಜ ಹೇಳಬೇಕೆಂದರೆ ನಾವು ಯಾರೂ ಎಂದೂ ನರಕ ಸದೃಶವಾದ ಕಸಾಯಿಖಾನೆ ಒಳಗೆ ಹೋಗಿಲ್ಲ. ಆ ಕೊಳಕಿನ ಸ್ಥಳಕ್ಕೆ ಹೋಗುವುದಾದರೂ ಹೇಗೆ ? ಆದರೆ ನಾವು ಕ್ರಮವಾಗಿ ಅದನ್ನು ಸಂದರ್ಶಿಸಿದ ವರದಿಯನ್ನು ಸಿದ್ಧ ಮಾಡಿ ಇಡುವುದನ್ನು ಮರೆಯುವುದಿಲ್ಲ'' ಎಂದರು.

ಕಸಾಯಿಖಾನೆಯಲ್ಲಿ ವಧೆಯಾಗುವ ಹಸು, ಎಮ್ಮೆ ಇವು ನಿಷ್ಪ್ರಯೋಜಕವಾಗಿರಬೇಕು ಅಥವಾ ಮುದಿ ಯಾಗಿರಬೇಕು ಎಂದು ಕಾನೂನು ಹೇಳುತ್ತದೆ. ಮುದಿ ಹಸು ಕೊಂದರೆ ಚರ್ಮ ಸಿಗಬಹುದು, ಮೂಳೆ ಸಿಗಬಹುದು; ಮಾಂಸ ಎಲ್ಲಿ ಸಿಗುತ್ತೆ ? ಆದ್ದರಿಂದ ದಷ್ಟ ಪುಷ್ಟವಾದುವನ್ನೇ ಕೊಲ್ಲಬೇಕಾದ್ದು ಅನಿವಾರ್ಯ. ಆದರೆ ಕಾನೂನು ಹೇಳುತ್ತದೆ, ಮುದಿಯಲ್ಲದ ಹಸುಗಳನ್ನು, ಎಮ್ಮೆಗಳನ್ನು ಮಾಂಸಕ್ಕಾಗಿ ಕೊಲ್ಲುವುದು ಅಪರಾಧ ಎಂದು. ಅದರಂತೆಯೇ ಯಾವುದೇ ಕಾರಣಕ್ಕೆ ಹಸು ಮತ್ತು ಎಮ್ಮೆಯ ಕರುಗಳನ್ನು ಕೊಲ್ಲುವುದು ಸಹ ಅಪರಾಧ. ಈ ಅಪರಾಧ ಎಸಗುವವರಿಗೆ ಕರ್ನಾಟಕ ಸರ್ಕಾರ ಎರಡು ವರ್ಷಗಳ ಕಠಿಣ ಸಜೆ ವಿಧಿಸಿದರೆ, ಕಾಶ್ಮೀರದಲ್ಲಿ ೧೦ ವರ್ಷಗಳ ಕಠಿಣ ಶಿಕ್ಷೆ ವಿಧಿಸುವ ಕಾನೂನು ಜಾರಿಯಲ್ಲಿದೆ. ದಷ್ಟಪುಷ್ಟವಾದ ಹಸು ಅಥವಾ ಎಮ್ಮೆಯ ಒಂದು ಕಾಲನ್ನು ಕಡಿದು, ಹೆಲ್ತ್ ಆಫೀಸರ್ ಮುಂದೆ ಹಾಜರ್ಪಡಿಸುವುದು ಈಗಿನ ಒಂದು ಉಪಾಯ. ಯಾವುದೋ ಬೇಲಿಯಲ್ಲಿ ನುಗ್ಗಿ ಸಿಕ್ಕಿಹಾಕಿ ಕೊಂಡು ಹೊರಬರುವಾಗ ಕಾಲಿಗೆ ಜಖಂ ಮಾಡಿ ಕೊಂಡಿದೆ ಎಂದು ಸಬೂಬು ಹೇಳುತ್ತಾರೆ. ಆರೋಗ್ಯಾಧಿ ಕಾರಿ ಒಂದು ರಾಸಿಗೆ ೨೦-೩೦ರೂ. ಲಂಚ ಪಡೆದು




ಅದು ವಧೆಗೆ ಯೋಗ್ಯವಾದದ್ದೆಂದು ಪರವಾನಗಿ ಕೊಡುತ್ತಾನೆ. ಬಂಜೆಯಾಗಿದೆ, ಕರುಹಾಕುವುದು ನಿಂತು ಹೋಗಿದೆ, ಹೀಗಾಗಿ ನಿಷ್ಪ್ರಯೋಜಕವಾಗಿದೆ ಎಂದು ಸುಳ್ಳು ಸರ್ಟಿಫಿಕೇಟ್ ಕೊಡುತ್ತಾನೆ.

ಕರ್ನಾಟಕದಲ್ಲಿ ಒಳ್ಳೆಯ ಕಾನೂನು ಚಾಲ್ತಿಯಲ್ಲಿ ದ್ದರೂ ಅದು ಅನುಷ್ಠಾನದಲ್ಲಿಲ್ಲ. ಅದಕ್ಕೆ ಕಾರಣ ವ್ಯಾಪಕ ಭ್ರಷ್ಟಾಚಾರ. ಸುಳ್ಳು ಸರ್ಟಿಫಿಕೇಟ್ ಕೊಡುವುದು ಒಂದು ಕುಶಲಕಲೆಯಾಗಿದೆ ಕರ್ನಾಟಕದಲ್ಲಿ. ಇದಲ್ಲದೆ ಪ್ರತಿ ದಿನವೂ ದಷ್ಟಪುಷ್ಟವಾದ ಹಸು ಎಮ್ಮೆಗಳನ್ನು ಕೇರಳಕ್ಕೋ, ನೀಲಗಿರಿಗೋ ಸಾಗಿಸುವ ದಂಧೆಯೂ ನಡೆದಿದೆ. ಈ ಹಸು ಎಮ್ಮೆಗಳನ್ನು ಸಂತೆಗಳಲ್ಲಿ ಕೊಂಡು ಅವುಗಳನ್ನು ಸಾಗಿಸಲು ಜನರನ್ನು ನೇಮಿಸಲಾಗುತ್ತದೆ. ಈ ಕೂಲಿ ಆಳುಗಳು, ಬಾಡಿಗೆ ಭಂಟರು. ಆ ರಾಸುಗಳಿಗೆ ನೀರು ಆಹಾರ ಯಾವುದನ್ನೂ ನೀಡದೆ ನೂರಾರು ಮೈಲಿ ದೂರದ ಕೇರಳಕ್ಕೆ ಕಾಲು ನಡಿಗೆಯಲ್ಲೇ ಸಾಗಿಸುತ್ತಾರೆ. ಇಂತಹ ರಾಸುಗಳನ್ನು ಕೆಲವು ವೇಳೆ ಪೊಲೀಸರು ತಡೆಯುತ್ತಾರೆ. ಆಗ ಅವರಿಗೆ ರಾಸಿಗೆ ಐದು ರೂಪಾಯಿ ನಂತೆ ನೀಡಿ, ಅವರ ಬಾಯಿ ಮುಚ್ಚಿಸುತ್ತಾರೆ. ದಾರಿಯಲ್ಲಿ ಒಂದು ವೇಳೆ ಜನರೇ ಈ ಸಾಗಿಸುವವರನ್ನು ರಾಸು ಸಮೇತ ಹಿಡಿದುಕೊಟ್ಟರೆ ಪೊಲೀಸಿನವರು ಅವನ್ನೆಲ್ಲ ತಮ್ಮ ವಶಕ್ಕೆ ತೆಗೆದುಕೊಂಡ ಪ್ರಹಸನ ಮಾಡುತ್ತಾರೆ. ಎರಡು ದಿನ ಪೊಲೀಸ್ ಠಾಣೆಯ ಮುಂದೆ ಕಟ್ಟಿಹಾಕಿ ಹುಲ್ಲು ನೀರು ನೀಡಿ, 'ಕೇಸು ಹಾಕಿದರೆ, ತೀರ್ಪು ಬರುವ ವರೆಗೆ ಈ ರಾಸುಗಳಿಗೆ ಆಹಾರ ಒದಗಿಸಲು ನಮಗೆ ಹಣವನ್ನು ಇಲಾಖೆ ನೀಡುವುದಿಲ್ಲ' ಎಂದು ಕಾರಣ ಹೇಳಿ, ಕೈತೊಳೆದು ಕೊಳ್ಳುತ್ತಾರೆ. ರಾಸುಗಳು ಮುಂದಕ್ಕೆ ಸಾಗುತ್ತವೆ.

ಇತ್ತೀಚೆಗೆ ಯಂತ್ರಚಾಲಿತ ವಧಾಗೃಹಗಳು ಎಲ್ಲ ಪ್ರಾಂತಗಳಲ್ಲೂ ತಲೆಯೆತ್ತಿವೆ. ಮುಂಬಯಿನಲ್ಲಿ ಇಂತಹ ಒಂದು ವಧಾಗೃಹ ಇದೆ. ಅಲ್ಲಿಗೆ ಟ್ರಕ್ಕುಗಳಲ್ಲಿ ಮಧ್ಯ ಪ್ರದೇಶ, ಉತ್ತರ ಪ್ರದೇಶಗಳಿಂದ ದಷ್ಟಪುಷ್ಟವಾದ ಸೀಮೆ ಹಸುಗಳು ಟ್ರಕ್ಕುಗಳಲ್ಲಿ ಬರುತ್ತವೆ. ಒಂದು ಟ್ರಕ್ಕಿನಲ್ಲಿ ಒಮ್ಮೆಗೇ ಮೂರು ಭಾರಿ ಹಸುಗಳನ್ನು ಸಾಗಿಸುತ್ತಾರೆ. ಟ್ರಕ್ ವಧಾಸ್ಥಾನಕ್ಕೆ ಬಂದೊಡನೆ ಎತ್ತರದ ಒಂದು ಸ್ಥಳದಲ್ಲಿ ಟ್ರಕ್ಕನ್ನು ನಿಲ್ಲಿಸಿ ಬೊಂಬುಗಳ ಸಹಾಯದಿಂದ ಈ ಹಸುಗಳನ್ನು ಹೊರಕ್ಕೆ ದಬ್ಬುತ್ತಾರೆ. ಈ ದಬ್ಬುವ ಅವಾಂತರದಲ್ಲಿ ಅವುಗಳ ಕಾಲು ಮುರಿದು ಹೋಗುವುದೂ ಉಂಟು. ವಧಾಸ್ಥಾನಕ್ಕೆ ಇವುಗಳನ್ನು ಸಾಗಿಸುವ ಮೊದಲು ಮುಂಬಯಿ ಗೌಳಿಗರು ಅವುಗಳ ಹಾಲನ್ನು ಕರೆದುಕೊಳ್ಳುತ್ತಾರೆ. ಆ ಹಸುಗಳು ಒಂದೊಂದು ೫-೬ ಲೀಟರ್ ಹಾಲು ಕರೆದದ್ದನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ಈ ಕಸಾಯಿಖಾನೆಯಲ್ಲಿ ಹಸು ಗಳನ್ನು ಯಂತ್ರದ ಮುಂದೆ ನಿಲ್ಲಿಸಿ ಹಣೆಗೆ ಸುತ್ತಿಗೆಯಿಂದ ಒಂದು ಬಲವಾದ ಏಟು ಕೊಡುತ್ತಾರೆ. ಅದರ ಜ್ಞಾನ ತಪ್ಪುತ್ತದೆ. ಯಂತ್ರದೊಳಕ್ಕೆ ಹೋದ ಹಸುವಿನ ಚರ್ಮವನ್ನು ಯಂತ್ರ ಮೊದಲು ಸುಲಿಯುತ್ತದೆ. ಮುಂದಿನ ಹಂತದಲ್ಲಿ ಮೂಳೆಯೆಲ್ಲಾ ಒಂದೆಡೆ ಸಂಗ್ರಹವಾಗುತ್ತದೆ. ರಕ್ತವೆಲ್ಲ ಹರಿದು ಒಂದೆಡೆ ಸಂಗ್ರಹವಾಗುತ್ತದೆ. ಮಾಂಸದ ಮುದ್ದೆ ಮುಂದುವರಿದು ಪ್ಯಾಕ್ ಆಗಿ ಯಂತ್ರದಿಂದ ಹೊರ ಬೀಳುತ್ತದೆ. ಈ ಮಾಂಸ ವಿದೇಶಗಳಿಗೆ ರವಾನೆಯಾಗುತ್ತದೆ.

ಒಟ್ಟಿನಲ್ಲಿ ಕಸಾಯಿಖಾನೆಯ ವ್ಯವಹಾರ ಬರ್ಬರ; ಲಂಚ ರುಷುವತ್ತು ಇಲ್ಲಿ ಹೆಜ್ಜೆ ಹೆಜ್ಜೆಗೂ ವಿಜೃಂಭಿಸುತ್ತದೆ. ಸ್ಥಳೀಯ ಸಂಸ್ಥೆಯ ಆರೋಗ್ಯ ಅಧಿಕಾರಿಗಳು, ಪಶು ವೈದ್ಯಾಧಿಕಾರಿಗಳು, ಪೊಲೀಸರು ಎಲ್ಲರೂ ಈ ಪಶುಯಜ್ಞ ಕಾರ್ಯದಲ್ಲಿ, ಈ ಸುಲಿಗೆ ಯಾಗದಲ್ಲಿ ನಿರಂತರವಾಗಿ ತೊಡಗಿದ್ದಾರೆ. ಗೋ-ಸಂರಕ್ಷಣೆ ಕಾನೂನು ಪುಸ್ತಕದಲ್ಲಿ ವಿಶ್ರಾಂತಿ ಪಡೆಯುತ್ತಿದೆ.

ಬೆಂಗಳೂರು **ಎಚ್. ಎಸ್. ದೊರೆಸ್ವಾಮಿ**

ಬಡವರಿಗೆ ಮತ್ತು ದಲಿತರಿಗೆ ದಕ್ಕುವ ದರದಲ್ಲಿ ಅಗ್ಗವಾಗಿ ದೊರಕುವ ಆಹಾರ ಗೋಮಾಂಸವಾಗಿದೆ. ದಲಿತರಿಗೆ ಕೆಲವೊಮ್ಮೆ ಈ ಮಾಂಸ ಪುಕ್ಕಟೆಯಾಗಿ ದೊರಕುವುದುಂಟು. ಬತ್ತಿಹೋದ ಅಥವಾ ರೋಗ ಗ್ರಸ್ತವಾಗಿ ರಸ್ತೆಗಳಲ್ಲಿ ಅಲೆಮಾರಿಗಳಾಗಿ ಸುತ್ತುತ್ತಿರುವಾಗ ವಾಹನಗಳಿಗೆ ಡಿಕ್ಕಿ ಹೊಡೆದು ಅಥವಾ ಸ್ವಾಭಾವಿಕವಾಗಿ

ಸಾವನ್ನಪ್ಪಿ ನಿರ್ಜನ ಪ್ರದೇಶದಲ್ಲಿ ಕೊಳೆಯುತ್ತಿರುವ ಮುದಿ ದನಗಳ ಮಾಂಸಕ್ಕಾಗಿ ಬಡ ದಲಿತರು ರಣಹದ್ದುಗಳೊಡನೆ ಹೆಣಗಾಡುತ್ತಿರುವ ದೃಶ್ಯ ನಮ್ಮ ದೇಶದಲ್ಲಿ ಸಾಮಾನ್ಯ. ಇಂತಹ ಪಶುಗಳನ್ನು ನಾವು ನಿಕೃಷ್ಟ ದೃಷ್ಟಿಯಿಂದ ನೋಡುತ್ತಿರುವುದರಿಂದ, ಮುದಿ ಮತ್ತು ರೋಗಗ್ರಸ್ತ ದನಗಳ ಮಾಂಸ ಮಾನವನಿಗೆ ಮಾತ್ರವಲ್ಲ ಪ್ರಾಣಿ ಪಕ್ಷಿಗಳಿಗೂ ಅಪಥ್ಯವಾಗುತ್ತದೆ.

ನಮ್ಮ ಕೆಲವು ಸಂಪ್ರದಾಯಗಳು ಮತ್ತು ಭಾವನೆಗಳು ಬಡವರ ಮತ್ತು ದಲಿತರ ಅನ್ನಕ್ಕೆ ಕುತ್ತು ಎಂಬುದನ್ನು ನಾವು ಪ್ರಾಮಾಣಿಕವಾಗಿ ಒಪ್ಪಿಕೊಳ್ಳಬೇಕಾಗಿದೆ.

ಸುರತ್ಕಲ್ **ಟಿ. ಸಿ. ಶ್ರೀಯಾನ್**

## ಬುಷ್ ಮಹಾಶಯನ ಮುಂದಿನ ಗುರಿ

ದೇಶದ ಗೌರವವನ್ನು ಮಣ್ಣುಪಾಲು ಮಾಡಿ ಆತ್ಮಾಭಿಮಾನಕ್ಕೆ ತಿಲಾಂಜಲಿ ಇತ್ತು ನಮ್ಮ ಪ್ರಧಾನಿಗಳು ಭಾರತ ಅಮೆರಿಕಾ ಅಣುಶಕ್ತಿ ಒಪ್ಪಂದಕ್ಕೆ ಸಹಿ ಹಾಕಿದರು. ಅಮೆರಿಕಾದ ಪ್ರಾತಿನಿಧಿಕ ಸದನಗಳಲ್ಲಿ ಸಾಕಷ್ಟು ಚರ್ಚೆಯಾಗಿ ಇದಕ್ಕೆ ಅನುಮತಿ ದೊರೆತಿದೆ. ಆಮೇಲೆ ಎರಡೂ ದೇಶಗಳು ಇದೊಂದು ಐತಿಹಾಸಿಕ ಘಟನೆ ಎಂದು ಪರಸ್ಪರ ಕೊಂಡಾಡಿಕೊಂಡುವು.

ಇಂತಹ ಮಹತ್ವದ ಘಟನೆಯ ಬಗ್ಗೆ ದೇಶದ ಜನತೆಗೆ ಸಂಪೂರ್ಣ ಮಾಹಿತಿ ಎಲ್ಲಿದೆ? ಏನೋ ರಹಸ್ಯ ಒಪ್ಪಂದ ನಡೆದುಹೋಯಿತು. ಸಂಸತ್ತಿನಲ್ಲಿ ಕೆಲವರು ಅಪಸ್ವರ ಎತ್ತಿದರೂ ಪ್ರಧಾನಿಗಳು ಹಾರಿಕೆಯ ಉತ್ತರಗಳನ್ನಿತ್ತರು.

ನಮ್ಮ ದೇಶದ ಅಣುವಿಜ್ಞಾನಿಗಳು ಈ ಒಪ್ಪಂದವನ್ನು ಬಲವಾಗಿ ಖಂಡಿಸಿದರೂ ಅದರ ಪರಿಣಾಮ ಇನ್ನೂ ಸ್ಪಷ್ಟವಾಗಿಲ್ಲ. ಭಾರತದ ಪ್ರಗತಿಯನ್ನು ಸಹಿಸದ, ಇಡೀ ಜಗತ್ತೇ ತಾನಂದಂತೆ ಕುಣಿಯಬೇಕೆಂದು ಸಹ ಬಯಸುತ್ತಿರುವ ನರಹಂತಕ ಬುಷ್ ಭೂತದ ಕೈಗೆ ನಮ್ಮ ಜುಟ್ಟನ್ನು 'ಯಥೇಚ್ಛಸಿ ತಥಾ ಕುರು' ಎಂದು ಹೇಳಿ ಅರ್ಪಿಸಿಬಿಟ್ಟೆವು.

ಅಫಘಾನಿಸ್ಥಾನವನ್ನು ಪುಡಿಗಟ್ಟಿ, ಇರಾಕಿನಲ್ಲಿ ಕೊಳ್ಳಿ ಇಟ್ಟು – ಅದು ಅಲ್ಲಿ ಈಗಲೂ ಉರಿಯುತ್ತಲೇ ಇದೆ – ಲೆಬಾನಿನ ವಿರುದ್ಧ ಇಸ್ರೇಲ್ ಸಾರಿರುವ ಯುದ್ಧಕ್ಕೆ ಪರೋಕ್ಷವಾಗಿಯೂ ಪ್ರತ್ಯಕ್ಷವಾಗಿಯೂ ಸಹಾಯ ಮಾಡುತ್ತಿರುವ ಬುಷ್ ನರಪ್ರೇತನ ಮುಂದಿನ ಗುರಿ ಭಾರತ ಅಂದರೆ ನಾವು ಬೆಚ್ಚಿಬೀಳಬೇಕಾಗಿಲ್ಲ. ಏಕೆಂದರೆ, ಅದಕ್ಕೆ ಬೇಕಾದ ಎಲ್ಲಾ ತಂತ್ರ ಮಂತ್ರಗಳನ್ನು ಆತ ಇಷ್ಟರಲ್ಲೇ ಪೂರ್ವ ತಯಾರಿ ಮಾಡಿಕೊಂಡುಬಿಟ್ಟಿದ್ದಾನೆ.

ಬೆಂಗಳೂರು **ಎಂ.ವಿ. ಭಟ್**

೨೦೦೬ರ ಆಗಸ್ಟ್ 'ಹೊಸತು' ಶ್ರಾವಣಕ್ಕೆ ಬೇಕಾಗುವ ಹೂರಣ ಹೊತ್ತು ಚಿಂತನೆಗೆ ಹೊಸ ಲಹರಿ ಹರಿಸಿದೆ. ಸಂಚಿಕೆಯ ಬಿ. ಆರ್. ಶಶಿಧರ ಅವರ ಬರಹ 'ಜಾಗತೀಕರಣಕ್ಕೆ ಪರ್ಯಾಯ ಭಾರತ ನೀಡಬಲ್ಲದು' ಓದಿಸಿಕೊಂಡುಹೋಯಿತು. ಹಲವು ಪರ್ಯಾಯ ವಿಧಾನಗಳು ನಮ್ಮಲ್ಲಿದ್ದರೂ ಸಹಸ್ರ ಕಣ್ಣುಗಳಿಂದ ಹೊರಮುಖ ಹಾಕಿ ಇಂದಿಗೂ ಕುಳಿತಿದ್ದೇವೆ. ವಿಶ್ವಕ್ಕೆ ನಾವು ಕೊಟ್ಟ ಮಾದರಿಗಳನ್ನು ನಾವೇ ಅನುಸರಿಸದೆ ಬೇರೆಯವರು ಅದನ್ನು ಸಮರ್ಥವಾಗಿ ಬಳಸಿಕೊಂಡು ಬೆಳೆದಿದ್ದಾರೆ. ಗಾಂಧಿವಾದವಾಗಲೀ, ಬೌದ್ಧ ಧರ್ಮವಾಗಲೀ, ನಮ್ಮ ಹಲವಾರು ವಾಸ್ತವಿಕ ಚಿಂತನೆಗಳಿಗೆ ತಳಹದಿ ಹೌದು. ಯುದ್ಧಭೂಮಿಯಲ್ಲಿ ಇರಾನ್ (ರಾಯ್/ಜೈಕುಮಾರ್) ಆರ್ಥಿಕ ರಾಜಕೀಯ ಆಟದಲ್ಲಿ ಅಮೆರಿಕಾದ ಹಿಡಿತಕ್ಕೆ ಸಿಕ್ಕು ಹೇಗೆ ತೃತೀಯ ಜಗತ್ತು ತಲ್ಲಣಗೊಳ್ಳುತ್ತದೆ ಎಂದು ತಿಳಿಸಿದೆ.

'ಕಾಯ ಒಡೆಯಬೇಕು' (ಎಸ್.ಸಿ. ರಂಗನಾಥ) ಎಂಬುದನ್ನು ವಾಸ್ತವಿಕ ನೆಲೆಗಟ್ಟಿನಲ್ಲಿರಲು ಸಂಬೋಧಿಸುತ್ತದೆ. ವಿಚಾರ ಪ್ರಚೋದಕ ಲೇಖನಗಳ ಆಗರ ಹೊಸತು.

ಸೇಡಂ **ಬಿ. ಆರ್. ಅಣ್ಣಾಸಾಗರ್**

### ಜನವರಿ ೨೦೦೭ರ ವಾರ್ಷಿಕ ಸಂಚಿಕೆಯಲ್ಲಿ ಬರೆಯಲು ನಿಮಗೊಂದು ಆಹ್ವಾನ

''ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿ, ಪುಸ್ತಕ, ಘಟನೆ, ಬುದ್ಧಿ-ಭಾವ'' ಇವುಗಳಲ್ಲಿ ಒಂದನ್ನು ಆಯ್ದುಕೊಂಡು ೫೦೦ ಪದಗಳ ಮಿತಿಯಲ್ಲಿ ಲೇಖನ ಬರೆದು ಕಳಿಸಿ. ಸ್ವೀಕೃತವಾದ ಐದನ್ನು ಪ್ರಕಟಿಸಲಾಗುವುದು ಮತ್ತು ಲೇಖಕರಿಗೆ ಪುಸ್ತಕಗಳ ಉಡುಗೊರೆ ಉಂಟು. *ಲೇಖನ ತಲುಪಲು ಗಡುವು :* **ನವೆಂಬರ್ ೧೦, ೨೦೦೬.**

*೩ನೇ ಪುಟದಿಂದ (ಈ ತಿಂಗಳು)*

ಹೋಲಸಾಗಿದೆ. ನಮ್ಮ ರಾಜ್ಯದ ಮುಖ್ಯಮಂತ್ರಿ, ಇತರ ಸಚಿವರು, ಮಾಜಿ ಪ್ರಧಾನಿ ದೇವೇಗೌಡ, ಜನಾರ್ದನ ರೆಡ್ಡಿ, ಸಿದ್ದರಾಮಯ್ಯ ಮುಂತಾದವರ ರಾಜಕೀಯ ನಿಕೃಷ್ಟತೆಯನ್ನು ಗಮನಿಸಿದಾಗ ಪ್ರಜಾಪ್ರಭುತ್ವ ಎಲ್ಲಿ ಹೂತುಹೋಗಿದೆ ಎಂಬ ವಿಷಾದದ ಛಾಯೆ ಗಾಢವಾಗಿ ನಮ್ಮನ್ನಾವರಿಸುತ್ತದೆ. ಶಾಸಕರಲ್ಲಿ ಅಸಮಾಧಾನವಿದ್ದರೆ ಅದು ಸಿದ್ಧಾಂತಕ್ಕೆ ಸಂಬಂಧಪಟ್ಟಿದ್ದಲ್ಲ; ದೋಚುವ ಪವಿತ್ರ ಕಾರ್ಯದಲ್ಲಿ ತಮಗೆ ಪಾಲ್ಗೊಳ್ಳುವಿಕೆ ಇಲ್ಲವಲ್ಲಾ ಎಂಬುದು ಕೆಲವು ಶಾಸಕರ ಕೋಪತಾಪಕ್ಕೆ ಕಾರಣವೆಂದು ಗುರುತಿಸಲಾಗಿದೆ. ಆಗಸ್ಟ್ ತಿಂಗಳು ಕಳೆದಿದ್ದರೂ ಇನ್ನೂ ಎರಡು ವೈದ್ಯಕೀಯ ಕಾಲೇಜುಗಳನ್ನು ಈ ವರ್ಷವೇ ತೆರೆಯುವುದಾಗಿ ಹೇಳುತ್ತಿರುವ ಕುಮಾರಸ್ವಾಮಿಯವರ ಠಕ್ಕು ನಮ್ಮ ಶಾಸಕರಿಗೆ ಅಪಥ್ಯವೆನಿಸುವುದಿಲ್ಲ; ಕೃಷಿ ಭೂಮಿ ಕಳೆದುಹೋಗುತ್ತಿದೆಯೆಂದು ಮರುಕ ಹುಟ್ಟುವುದಿಲ್ಲ; ಕಾನೂನುಬಾಹಿರ ಕೃತ್ಯಗಳಿಂದ (ಗಣಿಗಾರಿಕೆ, ಇತ್ಯಾದಿ) ರಾಜ್ಯವು ಕ್ಷೀಣಿಸುತ್ತಿದೆಯೆಂದು ಪರಿತಾಪವಿಲ್ಲ. ಇದು ಪ್ರಜಾಪ್ರಭುತ್ವದ ಭದ್ರತೆಗೆ ಹಾಗೂ ವಿಕಾಸಕ್ಕೆ ಹಾದಿಯಲ್ಲ. ಯಾವ ಮೇಲು ಸೇತುವೆಯ ಅನಗತ್ಯ ಹಾಗೂ ಅಸಾಧ್ಯ ನಿರ್ಮಾಣದಿಂದ ಎಷ್ಟು ಹಣ ದೋಚಬಹುದು ಎಂಬುದು ಕಾರ್ಯಸೂಚಿಯಾದಾಗ ಪ್ರಜಾಪ್ರಭುತ್ವಕ್ಕೆ ಅರ್ಥ ಉಳಿಯುವುದಿಲ್ಲ. ದೂರದ ಅಮೆರಿಕಾಕ್ಕೆ ಐವತ್ತು ಮಂದಿ ಸಾಹಿತಿ-ಕಲಾವಿದರನ್ನು ಸಾಂಸ್ಕೃತಿಕ ರಾಯಭಾರಿಗಳನ್ನಾಗಿ ದೂಡಲು ರಾಜ್ಯದ ಬೊಕ್ಕಸದಿಂದ ಐವತ್ತು ಲಕ್ಷವೋ ಕೋಟಿಯೋ ರೂಪಾಯಿಗಳನ್ನು ವ್ಯಯಮಾಡುವುದು ಸಂಸ್ಕೃತಿಯ ರಕ್ಷಣೆಯೂ ಅಲ್ಲ, ಪ್ರಜಾಪ್ರಭುತ್ವದ ಕ್ರಮವೂ ಅಲ್ಲ. ಅದೇ ಹಣದಲ್ಲಿ ಹತ್ತಿರದ ಎಷ್ಟು ಹಳ್ಳಿಗಳಿಗೆ ಸಾಂಸ್ಕೃತಿಕ ಜೀವನದ ಸೊಗಡನ್ನು ತಲುಪಿಸಬಹುದೆಂದು ಯೋಚಿಸುವುದು ಉತ್ತಮ ಪ್ರಜಾಪ್ರಭುತ್ವದ ಲಕ್ಷಣ ಎನಿಸಿಕೊಂಡೀತು. ಸಾರ್ವಜನಿಕ ಸಂಪತ್ತಿನ ಅಪವ್ಯಯ ಅಥವಾ ದುರ್ವ್ಯಯ ಆಗುವ ಮೊದಲೇ ಲಗಾಮು ಹಾಕುವಂತಹ ಲೆಕ್ಕಪರಿಶೋಧಕರೋ ಲೋಕಾಯುಕ್ತರೋ ಇದ್ದರೆ ಅದು ಯುಕ್ತ ಪ್ರಜಾಪ್ರಭುತ್ವಕ್ಕೆ ಹಾದಿ ಮಾಡಿಕೊಟ್ಟೀತು. ಆದರೆ ನಮ್ಮ ಹೊಸ ಲೋಕಾಯುಕ್ತರು ಸಿಹಿ ಸುದ್ದಿ ನೀಡಿದ್ದಾರೆ; ತಾವೆಲ್ಲೂ ನೇರವಾಗಿ ಭ್ರಷ್ಟಾಚಾರದ ಆಗರಗಳಿಗೆ ತಪಾಸಣೆಗೆ ಹೋಗುವುದಿಲ್ಲವೆಂದು ಹೇಳಿ ಅವರ ಹೆಸರಿಗೆ ತಕ್ಕಂತೆ ಅನೇಕರಿಗೆ ಸಂತೋಷ ತಂದಿದ್ದಾರೆ. ಭ್ರಷ್ಟಾಚಾರ ಮತ್ತು ಪ್ರಜಾಪ್ರಭುತ್ವ ಏಕತ್ರ ಸಮ್ಮಿಳಿತವಾಗುವುದು ಬುದ್ಧಿವಂತ ರಾಜಕಾರಣಿಗಳ ಭ್ರಮಾಲೋಕದಲ್ಲಿ ಮಾತ್ರ.

* * *

ಪ್ರಜಾಪ್ರಭುತ್ವ ಎಲ್ಲಿದೆ ಮತ್ತು ಎಲ್ಲಿಲ್ಲ ಎಂಬುದನ್ನು ದೃಢೀಕರಿಸಲು ಪ್ರಮಾಣಪತ್ರ ನೀಡುವ ಅರ್ಹತೆಯನ್ನು ಜಾರ್ಜ್ ಬುಷ್ ಮತ್ತು ಕೊಂಡಾಲಿಸಾ ರೈಸ್ ಸ್ವಯಮಾಚಾರ್ಯರಾಗಿ ಆರೋಪಿಸಿಕೊಂಡಿದ್ದಾರೆ. ಆದ್ದರಿಂದ ಜಾರ್ಜಿಯ, ಉಕ್ರೇನ್, ಮುಂತಾದೆಡೆಗಳಲ್ಲಿ 'ಆರೆಂಜ್', 'ವೆಲ್ವೆಟ್' ಮುಂತಾಗಿ ''ಜನಕ್ರಾಂತಿ''ಗಳನ್ನು ಸಂಘಟಿಸಿ ತಮ್ಮ ಮಾಧ್ಯಮಗಳಲ್ಲಿ ಅವನ್ನು ವಿಶ್ವದ ಅತ್ಯಂತ ಪ್ರಮುಖ ಸಮಾಚಾರವನ್ನಾಗಿಸುತ್ತಾರೆ. ಅದಕ್ಕೆ ಎಷ್ಟು ಡಾಲರುಗಳನ್ನಾದರೂ ಸುರಿಯಲು ಅವರು ಸಿದ್ಧ. ಆದರೆ ಮೆಕ್ಸಿಕೋದಂತಹ ದೇಶದಲ್ಲಿ ಅಮೆರಿಕಾದ ಕುನ್ನಿ ಅಧ್ಯಕ್ಷನು ಚುನಾವಣೆಯಲ್ಲಿ ಸೋತರೂ ತಾನೇ ಉನ್ನತ ಪದವಿಗೇರಲು ಹೊರಟಾಗ ಅಲ್ಲಿಯ ಜನ ಪ್ರತಿಭಟಿಸುವುದು ಸಮಾಚಾರವಾಗುವುದಿಲ್ಲ, ಪ್ರಜಾಪ್ರಭುತ್ವವಾಗುವುದಿಲ್ಲ. ನಮ್ಮ ಮಾಧ್ಯಮಗಳ ಮುಖ್ಯಸ್ಥರು ಎಷ್ಟು ನಾಚಿಕೆಗೆಟ್ಟವರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಮೆರಿಕಾದ ಮಾಧ್ಯಮವೇ ನಮ್ಮ ಮಾಧ್ಯಮ ವೀರರಿಗೆ ಪರಮವೇದದ ಸಾರ. ಆದ್ದರಿಂದಲೇ ಡಾ|| ಫಿಡೆಲ್ ಕ್ಯಾಸ್ಟ್ರೋ ಆಸ್ಪತ್ರೆಗೆ ತೆರಳಿದರೆ ಅಮೆರಿಕಾದ ಫ್ಲಾರಿಡಾದಲ್ಲಿ ಕುತ್ಸಿತ ಪಾತಕಿಗಳು ಕೇಕೆ ಹಾಕುವುದನ್ನು ನಮ್ಮ ಮಾಧ್ಯಮಗಳು ಅಮೆರಿಕಾದ ಮಾಧ್ಯಮದಿಂದ ಬರಸೆಳೆದು ಬಿತ್ತರಿಸುತ್ತವೆ. ಇನ್ನೇನು ಕ್ಯೂಬಾದಲ್ಲಿ ನಾಳೆ ಇನ್ನೊಂದು ಅಮೋಘ 'ಕಬ್ಬುಕ್ರಾಂತಿ' ನಡೆದು ಅಮೆರಿಕಾದ ಭಂಟನೊಬ್ಬ ಅಧ್ಯಕ್ಷನಾಗಿ ಪ್ರಜಾಪ್ರಭುತ್ವವನ್ನು ನಾಟಿ ಹಾಕುತ್ತಾನೆ ಎನ್ನುವಂತೆ ಮಾತನಾಡುವುದು ಬುಷ್‌ಗೆ ಪ್ರಿಯವಿರಬಹುದು, ಆದರೆ ಭಾರತಕ್ಕೆ ಶೋಭಿಸುವುದಿಲ್ಲ. ಫಿಡೆಲ್ ಕ್ಯಾಸ್ಟ್ರೋ ಅಶ್ವತ್ಥಾಮ-ಬಲಿ-ವ್ಯಾಸ-ಹನುಮಂತ-ವಿಭೀಷಣ-ಕೃಪ-ಪರಶುರಾಮರಂತೆ ಚಿರಂಜೀವಿಯಲ್ಲ. ಆತ ಇಂದಲ್ಲ, ನಾಳೆ ನಿರ್ಗಮಿಸಬೇಕಾದ್ದು ನೈಸರ್ಗಿಕ ನಿಯಮ. ಬಿಸ್ಮಿಲ್ಲಾ ಖಾನ್ ಆದರೂ ಅಷ್ಟೆ, ಫಿಡೆಲ್ ಕ್ಯಾಸ್ಟ್ರೋ ಆದರೂ ಅಷ್ಟೆ! ಆದರೆ ಶಸ್ತ್ರಚಿಕಿತ್ಸೆಗೆ ತೆರಳಿದ ಆತ ಆಗಲೇ ಗತಿಸಿಯೇ ಬಿಟ್ಟ ಮತ್ತು ಆತನೊಡನೆ ಕ್ಯೂಬಾದ ರಾಜಕೀಯ ವ್ಯವಸ್ಥೆಯೂ ಮಣ್ಣುಪಾಲಾಯಿತು ಎಂದು ಉತ್ಸಾಹದಿಂದ ಕುಣಿಯುವುದಿದೆಯಲ್ಲಾ, ಅದು ಅನಾಗರಿಕ ವರ್ತನೆ. ಅಮೆರಿಕಾದ ಸರ್ಕಾರವು ಅನಾಗರಿಕವಾಗಲು ಹೇಸುವುದಿಲ್ಲವಾದರೆ ನಮ್ಮ ಸಿಎನ್ನೆನ್-ಐಬಿಎನ್ ಮುಂತಾದ ಮಾಧ್ಯಮಗಳು ಕಮಂಗಿಗಳಂತೆ ವರ್ತಿಸುವುದು ಅಸಹನೀಯ.

# ಆರ್ಯ ಜನಾಂಗೀಯ ವಾದ ಓದದೆ ಪರಿವರ್ತನೆ ಸಾಧ್ಯವಿಲ್ಲ

**ರೊ**ಮಿಲಾ ಥಾಪರ್ ಅವರು ತಮ್ಮ 'ಕೋಮುವಾದ ಮತ್ತು ಪ್ರಾಚೀನ ಭಾರತದ ಇತಿಹಾಸ ಲೇಖನ' ಎಂಬ ಕಿರು ಪ್ರಬಂಧದಲ್ಲಿ ಕೋಮುವಾದಿ ದೃಷ್ಟಿಕೋನ ಮತ್ತು ದತ್ತ ಸಿದ್ಧಾಂತಗಳನ್ನು ಇಟ್ಟುಕೊಂಡು ರಚಿಸುವ, ರಚಿಸಿದ ಇತಿಹಾಸ ಕಳಪೆ ಎನ್ನುತ್ತಾರೆ. ಇತಿಹಾಸವೆಂದರೆ ಕಥೆಯಲ್ಲ. ಬಲಪಂಥೀಯ ಗುಂಪುಗಳು ಇನ್ನೂ ತಮ್ಮೆದುರಿನ ಮೌಢ್ಯವನ್ನು ಕಳಚಿಕೊಂಡಿಲ್ಲ. ಜೊತೆಗೆ, ಹೊಸ ವೈಚಾರಿಕ ವಿಷಯಗಳನ್ನು ಓದುವುದೂ ಇಲ್ಲ. ಎಲ್ಲರೂ ತಿಳಿದಿರುವ ವಿಚಾರ ಓದದೆ ಪರಿವರ್ತನೆ ಸಾಧ್ಯವಿಲ್ಲ. ಪುರಾತತ್ವಶಾಸ್ತ್ರವು ಇತಿಹಾಸದಲ್ಲಿ, ಇತಿಹಾಸ ಸಂಶೋಧನೆಯಲ್ಲಿ ಇಂದು ಸಶಕ್ತವಾಗಿದೆ, ಶೇಕಡ ಸುಮಾರು ೯೦ರಷ್ಟು ಇತಿಹಾಸ ರಚನೆಯನ್ನು ನಿರ್ಧರಿಸುವ ಸಾಮರ್ಥ್ಯವನ್ನು ಪಡೆದಿದೆ. ಇಂತಹ ವೈಜ್ಞಾನಿಕ ಯುಗದಲ್ಲೂ ಕೂಡಾ ಆರ್.ಎಸ್.ಎಸ್. ಮತ್ತು ಸಂಘಪರಿವಾರಗಳು ಆರ್ಯರು, ಆರ್ಯ ಸಂಸ್ಕೃತಿ ಮತ್ತು ಭಾರತೀಯತೆಯನ್ನು ಸಾಧಿಸುವ ಪ್ರಯತ್ನವನ್ನು ಕೈಬಿಟ್ಟಿಲ್ಲ.

ಲೋಕಮಾನ್ಯ ತಿಲಕರು, ಪ್ರಖರ ರಾಷ್ಟ್ರೀಯವಾದಿ ನಾಯಕ. ಅಂಥವರು ತಮ್ಮ 'ಆರ್ಕ್ಟಿಕ್ ಹೋಮ್ ಆಫ್ ದಿ ವೇದಾಸ್' ಎನ್ನುವ ಕೃತಿಯಲ್ಲಿ, ಆರ್ಯರು ಧ್ರುವ ಪ್ರದೇಶೀಯರೆಂದು ಯಾಕೆ ಹೇಳಿದರೋ ಗೊತ್ತಿಲ್ಲ. ಇದು ಇಂದಿಗೂ ಕಗ್ಗಂಟಾಗಿಯೇ ಉಳಿದಿದೆ. ತಿಲಕರ ಅನುಯಾಯಿಯಾಗಿದ್ದುಕೊಂಡು ರಾಷ್ಟ್ರೀಯ ಸ್ವಯಂಸೇವಕ ಸಂಘದ ದ್ವಿತೀಯ ಸರ ಸಂಘಚಾಲಕ ಗುರೂಜಿ (ಮಾಧವ ಸದಾಶಿವ ಗೊಳವಲ್ಕರ್) ಕೂಡ ತಿಲಕರ ಮಾತನ್ನೇ ಧ್ವನಿಸಿದರು. ಆದರೆ ಈ ರೀತಿ ಮಾಡಿದ ನಂತರ ಸಂಕಟ, ತಪ್ಪನ್ನು ಅರಿತುಕೊಂಡರು. ತಪ್ಪನ್ನು ಮರೆಮಾಚಲು, ಮುಚ್ಚಿಹಾಕಲು ಅವರು, ಆರ್ಯರು ಭಾರತದಲ್ಲೇ ಇದ್ದ ಧ್ರುವ ಪ್ರದೇಶೀಯರು ಎನ್ನಬೇಕೇ ? ಸ್ವತಃ ಗುರೂಜೀ ತಮ್ಮ "We, The Nationhood defined" ಎಂಬ ಕಿರು ಹೊತ್ತಿಗೆಯ ಎಂಟನೇ ಪುಟದಲ್ಲಿ ಈ ರೀತಿ ಗೊಂದಲವನ್ನು ಸೃಷ್ಟಿಸಿಕೊಂಡು ಚರಿತ್ರೆಯ ಭಾಗವಾದರು.

ಸಂಘ ಮತ್ತು ಸಂಘ ಪರಿವಾರ ಇಂತಹದೇ ರೀತಿಯ ಹಲವು ಜನರನ್ನು ಈಗಲೂ ಹೊಂದಿದೆ. ೧೯೨೪ರಲ್ಲಿ ಎರ್ನೆಸ್ಟ್ ಮೆಕೆ ಶೋಧಿಸಿದ ಏಕಶೃಂಗೀಯ ಚಿತ್ರವಿರುವ ಛಿದ್ರವಾದ ಸಿಂಧೂ ಅಥವಾ ಹರಪ್ಪ ಮುದ್ರೆಯನ್ನು ವಿರೂಪಗೊಳಿಸಿ ಕಂಪ್ಯೂಟರ್‌ನಲ್ಲಿ ಕುದುರೆ ಮುದ್ರೆಯನ್ನು ಮಾಡಿ, ಹರಪ್ಪಾದಲ್ಲಿ ಕುದುರೆಯ ಕಥೆಯನ್ನು ಕಟ್ಟಿ 'ಕುದುರೆಯನ್ನು ಓಡಿಸಿದ' ನವರತ್ನ ಎಸ್. ರಾಜಾರಾಮ್, ಇವರ ಜೊತೆ ಹರಪ್ಪಾ ಮುದ್ರೆಗಳ ಲಿಪಿಯನ್ನು ಓದಿ, ಸಂಸ್ಕೃತವೆಂದು ಹುಚ್ಚು ಹುಚ್ಚಾಗಿ ಸಾರಿದ ನಟವರ್ ಝಾ, ಭಾರತೀಯರು ಬರೀ ಭಾವನಾವಾದಿಗಳು ಅಧ್ಯಾತ್ಮಿಗಳು ಎಂಬ ಗುಂಗಿನಲ್ಲೇ ಇರುವ ಡೇವಿಡ್ ಫ್ರಾಲಿ, ಕೋನ್ರಾಲ್ಡ್ ಎಲ್ಸ್ಟ್ ಫ್ರಾನ್ಸ್ವಾ ಗೋತಿಯೇ ಮುಂತಾದವರು, ಭಾರತೀಯ ಇತಿಹಾಸದ ಕೇಸರೀಕರಣಕ್ಕೆ ಬಹಳಷ್ಟು ಶ್ರಮಿಸಿದ್ದಾರೆ. ಇವರನ್ನು ನೆನೆಯಬೇಕು ಮತ್ತು ನಿಜವಾದ ಇತಿಹಾಸದ ಕೆರೆಯಲ್ಲಿ ವಾಸ್ತವವಿರುವ ಇತಿಹಾಸದಲ್ಲಿ ಇವರನ್ನು ಅವಲಕ್ಕಿಯಂತೆ ನೆನೆಸಬೇಕು. ಇನ್ನೂ ಆರ್ಯನ್ನರು ಒಂದು ಜನಾಂಗ, ಇವರು ಮೂಲತಃ ಭಾರತೀಯರೇ ಎಂದು ನಂಬಿರುವ ಈ ಜನ ಮಿಥಕಗಳನ್ನು, ಕೃತಕ ದಾಖಲೆಗಳನ್ನು ಸೃಷ್ಟಿಸುತ್ತಾ, ಇರುವ ಆಧಾರಗಳ ವಿರೂಪಗೊಳಿಸುತ್ತಾ ಚರಿತ್ರೆಯ ವಿಕೃತೀಕರಣದಲ್ಲಿ 'ಚರಿತ್ರಾರ್ಹರಾಗಿದ್ದಾರೆ'. ಮಾನವಿಕಶಾಸ್ತ್ರ, ಭಾಷಾಶಾಸ್ತ್ರ ಮತ್ತು ಪುರಾತತ್ವಶಾಸ್ತ್ರವೂ ಕೂಡ ಆರ್ಯ ಜನಾಂಗದ ಅಸ್ತಿತ್ವ, ಆರ್ಯ ಆಕ್ರಮಣ ಮತ್ತು ಆರ್ಯರ ವಲಸೆಯನ್ನು ಮತ್ತು ಆರ್ಯ ಜನಾಂಗೀಯವಾದವನ್ನು ತಳ್ಳಿಹಾಕಿದೆ.

ಆರ್ಯರ ಮೇಲಿನ ಚರ್ಚೆ ಎಂದೋ ಮುಗಿದುಹೋಗಿದೆ. ಆರ್ಯರ ಚರ್ಚೆಯನ್ನು ವೈಜ್ಞಾನಿಕವಾಗಿಯೂ ಚರ್ಚಿಸಿ ಸಾಮಾನ್ಯೀಕರಣ ಮಾಡಲಾಗಿದೆ ಕೂಡ. ಭೌತಿಕವಾದೀ ವ್ಯಾಖ್ಯಾನ ಮತ್ತು ವೈಜ್ಞಾನಿಕ ಕ್ರಮದಿಂದ, ಭಾಷಾಶಾಸ್ತ್ರ, ಪುರಾತತ್ವಶಾಸ್ತ್ರ ಮತ್ತು ಮಾನವಶಾಸ್ತ್ರಗಳ ಸಹಾಯದಿಂದ ಈ ಚರ್ಚೆ ಕೊನೆಗೊಂಡಿದೆ.

ಭಾಷಾಶಾಸ್ತ್ರವು ಭಾಷೆ, ಸಾಹಿತ್ಯ ಮತ್ತು ಅವುಗಳ ನಡುವಿನ ಅಂತರ್‌ಸಂಬಂಧಗಳನ್ನು ವಿವರಿಸುವ ಶಾಸ್ತ್ರ. ಇದು ಆರ್ಯರ ಜನಾಂಗಕ್ಕೆ ಮೂಲಾಧಾರವಾಗಿರುವಂತಹ ಒಂದೇ ಒಂದು ಮಾತೃಭಾಷೆ ಅಥವಾ ಪ್ರೋಟೋ ಇಂಡೋ -ಯೂರೋಪಿಯನ್ ಭಾಷೆಯ ಅಸ್ತಿತ್ವವನ್ನು ತಳ್ಳಿಹಾಕಿದೆ. ಒಂದೇ ಒಂದು ಪ್ರೋಟೋ ಇಂಡೋ ಯೂರೋಪಿಯನ್ – ಭಾಷೆಯೇ ಒಂದು ಪ್ರಾಕ್ ಕಲ್ಪನೆಯೆಂದೂ ಸಾರಿದೆ. ಇದು ಹೇಗೆಂದರೆ, ಅಮೆರಿಕಾದಲ್ಲಿ ಹಲವು ಜನಾಂಗಗಳು, ಉದಾಹರಣೆಗೆ, ಇಂಡಿಯನ್ಸ್, ಬಿಳಿಯರು, ಇಂಗ್ಲಿಷರು, ಚೀನೀಯರು, ಭಾರತೀಯರು ಮತ್ತು ಯೆಹೂದ್ಯರು ಎಲ್ಲರೂ ಕೂಡ ಒಂದೇ ಭಾಷೆಯನ್ನು ಅಂದರೆ ಅಮೆರಿಕನ್ ಇಂಗ್ಲಿಷನ್ನು ಮಾತನಾಡೋದರಿಂದ ಈ ಎಲ್ಲಾ ಜನಾಂಗಗಳು ಬೇರೆಯಾಗಿರದೆ ಒಂದೇ ಜನಾಂಗ-ಒಂದೇ ಭಾಷೆ ಎಂಬ ಊಹೆ ಹೆಚ್ಚೂ ಕಡಿಮೆ ಹಾಸ್ಯಾಸ್ಪದವಾದುದು. ವಿಲಿಯಮ್ ಜೋನ್ಸ್ ೧೭೮೬ರಲ್ಲಿ ರಾಯಲ್ ಏಷಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್‌ನಲ್ಲಿ, ಭಾಷಾಶಾಸ್ತ್ರ ಬೆಳೆಯದ ಕಾಲದಲ್ಲಿ ಒಂದೇ ಭಾಷೆಯಿದೆಯೆಂದೂ ಆದಕಾರಣ ಒಂದೇ ಭಾಷೆಯನ್ನು ಮಾತನಾಡುವಂತಹ ಒಂದೇ ಜನಾಂಗವಿದೆಯೆಂದೂ ತೀರ್ಪು ನೀಡಿರಲಿಲ್ಲ, ಕಲ್ಕತ್ತಾದ ಸುಪ್ರೀಂಕೋರ್ಟ್‌ನಲ್ಲಿ ನೀಡಿದ ಹಾಗೆ.



ಮಾನವಶಾಸ್ತ್ರವು ತಳಿ, ಕುಲ, ಮಾನವ ಸಂಸ್ಕೃತಿ ಮುಂತಾದ ಜನಾಂಗಗಳು ಮತ್ತು ಅವುಗಳ ನಡುವಿನ ಅಂತರ್ ಸಂಬಂಧ ತಿಳಿಸುವ ಶಾಸ್ತ್ರ. ದೈಹಿಕ ಮಾನವ ಶಾಸ್ತ್ರ ಇದಕ್ಕೆಂದೇ ಮೀಸಲಾಗಿತ್ತು, ಆದರೆ ಈಗ ಕೆಳಗಿನ ಮೂರು ಕಾರಣಗಳಿಂದಾಗಿ ಈ ಶಾಖೆ ಸಂಪೂರ್ಣ ಮಾಯವಾಗಿದೆ.

೧. ಜಗತ್ತಿನ ಎಲ್ಲಾ ಜನಾಂಗಗಳೂ ಕೂಡ ವಿಲೀನೀಕೃತವಾದವು (racial assimilation).

೨. ಮಾನವ ಜೀವಕೋಶದ ಮೈಟೋಕಾಂಡ್ರಿಯಾದ ಒಳಗಿರುವ ಡಿ.ಎನ್.ಎ. ಹಲವಾರು ಪರಿವರ್ತನೆಗಳನ್ನು ಹೊಂದುತ್ತದೆ, ಇದನ್ನು ಜೀವಶಾಸ್ತ್ರೀಯ ಪದದಲ್ಲಿ mutation ಎನ್ನುತ್ತಾರೆ.

೩. ಮಾನವನ ಆಹಾರ ಪದ್ಧತಿಯಲ್ಲಿನ ವ್ಯತ್ಯಾಸದಿಂದ ಜನಾಂಗಗಳಲ್ಲಿ ಅಪಾರ ಬದಲಾವಣೆಯಾಗುತ್ತದೆ, ಆದ್ದರಿಂದಲೇ ಮಾನವ ಜನಾಂಗೀಯ ಅಧ್ಯಯನ, ವರ್ಗೀಕರಣ, ಇವು ನಿಜಕ್ಕೂ ಸಮಸ್ಯೆಯೇ ಮತ್ತು ಸಂಕೀರ್ಣವೇ. ಜಪಾನ್ ೧೯೨೦ರಿಂದ ಹಾಲನ್ನು ಆಹಾರ ಕ್ರಮದ ಭಾಗವಾಗಿಸಿದ ನಂತರ ಜಪಾನಿಗರು ೮೦ ವರ್ಷದಲ್ಲಿ ಕೆಲವು ಇಂಚುಗಳಷ್ಟು ಹೆಚ್ಚು ಎತ್ತರವಾಗಿದ್ದಾರೆ. ಹೀಗೆ ಮಾನವ ಶಾಸ್ತ್ರಜ್ಞರು ಹೇಳುವ ಹಾಗೆ, ಆರ್ಯನ್ ಜನಾಂಗವನ್ನು ಗುರುತಿಸಲು ಸಾಧ್ಯವಾಗಿಲ್ಲ ಮತ್ತು ಇದೊಂದು ಐತಿಹಾಸಿಕ ಮಿಥಕವೇ ಹೊರತು ಮಾನವಶಾಸ್ತ್ರೀಯ ಸತ್ಯವಲ್ಲ.

ಪುರಾತತ್ವಶಾಸ್ತ್ರವು ಇತಿಹಾಸದ ಒಂದು ಶಾಖೆಯಾಗಿದ್ದು ಮಾನವನ ವಲಸೆ ಮತ್ತು ಅದರ ಅಂತರ್ ಸಂಬಂಧಗಳನ್ನು ತಿಳಿಸುವ ಶಾಸ್ತ್ರ. ಒಂದು ಜನಾಂಗವು 'ಅ' ಸ್ಥಳದಿಂದ 'ಆ' ಸ್ಥಳಕ್ಕೆ ವಲಸೆ ಹೋದರೆ 'ಅ' ಮತ್ತು 'ಆ' ಎರಡರ ಭೌತಿಕ ಸಂಸ್ಕೃತಿಗಳು ಅಧ್ಯಯನದಲ್ಲಿ ಒಂದೇ ಆಗಿರಬೇಕು. ಒಂದು ಜನಾಂಗ 'ಅ'ಯಲ್ಲಿ ಬಳಸಿದ ಆಯುಧ, ಪಾತ್ರೆ, ಇಟ್ಟಿಗೆ ಮುಂತಾದ ವಸ್ತುಗಳು, ಅವುಗಳ ರಚನಾ ವಿನ್ಯಾಸವೆಲ್ಲವೂ 'ಆ' ಸ್ಥಳದಲ್ಲಿ ಇರಬೇಕು. ಇದನ್ನು ಪುರಾತತ್ವ ಪರಿಭಾಷೆಯಲ್ಲಿ 'ಕಟಿಯ ಸಂಯೋಜನ' ಎಂದೂ ಕರೆಯುತ್ತಾರೆ. ಆರ್ಯರ ವಿಷಯದಲ್ಲಿ ಇದೂ ಕೂಡ ಸಾಧ್ಯವಾಗಿಲ್ಲ. ಒಟ್ಟಾರೆ ವಲಸೆ ಬಂದಿಲ್ಲವೆಂಬುದಕ್ಕೂ ಪುರಾತತ್ವ ಶಾಸ್ತ್ರವು ಅಧಿಕೃತತೆಯನ್ನು ಸಾರಿದೆ.

ಹೀಗೆ ವಿಲಿಯಂ ಜೋನ್ಸ್ ಭಾಷಾಶಾಸ್ತ್ರೀಯ ನೆಲೆಯಲ್ಲಿ ಅಂದು ಹೇಳಿದ್ದನ್ನು, ಮ್ಯಾಕ್ಸ್ ಮುಲ್ಲರ್ ಮೊದಲಾದವರು ತಪ್ಪಾಗಿ ಗ್ರಹಿಸಿದರು. ಅಂದಿನಿಂದ ಇಂದಿನವರೆಗೂ ಬಲ ಪಂಥೀಯ ಅಥವಾ ರಾಷ್ಟ್ರೀಯವಾದದ ಪ್ರತಿಪಾದಕರಿಗೆ ಆರ್ಯನ್ ಚರ್ಚೆ ಅಂತಃಸತ್ವದ ಪ್ರಶ್ನೆಯಾಗಿಯೇ ಇದೆ. ತಿಲಕರು ಪ್ರಖರ ರಾಷ್ಟ್ರೀಯವಾದಿಯಾಗಿದ್ದು, ವೈದಿಕ ಧರ್ಮವನ್ನೇ ಸಮನ್ವಯಿತ ಹಿಂದೂ ಧರ್ಮ ಎಂದು ವ್ಯಾಖ್ಯಾನ ಮಾಡಿಯೂ ಆರ್ಯರ ಪ್ರಶ್ನೆ ಬಂದಾಗ ಜಾರಿಕೊಂಡರು. ತಿಲಕರ ಅನುಯಾಯಿಗಿದ್ದು ಆರ್.ಎಸ್.ಎಸ್. ಸರಸಂಘಚಾಲಕ ಗೊಳವಲ್ಕರ್ ಅವರೂ ತಿಲಕೋತ್ತರ ಆರ್ಯರ ಪರಿಕಲ್ಪನೆಯನ್ನೇ ಚರ್ವಣ ಮಾಡಿದರು. ಅದು ಸರಿಯಿಲ್ಲ ಎಂದಾಗ ಆರ್ಯರ ಮೂಲ ನೆಲೆಯಾದ ಆರ್ಕ್ಟಿಕ್ ಭಾರತದಲ್ಲೇ ಇದೆಯೆಂದೂ ಸಾರಿದರು. ಇಂದಿಗೂ ಸಂಘ ಮತ್ತು ಸಂಘ ಪರಿವಾರ ಈ ಚಿಂತನೆಯನ್ನು ಕೈ ಬಿಟ್ಟಿಲ್ಲ.

**ಪ್ರದೀಪ ಕುಮಾರ**
ಕೆಂಚನೂರು, ಪ್ರಥಮ ಸ್ನಾತಕೋತ್ತರ ಇತಿಹಾಸ
ಮಂಗಳಗಂಗೋತ್ರಿ, ಮಂಗಳೂರು

ಎಸ್. ಕೆ. ಕರೀಂಖಾನ್ ೧೯೦೬-೨೦೦೬; ತಂದೆ ಅಬ್ದುಲ್ ರೆಹಮಾನ್‌ಖಾನ್, ತಾಯಿ ಜೈನಬಿ. ಆಫ್ಘಾನಿಸ್ತಾನದ ಕಾಬೂಲಿನವರು. ಬ್ರಿಟಿಷರ ವಿರುದ್ಧ ಹೋರಾಡಿ ಭಾರತಕ್ಕೆ ಬಂದು ನೆಲೆಸಿದ್ದು ಹಾಸನ ಜಿಲ್ಲೆಯ ಸಕಲೇಶಪುರದಲ್ಲಿ, ಇವರ ಐದನೇ ಮಗನೆ ಎಸ್. ಕೆ. ಕರೀಂಖಾನ್.

ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಕಲೇಶಪುರ ಹಾಗೂ ಹಾಸನದಲ್ಲಿ, ನಂತರ ಸ್ವಾತಂತ್ರ್ಯ ಚಳವಳಿಗೆ ಧುಮುಕಿದರು. ಪತ್ರಕರ್ತರಾಗಿ ಸೇವೆ ಸಲ್ಲಿಸಿದರು. ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿದರು.

ಸಂಸ್ಕೃತ ಕಲಿತು ಭವಭೂತಿಯ 'ಮಾಲತಿ ಮಾಧವ' ನಾಟಕವನ್ನು ಕನ್ನಡಕ್ಕೆ ಅನುವಾದಿಸಿದರು. 'ಲೈಲಾಮಜ್ನು'ವನ್ನು ಕನ್ನಡಕ್ಕೆ ತಂದಿದ್ದಾರೆ. ೧೯೫೫ರಲ್ಲಿ ಹೊರಬಂದ 'ಬಂದಾನಿ ಹುಸೇನ್' ಅವರ ಕಾದಂಬರಿ. 'ಮಧುಮೋಹನ', 'ಮಾಗಡಿ ಕೆಂಪೇಗೌಡ', 'ಬೆಂಗಳೂರು ಕೆಂಪೇಗೌಡ' ನಾಟಕಗಳು. 'ನೀವರ', 'ನೀಹಾರ' ಅವರ ಕಥಾಸಂಕಲನಗಳು. 'ಕನ್ನಡ ಜಾನಪದ ಗೀತೆಗಳು', 'ಜನಪದ ಗೀತೆಗಳು' ಸಂಗ್ರಹ ಮಾಡಿದ ಕೃತಿಗಳು. ೨೫ಕ್ಕೂ ಹೆಚ್ಚು ಚಿತ್ರಗಳಿಗೆ ಕಥೆ ಹಾಗೂ ಗೀತೆಗಳನ್ನು ರಚಿಸಿದ್ದಾರೆ. 'ನಟವರ ಗಂಗಾಧರ...' ಸೇರಿದಂತೆ ೨೦೦ಕ್ಕೂ ಹೆಚ್ಚು ಗೀತೆಗಳನ್ನು ರಚಿಸಿದ್ದಾರೆ.

ಕರ್ನಾಟಕ ಸರ್ಕಾರದ ಪ್ರತಿಷ್ಠಿತ 'ಜಾನಪದಶ್ರೀ' ಪ್ರಶಸ್ತಿ (೧೯೯೬), ಗುಲ್ಬರ್ಗ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ, ಕನ್ನಡ ವಿಶ್ವವಿದ್ಯಾಲಯದ 'ನಾಡೋಜ' ಪ್ರಶಸ್ತಿಗಳೂ ಸೇರಿದಂತೆ ಅನೇಕ ಪ್ರಶಸ್ತಿ ಗೌರವಗಳು ಇವರಿಗೆ ಸಂದಿವೆ.



ಚಿತ್ರ ಸೌಜನ್ಯ (ಕೆ.ಪಿ.ಎನ್)

# ಜಾನಪದ ಜಂಗಮ

# ಡಾ॥ ಎಸ್. ಕೆ. ಕರೀಂಖಾನ್

**ಜಾ**ನಪದ ಜಂಗಮರಾದ ಎಸ್. ಕೆ. ಕರೀಂಖಾನ್ ಅವರು ೨೯-೭-೨೦೦೬ರಂದು ತಮ್ಮ ಇಹ ಬದುಕಿಗೆ ಅಂತ್ಯ ಹಾಡಿದ್ದಾರೆ. ಅಚಲ ಶ್ರದ್ಧೆಯಿಂದ ನಿಶ್ಚಲ ನಿಲುವಿನಲ್ಲಿ ನಿಂತ ಸಂತ ಕರೀಂಖಾನ್ ಹಾಸನ ಜಿಲ್ಲೆಯ ಹೆಮ್ಮೆಯ ಪುತ್ರ. ಅವರು ೧೯-೫-೨೦೦೧ರಂದು ಸಂಜೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ ಭವನದಲ್ಲಿ ಏರ್ಪಡಿಸಿದ್ದ 'ಮನೆಯಂಗಳದಲ್ಲಿ ಮಾತುಕತೆ' ಸಂವಾದ ಕಾರ್ಯಕ್ರಮದಲ್ಲಿ ನೀಡಿದ ವಿಚಾರಗಳು ಮನನೀಯ.

ಬಿಳಿ ಜುಬ್ಬ, ಬಿಳಿ ಪೈಜಾಮ, ಬಿಳಿ ಟೋಪಿ ಧರಿಸಿದ ಕರೀಂಖಾನ್ ಬೆಂಬಲಿತ ಊರುಗೋಲಿನ ಆಧಾರದ ಮೇಲೆ (ಇತ್ತೀಚೆಗೆ ಆಕಸ್ಮಿಕವಾಗಿ ಜಾರಿಬಿದ್ದ ಕಾರಣ ಅವರ ಕಾಲಿನ ನೋವು ಅವರನ್ನು ಈಗ ಊರುಗೋಲಿನ ಆಧಾರದ ಮೇಲೆ ನಡೆಯುವಂತೆ ಮಾಡಿತ್ತು) ಕನ್ನಡ ಭವನದ ನಯನ ಸಭಾಂಗಣವನ್ನು ಪ್ರವೇಶಿಸಿದಾಗ ಸಭಿಕರು ಹರ್ಷೋದ್ಗಾರದಿಂದ ಸ್ವಾಗತಿಸಿದರು. ತಮ್ಮ ಐದು ನಿಮಿಷದ ಪ್ರಾಸ್ತಾವಿಕ ಮಾತುಗಳಲ್ಲಿ ಅವರು ಯಾವ ಔಪಚಾರಿಕ ಮಾತುಗಳನ್ನೂ ಆಡದೆ ನೇರವಾಗಿ ಮಾತು ಪ್ರಾರಂಭಿಸಿದ್ದು ಹೀಗೆ :

''ಎಲ್ಲರಿಗೂ ನಮಸ್ಕಾರ. ಶಾಂತಿ ವಿಶ್ರಾಂತಿ ಪಡೆದು ಕೊಳ್ಳುವ ಕಾಲ ಬರುತ್ತಿದೆ. ಯಾವ ಸಂದರ್ಭದಲ್ಲೂ ಶಾಂತಿ ಕಳೆದುಕೊಳ್ಳಬೇಡಿ. ಪ್ರೀತಿಯನ್ನು ಕಾಪಾಡಿಕೊಳ್ಳಿ. ಯಾರಾದರೂ ಹತ್ತಿರ ಬಂದರೆ ಹಾವು ಮೊದಲು ಭಯ ಬೀಳುತ್ತದೆ. ಕೆಣಕಿದರೆ ಕೋಪಗೊಳ್ಳುತ್ತದೆ. ಹೀಗೆ ಭಯ ಮತ್ತು ಕೋಪಗೊಂಡಾಗ ಅದರ ದವಡೆಯಲ್ಲಿ ವಿಷ ಉತ್ಪತ್ತಿಯಾಗಿ ಅದಕ್ಕಿರುವ ವಿಷದ ಚೀಲದಲ್ಲಿ ತುಂಬಿ ಕೊಳ್ಳುತ್ತದೆ. ನಂತರ ಕಚ್ಚಿದಾಗ ಆ ವಿಷ ಅದರಿಂದ ಹೊರಹೋಗುತ್ತದೆ.

ಹಾಗೆ ಮನುಷ್ಯ. ಆತ ಭಯ ಮತ್ತು ಕೋಪಗೊಂಡಾಗ ಅವನಲ್ಲೂ ವಿಷ ಉತ್ಪತ್ತಿಯಾಗುತ್ತದೆ. ವಿಷದ ಚೀಲ ಅವನಲ್ಲಿ ಇರದ ಕಾರಣ ಅದು ರಕ್ತದಲ್ಲಿ ಬೆರೆತು ಅವನ ಅನಾರೋಗ್ಯಕ್ಕೆ ಕಾರಣವಾಗುತ್ತದೆ. ಈ ಕಾರಣದಿಂದ ಅವನಲ್ಲಿ ದುಷ್ಕೃತ್ಯಗಳು ಉಂಟಾಗುತ್ತವೆ. ಆದ್ದರಿಂದ ಭಯ ಬೀಳಬೇಡಿ. ಕೋಪಗೊಳ್ಳಬೇಡಿ. ಶಾಂತಚಿತ್ತರಾಗಿರಿ. ಮನುಷ್ಯರಾಗಿ ದೇಶಕ್ಕೆ ಮನುಕುಲಕ್ಕೆ ಸೇವೆ ಸಲ್ಲಿಸಿ. ಭಗವಂತ ನಿರ್ಗುಣ, ಸರ್ವಶಕ್ತ, ಸಕಲ ಜೀವೋದ್ಧಾರಕ. ಅವನು ನಿಮಗೆಲ್ಲರಿಗೂ ಸಿದ್ಧಿಯನ್ನು ದಯಪಾಲಿಸಲಿ.

ಜಗತ್ತನ್ನು ಬಿಟ್ಟುಹೋಗುವಾಗ ನಾವು ಇದ್ದದ್ದಕ್ಕೆ ಕುರುಹಾಗಿ ಏನನ್ನಾದರೂ ಬಿಟ್ಟುಹೋಗಬೇಕು. ಪಾಂಡವರು ಇದ್ದರು ಎನ್ನುವುದಕ್ಕೆ ಅವರು ಅವರೆಕಾಳು ಬಿತ್ತಿ ಹೋಗಿದ್ದಾರೆ. ಹಾಗೆಂದು ಜಾನಪದ ಗೀತೆ ಹೇಳುತ್ತದೆ :

*ಕಿನ್ನುಡಿ ಕಿರುಗೆಜ್ಜೆ ಕಿವಿಗೆ ನಾಗರ ಸುತ್ತು*
*ಕಿನ್ನುಡಿ ಮೇಲೆ ಕಿರುಗೆಜ್ಜೆ ತಾನಂದನ*
..............
*ಸತ್ಯವುಳ್ಳ ಪಾಂಡವರು ಸತ್ತರೆಂದು ತಿಳಿಯದಿರಿ*
*ಸತ್ತಾರೆ ಲೋಕ ಉಳಿಯದು, ಪಾಂಡವರು*
*ಬಿತ್ತಿ ಹೋಗವರೆ ಅವರೆಯ ತಾನಂದನ ॥*

ಹಾಗೆ ನಿಮ್ಮ ನಿಮ್ಮ ಸತ್ಕಾರ್ಯಗಳು ಉಳಿಯುವಂತೆ ನೀವು ನೋಡಿಕೊಳ್ಳಬೇಕು ಎಂದು ಹೇಳಿ ನನ್ನ ಮಾತು ಮುಗಿಸುತ್ತೇನೆ.''

ಅಂದು ಜಂಟಿ ನಿರ್ದೇಶಕರು ಕರೀಂಖಾನರ ದೇಹ ಸ್ಥಿತಿ ಸರಿ ಇರದಿದ್ದ ಕಾರಣ ಸಂಕ್ಷಿಪ್ತ ಹಾಗೂ ನೇರ ಪ್ರಶ್ನೆಗಳನ್ನು ಕೇಳಬೇಕೆಂದು ಮನವಿ ಮಾಡಿದರು. ಸಭಿಕರಿಂದ ಪ್ರಶ್ನೋತ್ತರ ಪ್ರಾರಂಭವಾಯ್ತು.

ಪ್ರಶ್ನೆ : ಹಳ್ಳಿಗಳು ನಾಶವಾಗುತ್ತಿರುವ ಈ ಸಂದರ್ಭದಲ್ಲಿ ಹಳ್ಳಿಗಳಲ್ಲಿ ಜಾನಪದ ಸಂಸ್ಕೃತಿಯನ್ನು ಉಳಿಸುವುದು ಹೇಗೆ ?

ಉತ್ತರ : ಉಳಿಸಬೇಕು ಎನ್ನುವ ಮನೋಧರ್ಮ, ಧೀರೋದಾತ್ತ ಗುಣ ಇದ್ದರೆ ಅದು ಉಳಿದೇ ಉಳಿಯುತ್ತದೆ. ಅದಕ್ಕೆ ಹೃದಯ ಬೇಕು. ಮುಂದಿನ ಪೀಳಿಗೆಗೆ ಬಿಡಬೇಕು ಎನ್ನುವ ಉದಾತ್ತ ಭಾವನೆ ಇದ್ದರೆ ಅದು ಉಳಿಯುತ್ತದೆ.

ಪ್ರಶ್ನೆ : ನೀವು ಬ್ರಹ್ಮಚಾರಿಯಾದದ್ದು ಏಕೆ ? ಹಾಗೆ ಬ್ರಹ್ಮಚಾರಿಯಾಗಿ ನೀವು 'ಬಾರೆ ಚೆಲುವೆ...' ಶೃಂಗಾರ ಗೀತೆಯನ್ನು ಬರೆದದ್ದು ಏಕೆ ?

ಉತ್ತರ : ಸ್ವಾತಂತ್ರ್ಯ ಹೋರಾಟದ ಬಾಧ್ಯತೆಯಿಂದಾಗಿ ಆಗಾಗ ಕಾರಾಗೃಹಕ್ಕೆ ಹೋಗಬೇಕಾದ್ದರಿಂದ ಪತ್ನಿಯನ್ನು ಅಲ್ಲಿಗೆ ಕರೆದುಕೊಂಡು ಹೋಗುವ ವ್ಯವಸ್ಥೆ ಇರದಿದ್ದುದರಿಂದ ಮದುವೆ ಆಗಲಿಲ್ಲ. ಶೃಂಗಾರ ಗೀತೆಯಲ್ಲಿ ಪ್ರಕೃತಿಯ ಆಹ್ವಾನವಿದೆ. ಸ್ತ್ರೀಯನ್ನು ಪ್ರಕೃತಿಯ ಪ್ರತಿರೂಪ ಎಂದು ತಿಳಿಯುವುದು ನಮ್ಮ ಸಂಸ್ಕೃತಿ.

ಪ್ರಶ್ನೆ : ನನ್ನ ವಯಸ್ಸಿನಲ್ಲಿ (ಪ್ರಶ್ನೆ ಕೇಳಿದ ಹುಡುಗನಿಗೆ ೧೦ ವರ್ಷ) ನಿಮ್ಮ ಬಾಲ್ಯದ ಅನುಭವವೇನು ?

ಉತ್ತರ : ಸಂಕೀರ್ತನೆಗಳನ್ನು ಕೇಳ್ತಾ ಇದ್ದೆ, ಜಾನಪದ ಗೀತೆಗಳನ್ನ, ಯಕ್ಷಗಾನದ ಹಾಡುಗಳನ್ನ ಕೇಳ್ತಾ ಇದ್ದೆ. ಮೃದು ಮಧುರವಾದ ಭಾಷೆ ಕೇಳ್ತಾ ಇದ್ದೆ. ಇವು ನನ್ನ ಮನಸ್ಸಿನ ಮೇಲೆ ಪ್ರಭಾವ ಬೀರಿವೆ. ಅನೇಕ ಉತ್ತಮ ಗೀತೆಗಳನ್ನು ರಚಿಸಲು ನನಗೆ ಪ್ರೇರಣೆ ನೀಡಿವೆ.

ಪ್ರಶ್ನೆ : ಜಾನಪದದ ಹೆಸರಿನಲ್ಲಿ ಬರುತ್ತಿರುವ ಅಶ್ಲೀಲತೆಯ ಬಗ್ಗೆ ಅಕಾಡೆಮಿ ಸರ್ಕಾರಗಳು

**ಜ. ಹೊ. ನಾರಾಯಣಸ್ವಾಮಿ**

ನಿಷ್ಕ್ರಿಯವಾಗಿವೆ. ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಉತ್ತರ : ಸಾಮಾನ್ಯ ಜನರು ಆಸಕ್ತಿ ತೋರಿಸದೆ ಇದ್ದರೆ, ಕೊಂಡುಕೊಳ್ಳದಿದ್ದರೆ ಅದು ಹೇಗೆ ಬರಲು ಸಾಧ್ಯ ? ವ್ಯಾಪಾರೀ ಮನೋಭಾವದಿಂದ ಅಶ್ಲೀಲ ಸಾಹಿತ್ಯ ಸೃಷ್ಟಿಯಾಗುತ್ತದೆ. ಯಾವುದಕ್ಕೆ ಬೇಡಿಕೆ ಹೆಚ್ಚೋ ಅದನ್ನು ಒದಗಿಸುವುದು ವ್ಯಾಪಾರೀ ಮನೋಧರ್ಮ. ಬೇಡಿಕೆ ಕುಸಿದರೆ ಅದು ತಾನಾಗಿಯೇ ಕುಸಿಯುತ್ತದೆ. ಶ್ರೀಸಾಮಾನ್ಯರು ತಿರಸ್ಕರಿಸಿದರೆ ತಾನಾಗಿಯೇ ಆ ಪ್ರವೃತ್ತಿ ಅಳಿದುಹೋಗುತ್ತದೆ.

ಪ್ರಶ್ನೆ : ಜಾನಪದ ಸಾಹಿತ್ಯ ಅಜ್ಞಾತ ಕವಿಗಳ ಅಮರ ಕಾವ್ಯ. ಆದರೆ ವ್ಯಕ್ತಿಗಳು ತಾವು ರಚಿಸಿ ಜಾನಪದದ ಹೆಸರಿನಲ್ಲಿ ಹಣ ಮಾಡುತ್ತಿರುವುದರ ಬಗ್ಗೆ ನಿಮ್ಮ ಅಭಿಪ್ರಾಯ ?

ಉತ್ತರ : ಹಣ ದೋಚುವ ಉದ್ದೇಶದಿಂದ ಹೀಗೆ ಮಾಡುತ್ತಾರೆ. ಹೀಗಾಗಿ ಜಾನಪದ ವಲ್ಲದ್ದನ್ನೂ ಜಾನಪದ ಸಾಹಿತ್ಯ ಎಂದು ಪ್ರಕಟಿಸಿ ಮಾರಾಟ ಮಾಡುವ ಪ್ರವೃತ್ತಿ ಕಂಡುಬರುತ್ತಿದೆ. ಅವರದೂ ನಾಲ್ಕು ಕಾಲ ನಡೆಯಲಿ.

ಪ್ರಶ್ನೆ : ನಿಮ್ಮ ಆರೋಗ್ಯದ, ಆಯುಷ್ಯದ ಗುಟ್ಟೇನು ?

ಉತ್ತರ : ನನಗೆ ಗೊತ್ತಿಲ್ಲ. ಹೀಗೇ ಕಾಲ ಕಳೆಯುತ್ತಿದೆ. ಕ್ರಮವಾಗಿ ಆಹಾರ ತೆಗೆದುಕೊಳ್ಳುತ್ತೇನೆ. ನಿದ್ರೆ ಮಾಡುತ್ತೇನೆ. ಮತ್ತೊಬ್ಬರನ್ನು ಬಲಿಹಾಕಬೇಕು ಎಂಬ ಭಾವನೆ ನನಗೆ ಇಲ್ಲ. ದೋಚುವ ಮನೋಭಾವ ಬಂದರೆ ನೆಮ್ಮದಿ ಇರೋಲ್ಲ. ಈಗ ಎಲ್ಲೆಲ್ಲಿ ಹೇಗೆ ಹೇಗೆ ದೋಚಬೇಕು ಎನ್ನುವುದೇ ಪ್ರಮುಖವಾಗಿದೆ. ಇದರಿಂದ ನೆಮ್ಮದಿ ಇರೋಲ್ಲ. ಅದರಿಂದ ಆರೋಗ್ಯ ಹಾಳಾಗುತ್ತೆ. ನನಗೆ ಅಂತಹ ಮನೋಭಾವ ಇರದೆ ಇರುವುದರಿಂದ ನಾನು ನಿಶ್ಚಿಂತನಾಗಿದ್ದೇನೆ. ಹೀಗಾಗಿ ನನಗೆ ನೆಮ್ಮದಿಯ ನಿದ್ರೆಯೂ ಇದೆ.

ಪ್ರಶ್ನೆ : ನಿಮ್ಮ ಬದುಕು ಬರವಣಿಗೆಗೆ ಸ್ಫೂರ್ತಿ ನೀಡಿದವರು ಯಾರು ?

ಉತ್ತರ : ನಮ್ಮ ಅಣ್ಣ ಅವರು ಅನ್ನ ಹಾಕುತ್ತಿದ್ದರು. ಮತ್ತೊಬ್ಬರು ನಾರಾಯಣ ಶಾಸ್ತ್ರಿ ಎಂಬ ಘನ ವಿದ್ವಾಂಸರು. ಅವರು ನಮ್ಮ ಊರಿನಲ್ಲಿದ್ದರು. ಅವರು ತೀರಿಹೋದರು. ಗೊತ್ತಾದಾಗ ನಾನು ಅವರ ಮನೆ ಹತ್ತಿರ ಹೋದೆ. ಅವರ ಶರೀರವನ್ನು ನದಿ ಹತ್ತಿರ ತೆಗೆದುಕೊಂಡು ಹೋಗಿದ್ದಾರೆ ಎಂದು ತಿಳಿಯಿತು. ಹೇಮಾವತಿ ನದಿ ಹತ್ತಿರ ಓಡಿಹೋದೆ. ಚಿತೆ ಮೇಲೆ ಅವರ ಶರೀರ ಇಡುತ್ತಿದ್ದರು. ನನ್ನ ಮನಸ್ಸು ಅವರಲ್ಲಿ ನೆಟ್ಟಿತು. ''ತುಂಬು ಜ್ಞಾನವನ್ನು ತೆಗೆದುಕೊಂಡು ಹೋಗ್ತಾ ಇದ್ದೀರಲ್ಲಾ, ನನಗೂ ಕೊಂಚ ಕೊಡಿ'' ಎಂದೆ. ಬಂದು ಬರೆಯಲು ಶುರು ಮಾಡಿದೆ. ಹೀಗೆ ಅನೇಕರು, ಯಾರು ಯಾರು ಅಂತ ನೆನಪಿಗೆ ಬರುತ್ತಿಲ್ಲ. ಅಂತೂ ಒಂದಿಷ್ಟು ಸಾಹಿತ್ಯ ಬಂತು.

ಪ್ರಶ್ನೆ : ನೀವು ೧೯೫೭ರಲ್ಲಿ ರಚಿಸಿದ ನಿಮ್ಮ ಒಂದು ನಾಟಕವನ್ನ ಹತ್ತುಸಾವಿರ ಪ್ರದರ್ಶನ ನೀಡಿದ್ದೇವೆ. ಅದರಿಂದ ಸಮಾಜಕ್ಕೆ ಪ್ರಯೋಜನವಾಗಿದೆ ಅಂತ ನಿಮಗೆ ಅನ್ನಿಸುತ್ತದೆಯೇ ?

ಉತ್ತರ : ಪ್ರಯೋಜನ ಆಗಿದೆಯೋ ಇಲ್ಲವೋ ನಾನು ಹೇಳಲಾರೆ. ಅದರಿಂದ ನನಗೆ ಆನಂದವಾಗುತ್ತದೆ. ಅಷ್ಟು ಮಾತ್ರ ಹೇಳಬಲ್ಲೆ.

ಪ್ರಶ್ನೆ : ನೀವು ಸ್ವಾತಂತ್ರ್ಯಪೂರ್ವವನ್ನು ಕಂಡವರು. ಹಾಗೇ ಸ್ವಾತಂತ್ರ್ಯಾನಂತರದ ಜೀವನವನ್ನು ಕಂಡವರು. ಈಗ ನಿಮಗೆ ಕಾಣುವ ವ್ಯತ್ಯಾಸವೇನು ?

ಉತ್ತರ : ಸ್ವಾತಂತ್ರ್ಯಪೂರ್ವದಲ್ಲಿ ಒಂದು ರೂಪಾಯಿಗೆ ಹದಿನಾರು ಸೇರು ಅಕ್ಕಿ, ಎಂಟು ಸೇರು ಬೇಳೆ ಸಿಗುತ್ತಿತ್ತು. ಆಗ ನಮ್ಮನ್ನು ನಮ್ಮ ಶತ್ರುಗಳು ಆಳುತ್ತಿದ್ದರು. ಈಗ ಸ್ವಾತಂತ್ರ್ಯ ಬಂದಿದೆ. ನಮ್ಮನ್ನು ನಮ್ಮ ಮಿತ್ರರೇ ಆಳುತ್ತಿದ್ದಾರೆ. ಒಂದು ರೂ.ಗೆ ಹದಿನಾರು ಸೇರು ಸಿಗುತ್ತಿದ್ದ ಅಕ್ಕಿ ಇವರ ಆಳ್ವಿಕೆಯಲ್ಲಿ ತಿರುವು ಮುರುವು ಆಗಿದೆ. ಹದಿನಾರು ರೂ.ಗೆ ಒಂದು ಸೇರು ಅಕ್ಕಿ ! ಅಕ್ಬರನ ಆಳ್ವಿಕೆಯಲ್ಲಿ ಒಂದೊಂದು ಮೈಲಿಗೆ ಒಂದೊಂದು ಅರವಟ್ಟಿಗೆ (ಕುಡಿವ ನೀರು), ಅನ್ನಸತ್ರಗಳು. ಸಾಲು ಮರಗಳನ್ನು ನೆಟ್ಟು ಪ್ರಜೆಗಳಿಗೆ ನೆರಳು ನೀಡುವ ಹೃದಯವಂತಿಕೆ ಅವರಲ್ಲಿ ಇತ್ತು. ಈಗ ಕಾಡುಗಳನ್ನು ಕಡಿಯುತ್ತಿದ್ದಾರೆ. ಮಾಂಸಕ್ಕೆ, ಹಣಕ್ಕೆ, ಹೆಂಡಕ್ಕೆ ಓಟುಕೊಡುವ ಕಾಲ ಬಂದಿದೆ. ಜನಸಾಮಾನ್ಯರು ತಮ್ಮನ್ನು ಇಂತಹ ಆಮಿಷಗಳಿಗೆ ಮಾರಾಟಮಾಡಿಕೊಂಡಿದ್ದರೆ ರಾಜಕಾರಣಿಗಳು ಓಟಿಗಾಗಿ ತಮ್ಮ ಹೃದಯವನ್ನೇ ಮಾರಿಕೊಂಡಿದ್ದಾರೆ.

ಪ್ರಶ್ನೆ : ಆಫ್ಘಾನಿಸ್ತಾನದಲ್ಲಿ ತಾಲಿಬಾನಿನವರು ಬುದ್ಧನ ಪ್ರತಿಮೆ ನಾಶಮಾಡಿದ ಅವರ ಧಾರ್ಮಿಕ ಅಸಹನೆ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಉತ್ತರ : ಅಲ್ಲಿ ಆ ಕೃತ್ಯ ನಡೆದಿರುವುದು ಧಾರ್ಮಿಕ ಅಸಹನೆಯಿಂದ ಅಲ್ಲ. ಅಲ್ಲಿಯ ಎರಡು ಬಣಗಳ ವೈರುಧ್ಯದಿಂದ. ಮಹಾಭಾರತದಲ್ಲಿ ಕೌರವ ಪಾಂಡವರು ಎರಡು ಬಣಗಳಾಗಿ ಹೊಡೆದಾಡಿದರು. ಅವರ ಗುರುಗಳೂ ರಣರಂಗಕ್ಕೆ ಇಳಿದರು. ಗುರುಗಳು ರಣರಂಗಕ್ಕೆ ಇಳಿಯುವುದು ಎಂದರೇನು ? ಪ್ರಾಪಂಚಿಕತೆ ಎನ್ನುವುದು ಹೇಗೆ ಧರ್ಮವನ್ನು ಮೀರಿ ಲೌಕಿಕ ವೈರುಧ್ಯಕ್ಕೆ ಇಳಿಸಿಬಿಡುತ್ತದೆ ! ಅಲ್ಲಿ ಆ ಕೃತ್ಯ ನಡೆದಿರುವುದು ಬುದ್ಧನ ಬಗ್ಗೆಯ ಅಸಹನೆಯಿಂದಲ್ಲ, ಅದಕ್ಕೆ ಕಾರಣ ೨ ಗುಂಪಿನ ನಡುವಿನ ಅಸಹನೆ. ಅಲ್ಲಿ ಸಂಸ್ಕೃತ ವಿದ್ಯಾಲಯ ಇದೆ. ತಾಲಿಬಾನಿನವರು ವಿದ್ಯೆಯಿಂದ ದೂರವಾಗಿ ಅವರವರೇ ಹೊಡೆದಾಡಿಕೊಂಡು ನಾಶವಾಗುತ್ತಿದ್ದಾರೆ.

ಪ್ರಶ್ನೆ : ಈಗ ನಿಮ್ಮ ನೆನಪಿನಲ್ಲಿರುವವರು ಯಾರು ? ನೀವು ಯಾರನ್ನು ನೆನಪಿಸಿಕೊಳ್ಳುತ್ತೀರ ?

ಉತ್ತರ : ಸಾಯುವ ಕಾಲ ಬಂದಾಗ ಎಲ್ಲ ನೆನಪು ಮರುಕಳಿಸುತ್ತೆ. ಗೋಲಿ ಆಟ ಜ್ಞಾಪಕಕ್ಕೆ ಬರುತ್ತೆ. ಕೆಂಗಲ್ ಹನುಮಂತಯ್ಯನವರ ಆಳ್ವಿಕೆ ನೆನಪಿಗೆ ಬರುತ್ತೆ. ಆಯಾಯ ಸಂದರ್ಭಕ್ಕೆ ತಕ್ಕಂತೆ ನೆನಪುಗಳು ಮರುಕಳಿಸುತ್ತವೆ.

ಪ್ರಶ್ನೆ : ನಿಮಗೆ ನೀವು ಇಷ್ಟಪಟ್ಟ ಸಂಗಾತಿ ಸಿಗಲಿಲ್ಲ ಎಂಬ ಭಾವನೆ ಏನಾದರೂ ಉಳಿದಿದೆಯೇ ?

ಉತ್ತರ : ನಾನು ದೇಶದ ಸ್ವಾತಂತ್ರ್ಯಕ್ಕಾಗಿ ತೊಡಗಿಸಿಕೊಂಡವನು. ಸಾಹಿತ್ಯಕ್ಕಾಗಿ ತೊಡಗಿಸಿಕೊಂಡವನು. ಅಲೆಮಾರಿಯಾಗಿ ಜಾನಪದ ಸಂಗ್ರಹಕ್ಕಾಗಿ ತೊಡಗಿಸಿಕೊಂಡವನು. ನನ್ನ ಹೆಚ್ಚಿನ ಗಮನವನ್ನು ಅತ್ತ ಹರಿಸಿದ ಕಾರಣ ಯಾರದೋ ಮನೆಯ ಹೆಣ್ಣನ್ನು ತಂದು ನಡೆಸುವ ಚೈತನ್ಯ ನನ್ನಲ್ಲಿ ಇರಲಿಲ್ಲ. ಆ ಕಾರಣದಿಂದ ನಾನು ಮನಸ್ಸು ಮಾಡಿಲ್ಲ. ಆ ಭಾವನೆಯೂ ನನ್ನಲ್ಲಿ ಇಲ್ಲ.

ಪ್ರಶ್ನೆ : ಹಿಂದೂ ಭಕ್ತಿಗೀತೆಗಳ ರಚನೆ ಬಗ್ಗೆ ನಿಮಗೆ ಮುಸ್ಲಿಂ ಸಂಪ್ರದಾಯ ವಲಯದಲ್ಲಿ ಏನಾದರೂ ವಿರೋಧವಿತ್ತೆ ?

ಉತ್ತರ : ಭಕ್ತಿಗೀತೆಗಳನ್ನು ಹಾಡುವುದಕ್ಕೆ ಮಹಮ್ಮದ್ ರಫಿ ಅವರಿಗೆ ಹೇಗೆ ವಿರೋಧ ಬರಲಿಲ್ಲವೋ ಹಾಗೆ ನನಗೂ ಬರಲಿಲ್ಲ.

ಇಲ್ಲಿಗೆ ಪ್ರಶ್ನೋತ್ತರ ಸಾಕು ಎನ್ನುವ ಸೂಚನೆ ಬಂದಿದ್ದರಿಂದ ಸಂವಾದ ಮುಕ್ತಾಯವಾಯ್ತು. ಉತ್ತರದ ನಡುನಡುವೆ ಸ್ವಯಂಸ್ಫೂರ್ತಿಯಿಂದ ಸಮಯೋಚಿತವಾಗಿ ಜಾನಪದ ಗೀತೆಗಳು ಹಾಗೂ ತಾವೇ ರಚಿಸಿದ ಗೀತೆಗಳನ್ನು ಕರೀಂಖಾನ್ ಅವರು ಹಾಡಿದ್ದು ಪ್ರೇಕ್ಷಕರನ್ನು ಉದ್ದೀಪನಗೊಳಿಸಿತು.

* * *

ಹಿಂದೊಮ್ಮೆ ತುರುವೇಕೆರೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ನಾನೂ ಅವರೊಂದಿಗೆ ಅತಿಥಿಯಾಗಿ ಪಾಲ್ಗೊಂಡಿದ್ದೆ. ಮೊದಲ ಬಾರಿಗೆ ಅಂದು ಅವರ ಭಾಷಣ ಕೇಳಿದ್ದೆ. ಕಾರ್ಯಕ್ರಮದ ನಂತರ ತುರುವೇಕೆರೆಯ ಪ್ರವಾಸಿ ಮಂದಿರದಲ್ಲಿ ಇಳಿದುಕೊಂಡಿದ್ದಾಗ ಅವರು ಹೇಳಿದ ಕೆಲವು ಮಾತುಗಳು ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿವೆ. ಅವುಗಳಲ್ಲಿ ಎರಡನ್ನು ಇಲ್ಲಿ ಹೇಳಬಯಸುತ್ತೇನೆ.

೧. ''ನಮ್ಮ ಮನೆಯ ಮುಂದಿನ ಜಗಲಿಯ ಮೇಲೆ ಅಲೆಮಾರಿಗಳು ಹಿತ್ತಾಳೆ ಪಾತ್ರೆ ಮಾಡುತ್ತಿದ್ದರು. ಹಿಂದಿನ ಕಾಲದವರು. ಆಗ ನಾನಿನ್ನೂ ಚಿಕ್ಕ ಹುಡುಗ. ಅವರು ಪಾತ್ರೆ ಬಡಿಯುವಾಗ ತಾಳಬದ್ಧವಾಗಿ ಬಡಿಯುತ್ತಿದ್ದರು. ಜೊತೆಯಲ್ಲಿ ಜಾನಪದ ಹಾಡುಗಳನ್ನು ಹಾಡುತ್ತಿದ್ದರು. ಅದು ನನ್ನ ಮೇಲೆ ಎಂಥ ಪ್ರಭಾವವನ್ನು ಬೀರಿತೆಂದರೆ ನನ್ನ ಬದುಕೇ ಜಾನಪದವಾಯ್ತು.''

೨. ''ನನ್ನ ಬದುಕು ಜಾನಪದವಾದ ಮೇಲೆ ಹಳ್ಳಿಹಳ್ಳಿಗೆ ಸುತ್ತಿ, ಗುಡ್ಡಗಾಡುಗಳನ್ನು ಅಲೆದು ಜಾನಪದ ಗೀತೆಗಳನ್ನು ಸಂಗ್ರಹಿಸಿದೆ. ಅವುಗಳನ್ನು ಹಾಗೂ ಲಾವಣಿಗಳನ್ನು ಹಳ್ಳಿಹಳ್ಳಿಗೆ ಹೋಗಿ ಹಾಡಿ ಜನರ ಮೆಚ್ಚುಗೆ ಗಳಿಸಿದೆ. ಅವರು ಹಾಗೆ ಸಂತೋಷಗೊಂಡಾಗ ಒಂದು ಪಾಪ ಮಾಡಿದ್ದೇನೆ. ಅದೇನೆಂದರೆ 'ಕಾಂಗ್ರೆಸ್‌ಗೆ ಓಟು ಕೊಡಿ' ಎಂದು ಕೇಳಿದ್ದು.''

ಕರೀಂಖಾನ್‌ರನ್ನು ಆ ನೋವು ಕಡೆಯವರೆಗೂ ಕಾಡಿದೆ. ಸಕಲೇಶಪುರದಲ್ಲಿ ನಡೆದ ೫ನೇ ಹಾಸನ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅವರು ಮಾಡಿದ ಸಮಾರೋಪ ಭಾಷಣ ಎಂದರೆ ಒಬ್ಬ ಅವಧೂತನ ಹೃದಯದಿಂದ ಬಂದ ಬೆಳಕಿನ ಮಾತುಗಳಾಗಿದ್ದುವು. ನೋವನ್ನೂ ನಲಿವಾಗಿ ಪರಿವರ್ತಿಸಿಕೊಂಡ ಹಿರಿಯ ಅನುಭಾವಿ ಚೇತನ ನೂರು ಸಂವತ್ಸರಗಳನ್ನು ಕಂಡು ಕಣ್ಮರೆಯಾಗಿ ನಿಜದ ಗೂಡು ಸೇರಿದೆ.

ಜ. ಹೊ. ನಾರಾಯಣಸ್ವಾಮಿ
೨೦೬೪/ಅ, 'ಮಾನವ', ಉತ್ತರ ಬಡಾವಣೆ, ಹಾಸನ - ೫೭೩ ೨೦೧

# ಜಾತ್ಯತೀತ ಜಂಗಮ ಕರೀಂಖಾನ್



**ಡಾ॥ ಹಿ.ಚಿ. ಬೋರಲಿಂಗಯ್ಯ**

**ಬೆಂ**ಗಳೂರು ಬುಲ್ ಟೆಂಪಲ್ ರಸ್ತೆಯ ಪುಟ್ಟ ಹೋಟೆಲೊಂದರ ಕಿರು ಕೊಠಡಿಯಲ್ಲಿ ಎಲೆಮರೆಯ ಕಾಯಂತೆ ತನ್ನನ್ನು ಗುರುತಿಸಿಕೊಳ್ಳಲು ಇಚ್ಛಿಸದೆ ಬದುಕುತ್ತಿದ್ದ ಮಹಾನ್ ವ್ಯಕ್ತಿಯೊಬ್ಬರಿದ್ದರು. ಹೆಚ್ಚು ಕಡಿಮೆ ಇಡೀ ಇಪ್ಪತ್ತನೇ ಶತಮಾನವನ್ನು ಕಣ್ಣಾರೆ ಕಂಡು ಈ ದೇಶದಲ್ಲಿ ನಡೆದಿರಬಹುದಾದ ಅನೇಕಾನೇಕ ಘಟನೆಗಳಿಗೆ ಸಾಕ್ಷಿಯಂತಿದ್ದರು. ಅವರೇ ಡಾ॥ ಎಸ್.ಕೆ. ಕರೀಂಖಾನ್.

ತೀರಿಕೊಂಡಾಗ ಕರೀಂಖಾನ್ ಅಜ್ಜನಿಗೆ ಸುಮಾರು ೧೦೨ರ ಹರೆಯ. ಜಟ್ಟಿಯ ಮೈಕಟ್ಟು, ತುಂಬಿದ ಮುಖದಲ್ಲಿ ಹಸುಳೆಯ ನಗೆ. ಶುಭ್ರ ಬಿಳಿವಸ್ತ್ರ, ಸದಾ ಒಡನಾಡಿಯಾದ ಟೊಪ್ಪಿಗೆ, ಇವು ಕರೀಂಖಾನರ ವೈಶಿಷ್ಟ್ಯಗಳಾಗಿದ್ದವು. ನೀರು ಮತ್ತು ಶೌಚಾಲಯ ವ್ಯವಸ್ಥೆ ಕೂಡ ಇರದಂತಹ, ಬಹುತೇಕ ಸಂಸಾರ ವಿಲ್ಲದ ಬಡಪಾಯಿಗಳೇ ಬಿಡಾರ ಹೂಡಿದ್ದಂತಹ ದ್ವಾರಕಾ ಹೋಟೆಲಿನಲ್ಲಿ ಕಳೆದ ಮೂವತ್ತು ವರ್ಷ ಗಳಿಂದ ಕರೀಂಖಾನರು ಬದುಕು ದೂಡುತ್ತಿದ್ದರು. ಇತ್ತೀಚಿಗಿನ ವರ್ಷಗಳಲ್ಲಿ ಆರೋಗ್ಯ ಹದಗೆಟ್ಟಿದ್ದರಿಂದ ಅಲಸೂರಿನ ತನ್ನ ತಮ್ಮನ ಮನೆ ಸೇರಿದ್ದರು. ಹೋಟೆಲಿನಲ್ಲಿ ಇರುವಷ್ಟು ವರ್ಷ ಈ ಅಜ್ಜನ ನಿರಾಡಂಬರ ಸರಳ ವ್ಯಕ್ತಿತ್ವಕ್ಕೆ ಮಾರುಹೋದ ಆ ಹೋಟೆಲಿನ ಕೆಲಸಗಾರ ಕೂಸುಗಳೇ ಕರೀಂಖಾನರ ಆಪ್ತೇಷ್ಟರು. ಕರೀಂಖಾನರನ್ನು ಹುಡುಕಿಕೊಂಡು ಅಲ್ಲಿಗೆ ಬರುತ್ತಿದ್ದವರಾದರೂ ಎಂಥವರೆಂದರೆ, ಒಂದಾನೊಂದು ಕಾಲದಲ್ಲಿ ಕರೀಂಖಾನರ ನಾಟಕದಲ್ಲಿ ಪಾತ್ರ ಮಾಡಿದವರು; ಅನ್ನ, ಗಂಜಿಗೆ ಗತಿ ಇಲ್ಲದ ವೃತ್ತಿ ರಂಗಭೂಮಿಯ ಮಾಜಿ ನಟರು, ಚಿತ್ರರಂಗದಿಂದ ಬೇಡವಾಗಿ ದೂಕಿಸಿಕೊಂಡು ಬಂದ ನಿರುದ್ಯೋಗಿ ತಂತ್ರಜ್ಞರು ಹೀಗೆ ಪಟ್ಟಿಯನ್ನು ಬೆಳೆಸುತ್ತಾ ಹೋಗಬಹುದು. ಸ್ಥಿತಿವಂತರು ಯಾರೂ ಕರೀಂಖಾನರ ಆಪ್ತ ಬಳಗದಲ್ಲಿ ಇರಲಿಲ್ಲ ಎಂದರೆ ಅವರ ವ್ಯಕ್ತಿತ್ವ ಕಂಡವರಿಗೆ ಅತಿಶಯೋಕ್ತಿ ಎನಲ್ಲ. ತನ್ನ ಅಭಿಮಾನಿಗಳಿಗೆ ತಾನು ಚೆನ್ನಾಗಿ ಮತ್ತು ಸುಖವಾಗಿ ಇದ್ದೇನೆ ಎಂದು ಹೇಳಿಕೊಳ್ಳುತ್ತಾ ಮೂಲೆ ಮುಡುಕಿನಲ್ಲಿ ಬಚ್ಚಿಟ್ಟ ಚಿಲ್ಲರೆ ಕಾಸುಗಳನ್ನು ತೆಗೆದು ಖಾಲಿ ದೋಸೆ ತಿನ್ನಿಸಿ ಅವರನ್ನು ಕಳಿಸಿದ ನಂತರ ತಾವು ಮಾತ್ರ ನೀರು ಕುಡಿದು ಮಲಗುವ ರಾತ್ರಿಗಳೂ ಇಲ್ಲದಿರಲಿಲ್ಲ. ಹೀಗಾಗಿ ಕರೀಂಖಾನ್ ಅವರಿಗೆ ಲಕ್ಷ್ಮೀ ಎಂದೂ ಒಲಿಯುವುದಿಲ್ಲ ಎಂಬ ನಗೆಯ ನಾಣ್ನುಡಿಯೊಂದು ಪ್ರಸಿದ್ಧವಾಗಿಬಿಟ್ಟಿತ್ತು. ಆದರೆ ಕರೀಂಖಾನರು ಯಾರಾದರೂ ಮೆಚ್ಚಲಿ ಎಂದು ಹೀಗೆ ಮಾಡುವವರಲ್ಲ ಎಂಬುದು ಅವರನ್ನು ಬಲ್ಲ ಎಲ್ಲರಿಗೂ ಗೊತ್ತಿತ್ತು.

ಈ ಮಾನವತಾವಾದಿ ಹುಟ್ಟಿ ಬೆಳೆದದ್ದು ಹಾಸನ ಜಿಲ್ಲೆಯ ಸಕಲೇಶಪುರದಲ್ಲಿ. ತಂದೆ ಅಬ್ದುಲ್ ರೆಹಮಾನ್ ಖಾನ್, ಆಫ್ಘನ್ ಯೋಧರು. ಮನೆಕಲಹದಿಂದಾಗಿ ದೇಶಬಿಟ್ಟು ಬಂದವರು. ತಾಯಿ ಅರಬ್ ಮೂಲದವರು. ತಂದೆ ಬಾಲ್ಯದಲ್ಲಿಯೇ ತೀರಿಹೋದುದರಿಂದ ಹಿರಿಯಣ್ಣನ ಆಶ್ರಯದಲ್ಲಿ ಬೆಳೆದ ಕರೀಂ ಖಾನ್ ವಿದ್ಯಾಭ್ಯಾಸ ಮಾಡಿದ್ದು ಎಂಟನೆಯ ತರಗತಿಯವರೆಗೆ. ಮೊದಲು ಕಲಿತದ್ದು ಕನ್ನಡ ಮತ್ತು ಸಂಸ್ಕೃತ. ಬರಬರುತ್ತಾ ಕನ್ನಡದ ಮಹಾನ್ ಕಾವ್ಯಗಳನ್ನೂ ಸಂಸ್ಕೃತದ ಕೃತಿಗಳನ್ನೂ ಓದಿ ಯಾವ ಹಿಂದೂವನ್ನೂ ಮೀರಿಸುವ ಪಂಡಿತರಾದದ್ದು ಬೆರಗುಗೊಳಿಸುವ ಸಂಗತಿಯೇ ಸರಿ. ಈ ನಡುವೆ ಹಳ್ಳಿಯ ಸಂಸ್ಕೃತಿ ಮತ್ತು ಅವರ ಸಾಹಿತ್ಯಕ್ಕೆ ಮಾರುಹೋದ ಕರೀಂಖಾನ್ ಜಾನಪದ ಸಾಹಿತ್ಯ ಸಂಗ್ರಹಣೆಯನ್ನು ಪ್ರಾರಂಭಿಸಿದರಲ್ಲದೆ, ಹುಟ್ಟಿನಿಂದಲೇ ದೈವದತ್ತವಾಗಿ ಬಂದ ಸುಮಧುರ ಕಂಠದಿಂದ ಸುಶ್ರಾವ್ಯವಾಗಿ ಹಾಡತೊಡಗಿದರು.

ಅದು ಭಾರತ ಸ್ವಾತಂತ್ರ್ಯ ಹೋರಾಟದ ಸಂದರ್ಭ. ಕರೀಂಖಾನರ ದೇಶಾಭಿಮಾನ ಹೋರಾಟದತ್ತ ಹೊರಳಿತು. ಜಾನಪದ ಗೀತೆಗಳನ್ನು ಹಾಡುತ್ತಾ ಕನ್ನಡ ಕಾವ್ಯಗಳ ಕಂಪನ್ನು ಅಸಾಧಾರಣ ವಾಗ್ಝರಿಯಿಂದ ಬಿತ್ತರಿಸುತ್ತಾ ಜನಸಾಗರವನ್ನು ಸೆರೆಹಿಡಿಯತೊಡಗಿದರು. ಕರೀಂಖಾನ್ ಹೋದ ಕಡೆ ಜನರ ಸಂತೆಯೇ ನೆರೆಯತೊಡಗಿತು. ಆಗಿನ ಅನೇಕಾನೇಕ ಕಾಂಗ್ರೆಸ್ ನಾಯಕರು ಕರೀಂಖಾನರ ನಿಕಟವರ್ತಿಗಳಾದರು. ಬ್ರಿಟಿಷ್ ಸರ್ಕಾರಕ್ಕೆ ಇವರ ಮೇಲೆ ಕಣ್ಣು ಬಿತ್ತು. ಅದರ ಹಿಂದೆಯೇ ಜೈಲು ವಾಸ. ಜೈಲಿನಿಂದ ಹೊರ ಬಂದ ನಂತರ ಮತ್ತೆ ಹಾಡುಗಳ, ಭಾಷಣಗಳ ಸುರಿಮಳೆ. ಇವರ ಮಾತುಗಳಿಗೆ ಮಂತ್ರಮುಗ್ಧರಾಗುತ್ತಿದ್ದ ಜನ ಇವರಿಗಾಗಿ ದಿನಗಟ್ಟಲೆ ಕಾಯುತ್ತಿದ್ದರು. ಮೈಲಿಗಟ್ಟಲೆ ನಡೆದು ಬರುತ್ತಿದ್ದರು. ಕರೀಂಖಾನ್ ಏಳು ಸಲ ಜೈಲುವಾಸ ಅನುಭವಿಸಿದರು.

ಇವರ ಸ್ವಾತಂತ್ರ್ಯ ಹೋರಾಟದಿಂದ ಸಂಸಾರದ ಮೇಲಾದ ಪರಿಣಾಮವನ್ನು ಈ ಸಂದರ್ಭದಲ್ಲಿಯೇ ಹೇಳಿಬಿಡುವುದು ಒಳ್ಳೆಯದು. ಮೊದಲ ಬಾರಿ ಜೈಲು ಸೇರಿ ಹೊರಬಂದ ನಂತರ ಬ್ರಿಟಿಷ್ ಅಧಿಕಾರಿಯೊಬ್ಬ ಕರೆಸಿ ಮುಂದೆ ಇದೇ ರೀತಿ ಚಳವಳಿಯಲ್ಲಿ ಪಾಲ್ಗೊಂಡರೆ, ಅಣ್ಣನ ಹೆಸರಿಗೆ ಇದ್ದ ಬಟ್ಟೆ ಅಂಗಡಿಯ ಲೈಸೆನ್ಸ್ ಅನ್ನು ರದ್ದು ಮಾಡುವುದಾಗಿ ಬೆದರಿಸಿದ. ಇದರಿಂದ ತನ್ನ ಕುಟುಂಬಕ್ಕೆ ಜೀವನದ ದಾರಿಯೇ ಇರುವುದಿಲ್ಲ ಎಂದು ಆತಂಕಗೊಂಡ ಯುವಕ ಕರೀಂಖಾನ್ ಬ್ರಿಟಿಷರ ಒಡೆತನದಲ್ಲಿದ್ದ ನೌಕಾಸೇನೆಗೆ ಕೆಲಸಕ್ಕೆ ಸೇರಿದರು. ಒಂದು ವರ್ಷ ಕಳೆದ ಮೇಲೆ ಇವರು ಜೈಲಿನಲ್ಲಿದ್ದ ದಾಖಲೆ ಬಹಿರಂಗಗೊಂಡು ಅಲ್ಲಿಂದ ಹೊರಹಾಕ ಲಾಯಿತಲ್ಲದೇ ತನ್ನ ಅಣ್ಣನಿಗೆ ಇದ್ದ ಲೈಸೆನ್ಸನ್ನು ಕೂಡ ರದ್ದುಪಡಿಸಲಾಯಿತು. ಕರೀಂಖಾನರ ಕುಟುಂಬ ಬೀದಿಗೆ ಬಿತ್ತು. ಕಡೆಗೆ ಇದರಿಂದ ರೋಸಿಹೋದ ಅವರು ಮತ್ತೆ ಅದೇ ಚಳವಳಿಯ ಮಾರ್ಗ ಹಿಡಿಯಬೇಕಾಯಿತು.

ಮುಂದೊಂದು ದಿನ ಭಾರತ ಸ್ವಾತಂತ್ರ್ಯವನ್ನು ಕಂಡಿತು. ಬ್ರಿಟಿಷರ ತೆಕ್ಕೆಯಿಂದ ಮುಕ್ತಗೊಂಡಿತು. ಆದರೇನು ಕರ್ನಾಟಕ ಒಂದು ರಾಜ್ಯವಾಗಿ ರೂಪುಗೊಂಡಿರಲಿಲ್ಲ. ಹಳೇ ಮೈಸೂರು ಹೊಸ ಮೈಸೂರು ಎಂಬ ಪ್ರಾಂತೀಯ ಭಾವನೆಯಿಂದ ಅನೇಕರು ಕಿತ್ತಾಡತೊಡಗಿದ್ದರು. ಇದೇ ಸಂದರ್ಭವನ್ನು ಉಪಯೋಗಿಸಿಕೊಂಡು ಉತ್ತರದ ಅನೇಕ ಕನ್ನಡ ಭಾಗಗಳನ್ನು ತನ್ನದಾಗಿಸಿಕೊಳ್ಳಲು ಮರಾಠಿ ಮತ್ತು ತೆಲುಗರು ಕಾಯಿದ್ದರು. ಕರೀಂಖಾನ್ ಕರ್ನಾಟಕದ ಏಕೀಕರಣ ಚಳವಳಿಗೂ ಧುಮುಕಿದರು. ಕನ್ನಡ ಜನರಿರುವ ಮೂಲೆ ಮೂಲೆಯನ್ನೂ ಸುತ್ತಿದರು. ತಮ್ಮ ವಿಚಾರಪೂರಿತ ಮುತ್ತಿನ ಮಾತುಗಳಿಂದ, ಸುಶ್ರಾವ್ಯ ಹಾಡುಗಳಿಂದ ಜನರಲ್ಲಿ ಕನ್ನಡಿಗರೊಂದೆಂಬ ಭಾವನೆ ಮೂಡಿಸುವಲ್ಲಿ ಸಫಲರಾದರು. ಏಕೀಕರಣದ ಸಂದರ್ಭದಲ್ಲಿ ಇವರು ಮತ್ತೆ ಜೈಲು ಕಾಣಬೇಕಾಯಿತು. ಆದರೆ ಕರೀಂಖಾನ್ ಮತ್ತು ಅವರ ಸಂಗಡಿಗರ ಹೆಬ್ಬಯಕೆ ಈಡೇರಿತು. ಕರ್ನಾಟಕ ರಾಜ್ಯ ವಿಶಾಲ ಮೈಸೂರಾಗಿ ಸಂಸ್ಥಾಪನೆಗೊಂಡಿತು.

ದೇಶ ಮತ್ತು ನಾಡಿಗೆ ತನ್ನನ್ನು ಅರ್ಪಿಸಿಕೊಂಡ ಕರೀಂಖಾನ್ ತನ್ನ ಸ್ವಂತ ಜೀವನದ ಬಗ್ಗೆ ಯೋಚಿಸಲೇ ಇಲ್ಲ. ಮದುವೆ ಮಕ್ಕಳೆಂಬ ಮಮಕಾರದ ಸಂಸಾರದ ಕನಸು ಇವರಿಂದ ದೂರವೇ ಉಳಿಯಿತು. ಕರ್ನಾಟಕದ ಏಕೀಕರಣದ ಸಂದರ್ಭಕ್ಕೆ ಆಗಲೇ ಐವತ್ತು ಮೀರಿದ್ದ ಕರೀಂಖಾನ್ ಬ್ರಹ್ಮಚಾರಿಯಾಗಿಯೇ ಉಳಿದು ತಮ್ಮನ್ನು ಸಂಪೂರ್ಣವಾಗಿ ದೇಶಕ್ಕೆ ಅರ್ಪಿಸಿಕೊಂಡರು.

ಏಕೀಕರಣದ ನಂತರ ಕರ್ನಾಟಕದ ರಾಜಕೀಯದಿಂದ ಕರೀಂಖಾನ್ ದೂರ ಸರಿಯತೊಡಗಿದರು. ರಾಜಕಾರಣಿಗಳಲ್ಲಿ ಸ್ವಾರ್ಥ, ಲಾಲಸೆ, ಸ್ವಜನ ಪಕ್ಷಪಾತಗಳು ಅತಿಯಾಗತೊಡಗಿದಾಗ ಕರೀಂಖಾನ್ ಅವರಂಥ ಎಲೆ ಮರೆಯ ಕಾಯಿ ಎಲೆಮರೆಯಲ್ಲಿಯೇ ಹಣ್ಣಾಗಬೇಕಾಯಿತು. ಅಷ್ಟೇ ಅಲ್ಲ, ಕರೀಂಖಾನರು ಸಂಗ್ರಹಿಸಿ ಪ್ರಕಟಿಸಿದ ಪುಸ್ತಕಗಳ ಹಕ್ಕನ್ನು ಲಪಟಾಯಿಸಿದ ಕೆಲವು ದುರಾಸೆಯ ಪ್ರಕಾಶಕರು ಖಾನರ ಮುಗ್ಧತೆಯನ್ನು ಸಂಪೂರ್ಣ ದುರುಪಯೋಗಪಡಿಸಿಕೊಂಡರು. ಕರೀಂಖಾನ್ ದಿನದ ಅನ್ನಕ್ಕಾಗಿ ಪರದಾಡ ಬೇಕಾಯಿತು. ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಜಗತ್ತು ಯಾರೋ ಕೆಲವರ ಸ್ವಾರ್ಥದ ಸ್ವತ್ತಾಗತೊಡಗಿದಾಗ ಬೇಸತ್ತ ಕರೀಂಖಾನ್ ವಿಧಿಯಿಲ್ಲದೆ ಅನ್ನವನ್ನು ಅರಸುತ್ತಾ ಸಿನಿಮಾ ಜಗತ್ತಿನಲ್ಲಿ ತನ್ನನ್ನು ಗುರ್ತಿಸಿ ಕೊಳ್ಳಬೇಕಾದ ಅನಿವಾರ್ಯತೆ ಒದಗಿತು. ನಾಡಿಗಾಗಿ ದುಡಿದ ಕರೀಂಖಾನ್ ಅನ್ನಕ್ಕಾಗಿ ಮದರಾಸ್ ಸೇರುವಂಥ ಭೀಕರ ಪರಿಸ್ಥಿತಿಯನ್ನು

ಕನ್ನಡಿಗರಾದ ನಾವೇ ನಿರ್ಮಿಸಿಬಿಟ್ಟೆವು. ಸಾಹಿತ್ಯ ಸಂಗೀತಗಳ ಬಗ್ಗೆ ಆಳವಾದ ಪರಿಜ್ಞಾನವಿದ್ದ ಕರೀಂಖಾನ್ ಚಿತ್ರಕಥೆ, ಹಾಡು, ಸಂಭಾಷಣೆಗಳನ್ನು ಬರೆದು ಜೀವನ ಮಾಡತೊಡಗಿದರು. 'ನಟವರ ಗಂಗಾಧರ'ದಂಥ ಭಕ್ತಿಪ್ರಧಾನ ಗೀತೆಗಳಿಂದ ಹಿಡಿದು 'ಬಾರೇ ನೀ ಚೆಲುವೆ'ಯಂಥ ರಸಭರಿತ ಹಾಡಿನ ವರೆಗೆ ಸಿನಿಮಾ ಗೀತೆಗಳಿಗೂ ತಮ್ಮದೇ ಆದ ಕಂಪನ್ನು ಖಾನ್ ತುಂಬಿದರು.




ಆದರೆ ಸಿನಿಮಾ ಜಗತ್ತು ಕರೀಂಖಾನ್ ಅಂಥವರಿಗಲ್ಲ. ಅಲ್ಲಿಯೂ ಕರೀಂಖಾನ್‌ರ ಪಾಲಿಗೆ ದುರ್ದಿನಗಳೇ ತುಂಬಿ ಕೊಂಡವು. ಕರೀಂಖಾನರ ಅನಿವಾರ್ಯ ಸ್ಥಿತಿಯನ್ನು ಅರಿತು ಕೊಂಡಿದ್ದ ಕೆಲವು ಖದೀಮ ನಿರ್ಮಾಪಕರು ಊಟ ಕೊಡಿಸಿ ಹಾಡು ಬರೆಸಿಕೊಂಡು ಕಾಟಾಚಾರಕ್ಕೆ ಒಂದಿಷ್ಟು ಹಣಕೊಟ್ಟು ಕಳಿಸುತ್ತಿದ್ದರು. ಅಂದಂದಿನ ಊಟದ ಬಗ್ಗೆ ಮಾತ್ರ ಚಿಂತಿಸುತ್ತಿದ್ದ ಕರೀಂಖಾನರು ನಾಳೆಯ ಬಗ್ಗೆ ಯೋಚಿಸಲೇ ಇಲ್ಲ. ಅವರು ಕೊಟ್ಟಷ್ಟನ್ನು ಪಡೆದು ಸುಮ್ಮನಾಗುತ್ತಿದ್ದರು. ಇವರ ಕಥೆಗಳನ್ನು ಕದ್ದವರೆಷ್ಟು ಜನವೋ, ಇವರ ಹೆಸರಿನ ಸಂಭಾಷಣೆಗಳನ್ನು ತನ್ನದು ಎಂದವರೆಷ್ಟು ಜನವೋ, ಅಂತೂ ಹತ್ತು ವರ್ಷಗಳ ಆ ಶೋಷಣೆಯ ಬದುಕನ್ನೇ ತಾಳ್ಮೆಯಿಂದ ಕಳೆದ ಕರೀಂಖಾನ್ ರೋಸೆದ್ದು ಮತ್ತೆ ಬೆಂಗಳೂರಿನ ಕಡೆಗೆ ಮುಖ ಮಾಡಿದರು. ಈ ಮಧ್ಯೆ ಕನ್ನಡದ ಸಾರಸ್ವತಲೋಕದಿಂದ ಬಹುದೂರ ಪಯಣಿಸಿದ್ದ ಕರೀಂಖಾನರಿಗೆ ಮತ್ತೊಂದು ಆಶ್ಚರ್ಯ ಕಾದಿತ್ತು. ಇದ್ದಕ್ಕಿದ್ದ ಹಾಗೆ ಸರ್ಕಾರ ಕರೀಂಖಾನ್ ಜಾನಪದ ಅಕಾಡೆಮಿ ಅಧ್ಯಕ್ಷ ಎಂದು ಘೋಷಿಸಿತು.

ಆಶ್ಚರ್ಯಗೊಂಡ ಕರೀಂಖಾನ್ ತಮ್ಮ ಅಭಿಮಾನಿಗಳ ಹತ್ತಿರ ಹೊಟ್ಟೆಗೆ ಹಿಟ್ಟಿಲ್ಲ, ಜುಟ್ಟಿಗೆ ಮಲ್ಲಿಗೆ ಏಕೆ ಎಂದು ಆ ಪದವಿಯ ಬಗ್ಗೆ ನಿರ್ವ್ಯಾಮೋಹ ಪ್ರಕಟಿಸಿದರು. ಈ ಜಾನಪದ ಭೀಷ್ಮನನ್ನು ನೆನಪಿಸಿಕೊಂಡು ಸರ್ಕಾರ ಅವರನ್ನು ಜಾನಪದ ಅಕಾಡೆಮಿಗೆ ಅಧ್ಯಕ್ಷರನ್ನಾಗಿ ಮಾಡಿದ್ದಕ್ಕೆ ಕರ್ನಾಟಕದ ಅನೇಕರು ಸಂತೋಷಪಟ್ಟರೆಂಬುದೇನೋ ನಿಜ. ಆದರೆ ಕರೀಂಖಾನರ ವ್ಯಕ್ತಿತ್ವವನ್ನು ಅರಿಯದ ಕೆಲವು ಜನ ಅವರ ನೇಮಕವನ್ನು ಅವರ ವಯಸ್ಸಿನ ಕಾರಣಕ್ಕಾಗಿ ಟೀಕಿಸಿದರು. ಕರೀಂಖಾನ್ ಹಿಂದೆ ಮುಂದೆ ನೋಡದೆ ರಾಜೀನಾಮೆ ಪ್ರಕಟಿಸಿದರು. ಆಗ ಸರ್ಕಾರವೇ ಕರೀಂಖಾನರ ಬಾಗಿಲಿಗೆ ಬಂದು ಅವರ ಮನವೊಲಿಸ ಬೇಕಾಯಿತು. ಅಕಾಡೆಮಿಯ ಅಧ್ಯಕ್ಷ ಸ್ಥಾನದಿಂದ ಕರೀಂಖಾನರಿಗೆ ಯಾವ ಆರ್ಥಿಕ ಲಾಭವೂ ಆಗಲಿಲ್ಲ. ಅದೊಂದು ಗೌರವದ ಹುದ್ದೆ ಮಾತ್ರ. ಅಕಾಡೆಮಿಯ ಅಧ್ಯಕ್ಷರಾಗಿ ನೇಮಕಗೊಳ್ಳುತ್ತಲೇ ಕರೀಂಖಾನ್ ಮತ್ತೆ ಜಾನಪದ ಮಣ್ಣಿಗೆ, ಗ್ರಾಮೀಣ ಜನತೆಯ ಸಂಸ್ಕೃತಿಗೆ ತಮ್ಮನ್ನು ಅರ್ಪಿಸಿಕೊಂಡರು.

ತಮ್ಮ ಲಕಿನೆಯ ವರ್ಷದಲ್ಲಿ ಜಾನಪದ ಅಕಾಡೆಮಿಯ ಅಧ್ಯಕ್ಷರಾಗಿ ನೇಮಕಗೊಂಡ ಕರೀಂಖಾನ್ ಎಲ್ಲರೂ ಬೆರಗುಗೊಳ್ಳುವಂಥ ಕಾರ್ಯಗಳನ್ನು ಮಾಡಿ ತೋರಿಸಿದರು. ಕೇವಲ ಮೂರು ವರ್ಷಗಳ ಅವಧಿಯಲ್ಲಿ ವಿನೂತನ ಯೋಜನೆಗಳನ್ನು ಹಮ್ಮಿಕೊಂಡರು. ಸಹ್ಯಾದ್ರಿಯ ದಟ್ಟ ಕಾಡಿನ ಕಣಿವೆ ಕಂದರಗಳಿಗೂ ಹೋಗಿ ಗಿರಿಜನರ ಜೀವನ ಮತ್ತು ಸಂಸ್ಕೃತಿಗಳ ಬಗ್ಗೆ ೧೫೦ ಗಂಟೆಗೂ ಮಿಕ್ಕಿ ನೋಡುವಷ್ಟು ವೀಡಿಯೊ ಚಿತ್ರೀಕರಣ ಮಾಡಿದರು. ಉತ್ತರ ಕರ್ನಾಟಕದಾದ್ಯಂತ ಜಾನಪದ ವಿಚಾರ ಸಂಕಿರಣ ಹಾಗೂ ಸಮಾವೇಶಗಳನ್ನು ನಡೆಸಿದರು. ಪ್ರಪ್ರಥಮ ಬಾರಿಗೆ ಬುಡಕಟ್ಟು ಕಲಾವಿದರನ್ನು ಗುರುತಿಸಿ ವಿಶೇಷ ಪ್ರಶಸ್ತಿಗಳನ್ನು ನೀಡಿದರು. ಗಡಿಭಾಗಗಳಲ್ಲಿ ಜನಪದ ಕಲಾಮೇಳಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ನಡೆಸಿದರು. ಯಾರು ಮುದುಕ ಎಂದು ಹಂಗಿಸಿದ್ದರೋ ಅವರೇ ಬೆಕ್ಕಸ ಬೆರಗಾಗುವಂತೆ ಹತ್ತಾರು ಸಾವಿರ ಮೈಲಿಗಳಷ್ಟು ಸುತ್ತಿ ಜಾನಪದ ಲೋಕಕ್ಕೆ ಹೊಸ ಜೀವ ತುಂಬಿದರು. ಹೀಗೆ ಸಂಚಾರದಲ್ಲಿದ್ದಾಗ ೮೪ರ ಈ ಮುದುಕ ತುಂಬಿ ಹರಿಯುವ ಕೃಷ್ಣಾ ನದಿಯನ್ನು ಕಂಡು ಪುಲಕಿತರಾಗಿ ಏಕಾಏಕಿ ನೀರಿಗೆ ಧುಮುಕಿ ಈಜಿದ ಪ್ರಸಂಗವೂ ಉಂಟು.

ಆಗಿನ ಕಾಲಕ್ಕೆ ಕೇವಲ ಎಂಟನೆಯ ತರಗತಿಯವರೆಗೆ ಮಾತ್ರ ಶಿಕ್ಷಣ ಪಡೆದ ಕರೀಂಖಾನ್ ಸಂಸ್ಕೃತ, ಕನ್ನಡ ಮತ್ತು ಉರ್ದು ಭಾಷೆಗಳಲ್ಲಿ ಒಬ್ಬ ಪಂಡಿತರಾಗಿ ಬೆಳೆದದ್ದು ಅವರಲ್ಲಿದ್ದ ಛಲ ಮತ್ತು ಶಿಸ್ತಿನ ದ್ಯೋತಕ. ಮುಸ್ಲಿಂನೊಬ್ಬ ಕನ್ನಡದಲ್ಲಿ ಬರೆಯಬಲ್ಲನೇ ಸಂಸ್ಕೃತ ಮಾತನಾಡಬಲ್ಲನೇ ಎಂಬ ವ್ಯಂಗ್ಯಕ್ಕೆ ಉತ್ತರವಾಗಿ ಸಂಸ್ಕೃತ ಭೂಯಿಷ್ಠ ರೂಪದ ಕರೀಂಖಾನರ ಬರಹ ಕಂಡುಬರುತ್ತದೆ. ಅನೇಕ ನಾಟಕಗಳನ್ನು, ಒಂದು ಕಾದಂಬರಿಯನ್ನು ವೈಚಾರಿಕ ಬರಹಗಳನ್ನೂ ಬರೆದ ಕರೀಂಖಾನ್ ಕಡೆಗೆ ಪೂರ್ಣವಾಗಿ ಅರ್ಪಿಸಿಕೊಂಡದ್ದು ಜನಪದ ಸಾಹಿತ್ಯ ಸಂಗ್ರಹಕ್ಕೆ. ಆಗಿನ ಕಾಲಕ್ಕೆ ಪ್ರಚಲಿತವಾಗಿದ್ದ ಸುಪ್ರಸಿದ್ಧ ಜನಪದ ಗೀತೆಗಳನ್ನು ಕರೀಂಖಾನ್ ತೀವ್ರಾಸಕ್ತಿಯಿಂದ ಸಂಗ್ರಹಿಸಿದರು. ಸಣ್ಣ ಸಣ್ಣ ಹೊತ್ತಿಗೆಗಳಲ್ಲಿ ಅವುಗಳನ್ನು ಪ್ರಕಟಿಸಿ, ಮೂಲಧಾಟಿಯಲ್ಲಿ ಹಾಡಿ ತೋರಿಸಿ ನಿರ್ಲಕ್ಷ್ಯಗೊಂಡಿದ್ದ ಪ್ರಕಾರವೊಂದಕ್ಕೆ ಜೀವ ತುಂಬಿದವರಲ್ಲಿ ಕರೀಂಖಾನ್ ಪ್ರಮುಖರು. ಇವರ ಈ ಜಂಗಮ ಸೇವೆಯನ್ನು ನೆನಪಿಸಿಕೊಳ್ಳುತ್ತ ಪ್ರಮುಖ ಸಮಾರಂಭವೊಂದರಲ್ಲಿ ಕರೀಂಖಾನರಿಗೆ ಡಾ|| ಜಿ.ಎಸ್. ಶಿವರುದ್ರಪ್ಪ ಅವರು 'ಜಾನಪದ ಜಂಗಮ' ಎಂಬ ಬಿರುದು ನೀಡಿ ಸನ್ಮಾನಿಸಿದರು. ಕಲ್ಬುರ್ಗಿ ವಿಶ್ವವಿದ್ಯಾಲಯ ಕರೀಂಖಾನರಿಗೆ ಡಾಕ್ಟರೇಟ್ ಪದವಿ ನೀಡಿ ಗೌರವಿಸಿತು. ಕರ್ನಾಟಕ ವಿಶ್ವವಿದ್ಯಾಲಯ ತನ್ನ ಅಖಿಲ ಕರ್ನಾಟಕ ಜಾನಪದ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿತು. ಕನ್ನಡ ವಿಶ್ವವಿದ್ಯಾಲಯ ತನ್ನ ಪ್ರತಿಷ್ಠಿತ ನಾಡೋಜ ಗೌರವ ಪದವಿಯನ್ನು ಅರ್ಪಿಸಿತು. ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ, ವಿವಿಧ ಕವಿಗೋಷ್ಠಿಗಳ ಅಧ್ಯಕ್ಷ ಮುಂತಾಗಿಯೂ ಕರೀಂಖಾನ್ ಗೌರವಿಸಲ್ಪಟ್ಟಿದ್ದಾರೆ. ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿಯಲ್ಲದೆ ಜಾನಪದ ಕ್ಷೇತ್ರದ ಅತ್ಯುನ್ನತ ಪದವಿ ಎನಿಸಿದ ಜಾನಪದಶ್ರೀ ನೀಡಿ ಸನ್ಮಾನಿಸಿತು. ಆದರೆ ಯಾವ ಪ್ರಶಸ್ತಿಗಳೂ ಕರೀಂಖಾನರ ಹೊಟ್ಟೆಯನ್ನು ತುಂಬಲಿಲ್ಲ ಎಂಬುದು ಮಾತ್ರ ನಿಜ. ಸ್ವಾತಂತ್ರ್ಯ ಹೋರಾಟ ಮಾಡಿ ಹಲವು ಬಾರಿ ಜೈಲು ವಾಸ ಅನುಭವಿಸಿದ ಕರೀಂಖಾನರಿಗೆ, ಸ್ವಾತಂತ್ರ್ಯ ಯೋಧರ ನಿವೃತ್ತಿ ವೇತನವೂ ಸಿಗಲಿಲ್ಲ. ವಿಪರ್ಯಾಸವೆಂದರೆ ಕರೀಂಖಾನರು ಶಿಫಾರಸು ಮಾಡಿದ ಯೋಧರಿಗೆ ಆ ವೇತನ ದಕ್ಕಿತ್ತು. ಸ್ವತಃ ಕೇಳಿಕೊಳ್ಳಲಿಲ್ಲವಾದ ಕಾರಣಕ್ಕೆ ಕರೀಂಖಾನರಿಗೆ ಅದು ದಕ್ಕಲಿಲ್ಲವಂತೆ. ಮಹಾ ಸ್ವಾಭಿಮಾನಿಯಾದ ಈ ಅಜ್ಜ ಯಾವತ್ತೂ ಯಾವುದನ್ನೂ ಕೇಳಿದವರಲ್ಲ. ಇದ್ದದ್ದನ್ನು ಧಾರೆ ಯೆರೆಯುವುದಷ್ಟೇ ಅವರ ಹುಟ್ಟು ಗುಣ. ಹೀಗಾಗಿಯೇ ನಮ್ಮ ಸರ್ಕಾರ ನೀಡುವ ಐದು ನೂರು ರೂಪಾಯಿಗಳ ಗೌರವಧನ ವಾರ ತುಂಬುವಷ್ಟರಲ್ಲಿ ಅವರ ಜೇಬಿನಲ್ಲಿರುತ್ತಿರಲಿಲ್ಲ. ಅಪ್ಪಟ ಗಾಂಧಿವಾದಿಯಾದ ಇವರಿಗೆ ಎಂದೂ ಯಾವ ದುಶ್ಚಟಗಳೂ ಅಂಟಿಕೊಳ್ಳಲಿಲ್ಲ.

ಇಡೀ ಶತಮಾನವನ್ನು ಕಂಡ ಕರೀಂಖಾನ್ ಈ ದೇಶದ ಬಗೆಗೆ ಏನು ಹೇಳುತ್ತಿದ್ದರು ಎಂಬುದು ಬಹಳ ಮುಖ್ಯ. ಅಂಥ ಪ್ರಶ್ನೆಗಳನ್ನು ಹಾಕಿದಾಗ ನಗೆ ಮುಖದ ಮೇಲಿನ ಸುಕ್ಕುಗಳು ಬಿಗಿಯಾಗುತ್ತಿದ್ದವು. ಕಾಂತಿಯುಕ್ತ ಕಣ್ಣುಗಳು ಆಕಾಶವನ್ನು ದಿಟ್ಟಿಸುತ್ತಿದ್ದವು. ಮೌನ ಆವರಿಸುತ್ತಿತ್ತು. ಮೌನವನ್ನು ಮುರಿದು ಯಾರ ಸುಖಕ್ಕಾಗಿ ನಾವು ಬ್ರಿಟಿಷರನ್ನು ಓಡಿಸಿದೆವು, ಜನರನ್ನು ಅರ್ಥಮಾಡಿಕೊಳ್ಳದ ಈ ರಾಜಕೀಯ ಸ್ವಾರ್ಥಿಗಳು, ಪಾಪಿಗಳು ಮೆರೆಯಲಿ ಎಂದೇ! ನಾವು ತಪ್ಪು ಮಾಡಿಬಿಟ್ಟೆವು. ಕಡೆಗೆ ಆ ಬ್ರಿಟಿಷರ ಕಾಲದಲ್ಲಿ ಇದ್ದ ಶಿಸ್ತಾದರೂ ಈ ದೇಶಕ್ಕೆ ಇಲ್ಲದೇ ಹೋಯಿತಲ್ಲಾ ಎಂದು ದುಗುಡದಿಂದ ಹೇಳಿ ನಿಟ್ಟುಸಿರು ಬಿಡುತ್ತಿದ್ದರು. ಆತ್ಮೀಯರೆದುರು ತಮ್ಮ ಇಡೀ ಜೀವಮಾನದ ಕನಸುಗಳು ಭಗ್ನಗೊಂಡ ಬಗೆಯನ್ನು ಹೇಳಿಕೊಳ್ಳುವಾಗ ಕಣ್ಣುಗಳು ತೇವವಾಗುತ್ತಿದ್ದದೂ ಉಂಟು. ಗುಡಿ, ಚರ್ಚ್, ಮಸೀದಿಗಳನ್ನು ನಿರ್ಭಾವದಿಂದ ನೋಡಿದ ಕರೀಂಖಾನ್ ಮನುಷ್ಯನ ನಡುವಿನ ಕಂದರ ಹೆಚ್ಚಾಗುತ್ತಿದ್ದ ಬಗ್ಗೆ, ಕೋಮುಗಲಭೆ, ಅತ್ಯಾಚಾರ, ಹಿಂಸಾಚಾರ, ದರೋಡೆ, ಸುಲಿಗೆಗಳ ಬಗ್ಗೆ ಅಪಾರ ವೇದನೆಯಿಂದ ಮಾತನಾಡುತ್ತಿದ್ದರು. ಮಾತನಾಡುತ್ತಾ ಉದ್ವಿಗ್ನಗೊಳ್ಳುತ್ತಿದ್ದರು. ಹಾಗೆಯೇ ಮತ್ತೆ ಮೌನಿಯಾಗಿ ತಮ್ಮ ಪ್ರೀತಿಯ ಪುಟ್ಟ ಕೊಠಡಿಯಲ್ಲಿ ಮುದುಡಿ ಮಲಗುತ್ತಿದ್ದರು. ಕರೀಂಖಾನರಿಗೆ ಜಾನಪದ ಕ್ಷೇತ್ರದ ಅತ್ಯುನ್ನತ ಪ್ರಶಸ್ತಿಯಾದ ಜಾನಪದಶ್ರೀ ಪ್ರಥಮವಾಗಿ ಲಭಿಸಿತು. ಇಡೀ ಕರ್ನಾಟಕದಲ್ಲಿ ಈ ಪ್ರಥಮಕ್ಕೆ ಕರೀಂಖಾನರು ನಿಜಕ್ಕೂ ಅರ್ಹರಾಗಿದ್ದರು. ಕರೀಂಖಾನರಿಗೆ ಇದರಿಂದಾಗಿ ಲಭಿಸಿದ ಒಂದು ಲಕ್ಷ ರೂಪಾಯಿ ಹಣ ಅವರ ಜೇಬಿನಲ್ಲಿ ಉಳಿಯಲಿಲ್ಲ. ಆದರೆ ಪ್ರಶಸ್ತಿಯಿಂದ ಸರ್ಕಾರ ತನ್ನ ಋಣ ತೀರಿಸಿ ಕೊಂಡಿತು ಎಂದು ಭಾವಿಸಲಾಯಿತು. ಕರೀಂಖಾನ್ ತಮಗೊಂದು ಮನೆ ಕೊಡಿ ಎಂದು ಯಾರನ್ನೂ ಯಾವಾಗಲೂ ಕೇಳಿಕೊಂಡಿರಲಿಲ್ಲ. ಆದರೆ ಸರ್ಕಾರವೇ ಅದನ್ನು ಹೇಳುತ್ತಾ ಬಂದಿತು. ಈ ಕೆಟ್ಟ ವ್ಯವಸ್ಥೆಯಲ್ಲಿ ಅದು ಸಾಧ್ಯವಾಗಲೇ ಇಲ್ಲ. ಆದರೆ ಕರೀಂ ಖಾನರನ್ನು ಕನ್ನಡ ಜನತೆ ಎಂದೂ ಮರೆಯಲಿಲ್ಲ, ಅವರನ್ನು ಮರೆಯುವ ಹಾಗೂ ಇಲ್ಲ.

**ಡಾ|| ಹಿ. ಚಿ. ಬೋರಲಿಂಗಯ್ಯ**
ಪ್ರಾಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಸುಮಾರು ಎರಡು-ಎರಡೂವರೆ ದಶಕಗಳ ಹಿಂದೆ ಪುಸ್ತಕ ಸಂಸ್ಕೃತಿಯು ಒಂದು ಬಗೆಯ ಆತಂಕ ಮತ್ತು ಸವಾಲುಗಳನ್ನು ಎದುರಿಸಬೇಕಾಗಿಬಂದಿತು. ಅದೆಂದರೆ, ವಿವಿಧ ವಿದ್ಯುನ್ಮಾನ ಮಾಧ್ಯಮಗಳ ಆಕರ್ಷಣೆ ಮತ್ತು ಆಕ್ರಮಣಗಳಿಂದಾಗಿ ಪುಸ್ತಕಗಳೇ ಅಪ್ರಸ್ತುತವಾಗಬಹುದೋ ಏನೋ, ಪುಸ್ತಕಗಳನ್ನು ಓದುವವರ ಸಂಖ್ಯೆ ಗಣನೀಯವಾಗಿ ಕುಸಿಯಬಹುದೋ ಏನೋ – ಎಂಬ ಆತಂಕ. ಅದು ಹೇಗೋ ಈ ಆತಂಕ ತಾತ್ಕಾಲಿಕವಾದದ್ದು ಎಂಬುದು ಈಗ ಸಾಬೀತಾಗಿದೆ. ನಮಗೂ ಪುಸ್ತಕಗಳಿಗೂ ಇರುವ ಆತ್ಮೀಯ ಬಾಂಧವ್ಯವನ್ನು ಯಾವ ಮಾಧ್ಯಮವೂ ಕುಂಠಿತಗೊಳಿಸಲಾರದು ಎಂಬ ಸತ್ಯ ಮನವರಿಕೆಯಾಗಿದೆ.



# ಪುಸ್ತಕ ಸಂಸ್ಕೃತಿ

ಪುಸ್ತಕ ಸಂಸ್ಕೃತಿಯ ಸಂವರ್ಧನೆಯಲ್ಲಿ ಕರ್ನಾಟಕದ ಪ್ರಕಾಶನ ಸಂಸ್ಥೆಗಳ ಕೊಡುಗೆ ಬಹು ದೊಡ್ಡದು. ಪುಸ್ತಕ ಪ್ರಕಾಶನದಲ್ಲಿ ಈಗಾಗಲೇ ಹಲವು ವಿಕ್ರಮಗಳನ್ನು ಸ್ಥಾಪಿಸಿರುವ ಬೆಂಗಳೂರಿನ ನವಕರ್ನಾಟಕ ಪ್ರಕಾಶನ ಕಳೆದ ನಾಲ್ಕು ದಶಕಗಳ ಕಾಲಮಾನದಲ್ಲಿ ಎರಡು ಸಾವಿರಕ್ಕೂ ಮೀರಿದ ಕೃತಿಗಳನ್ನು ಪ್ರಕಟಿಸಿದೆ ಎನ್ನುವುದು ಆಶ್ಚರ್ಯದ ಹಾಗೂ ಮೆಚ್ಚುಗೆಯ ಸಂಗತಿಯಾಗಿದೆ. ಅದು ಪ್ರಕಟಿಸಿರುವ ಕೃತಿಗಳ ವಸ್ತು ವೈವಿಧ್ಯ ನಿಜಕ್ಕೂ ಬೆರಗುಗೊಳಿಸುವಂತಿದೆ. ನವಸಾಕ್ಷರರಿಂದ ಮೊದಲುಗೊಂಡು ವಿವಿಧ ವಿಷಯಗಳಲ್ಲಿನ ಪರಿಣತರವರೆಗೆ ವಿವಿಧ ಸ್ತರಗಳ ಓದುವ ವರ್ಗದ ಪರಿಭಾವನೆ ಮತ್ತು ಉಪಯೋಗಕ್ಕೆ ಸಲ್ಲುವ ಬಹುಸಂಖ್ಯೆಯ ಕೃತಿಗಳನ್ನು ಇದು ಹೊರತಂದಿದೆ. ನಮ್ಮ ಸಮಕಾಲೀನತೆಯ ನಿಜವಾದ ಅಗತ್ಯಗಳೇನು ? ಬದುಕಿನ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ತಿಳಿವಳಿಕೆಯನ್ನು, ತಜ್ಞರ ಮೂಲಕ ಕನ್ನಡ ಜನತೆಗೆ ಮುಟ್ಟಿಸುವುದು ಹೇಗೆ ? ಈ ಜಗತ್ತಿನ ವಿದ್ಯಮಾನಗಳನ್ನು ಕನ್ನಡಿಗರಿಗೆ ಕನ್ನಡದ ಮೂಲಕ ಪರಿಚಯ ಮಾಡಿಕೊಡುತ್ತ ಅವರನ್ನು ತಕ್ಕ ಎಚ್ಚರದಲ್ಲಿ ನಿಲ್ಲಿಸುವುದು ಹೇಗೆ ? ಮುಖ್ಯವಾಗಿ ನಮ್ಮ ಜನಮನದಲ್ಲಿ ವೈಚಾರಿಕ ಬುದ್ಧಿ ಹಾಗೂ ವೈಜ್ಞಾನಿಕ ಮನೋಧರ್ಮವನ್ನು ಬೆಳೆಯಿಸುವುದು ಹೇಗೆ – ಇತ್ಯಾದಿ ಜನಪರ ಕಾಳಜಿಗಳು ನವಕರ್ನಾಟಕ ಪ್ರಕಾಶನದ ಪುಸ್ತಕೋದ್ಯಮದ ಹಿಂದಿರುವ ಉದ್ದೇಶಗಳಾಗಿವೆ. ಹೀಗಾಗಿ ಈ ಸಂಸ್ಥೆಯ ದೃಷ್ಟಿಯಲ್ಲಿ ಪುಸ್ತಕೋದ್ಯಮ ಕೇವಲ ಒಂದು ವಾಣಿಜ್ಯ ವ್ಯವಹಾರವಾಗದೆ, ಒಂದು ಸಾಂಸ್ಕೃತಿಕ ಜವಾಬ್ದಾರಿಯೂ ಆಗಿದೆ.

ಸುಮಾರು ಎರಡು-ಎರಡೂವರೆ ದಶಕಗಳ ಹಿಂದೆ ಪುಸ್ತಕ ಸಂಸ್ಕೃತಿಯು ಒಂದು ಬಗೆಯ ಆತಂಕ ಮತ್ತು ಸವಾಲುಗಳನ್ನು ಎದುರಿಸಬೇಕಾಗಿಬಂದಿತು. ಅದೆಂದರೆ, ವಿವಿಧ ವಿದ್ಯುನ್ಮಾನ ಮಾಧ್ಯಮಗಳ ಆಕರ್ಷಣೆ ಮತ್ತು ಆಕ್ರಮಣಗಳಿಂದಾಗಿ ಪುಸ್ತಕಗಳೇ ಅಪ್ರಸ್ತುತವಾಗಬಹುದೋ ಏನೋ, ಪುಸ್ತಕಗಳನ್ನು ಓದುವವರ ಸಂಖ್ಯೆ ಗಣನೀಯವಾಗಿ ಕುಸಿಯಬಹುದೋ ಏನೋ, ಎಂಬ ಆತಂಕ. ಅದು ಹೇಗೋ ಈ ಆತಂಕ ತಾತ್ಕಾಲಿಕವಾದದ್ದು ಎಂಬುದು ಈಗ ಸಾಬೀತಾಗಿದೆ. ನಮಗೂ ಪುಸ್ತಕಗಳಿಗೂ ಇರುವ ಆತ್ಮೀಯ ಬಾಂಧವ್ಯವನ್ನು ಯಾವ ಮಾಧ್ಯಮವೂ ಕುಂಠಿತಗೊಳಿಸಲಾರದು ಎಂಬ ಸತ್ಯ ಮನವರಿಕೆಯಾಗಿದೆ. ಈಚೆಗೆ ಪುಸ್ತಕೋದ್ಯಮ ಮೊದಲಿಗಿಂತಲೂ ಹೆಚ್ಚು ಭರಾಟೆಯಿಂದ ಮುಂದುವರಿದಿದೆ. ಪುಸ್ತಕ ಬಿಡುಗಡೆಯ ಸಮಾರಂಭಗಳು ನಮ್ಮ ಸಂದರ್ಭದ ವಿಶೇಷ ಆಕರ್ಷಣೆಗಳಾಗಿವೆ. ಬಹುಸಂಖ್ಯೆಯ ಪುಸ್ತಕಗಳು ಪ್ರಕಟವಾಗುತ್ತಿರುವುದನ್ನು ನೋಡಿದರೆ, ಓದುವವರ ಸಂಖ್ಯೆ ಹಾಗೂ ಕೊಳ್ಳುವವರ ಸಂಖ್ಯೆ ಮೊದಲಿಗಿಂತಲೂ ಹೆಚ್ಚಾಗುತ್ತಿದೆಯೇನೋ ಎಂದು ತೋರುತ್ತದೆ. ಇದರ ನಿಜವನ್ನು ಪುಸ್ತಕೋದ್ಯಮದಲ್ಲಿ ತೊಡಗಿಕೊಂಡವರೇ ಹೇಳಬೇಕು. ಆದರೆ ಒಂದು ವಿಚಾರವಂತೂ ನಿಜ. ಕಳೆದ ಕಾಲು ಶತಮಾನಕ್ಕೂ ಮೀರಿದ ಕಾಲಮಾನದಲ್ಲಿ ಬರೆಯುವವರ ಸಂಖ್ಯೆ ಹೆಚ್ಚಾಗಿದೆ. ಬದುಕಿನ ವಿವಿಧ ಸ್ತರಗಳನ್ನು ಪ್ರತಿನಿಧಿಸುವ, ಅಪರಿಚಿತವಾದ ಅನೇಕ ಅನುಭವ ಪ್ರಪಂಚಗಳನ್ನು ಅನಾವರಣಗೊಳಿಸುವ ಬಹುಸಂಖ್ಯೆಯ ಬರಹಗಾರರು ಕಾಣಿಸುತ್ತಾರೆ. ಹಾಗೆಯೇ ಕರ್ನಾಟಕದ ವಿವಿಧ ಪರಿಸರಗಳಲ್ಲಿ ಪುಸ್ತಕ ಪ್ರಕಟಣೆಯ ಕಾರ್ಯ ವಿಸ್ತರಿಸತೊಡಗಿದೆ. ಹಾಗೆ ಪ್ರಕಟವಾಗುತ್ತಿರುವ ಪುಸ್ತಕಗಳ ಮುದ್ರಣದ ಸೊಗಸು, ಮುಖಪುಟದ ವಿನ್ಯಾಸ, ಕವಚದ ಆಕರ್ಷಣೆ - ಇತ್ಯಾದಿ ಲಕ್ಷಣಗಳಿಂದ ಪುಸ್ತಕಗಳು ಯಾರ ಗಮನವನ್ನೂ ಸೆಳೆಯುತ್ತಿವೆ. ನವಕರ್ನಾಟಕದ ಅದೆಷ್ಟೋ ಪ್ರಕಟಣೆಗಳು ವಿವಿಧ ಕಾರಣಗಳಿಂದ ಹಲವಾರು ಪ್ರಶಸ್ತಿಗಳನ್ನು ಪಡೆದುಕೊಂಡಿವೆ.

**ಡಾ॥ ಜಿ.ಎಸ್. ಶಿವರುದ್ರಪ್ಪ**

ಈಗ ಬಿಡುಗಡೆಯಾಗುತ್ತಿರುವ ಹನ್ನೆರಡು ಪುಸ್ತಕಗಳು 'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದ ಲೇಖಕರ ಬದುಕು-ಬರೆಹ' ಮಾಲೆಯಲ್ಲಿ ಮೂರನೆಯ ಕಂತಿನ ಕೃತಿಗಳು. ದಿವಂಗತ ಡಾ॥ ಹಾ. ಮಾ. ನಾಯಕರು ಮತ್ತು ನವಕರ್ನಾಟಕ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ರಾಜಾರಾಮ್ ಇವರು ಯೋಜಿಸಿ ಪ್ರಾರಂಭಿಸಿದ ಈ ಮಾಲೆಯ ಹನ್ನೆರಡು ಕೃತಿಗಳು ೨೦೦೧ರಲ್ಲಿ ಬಿಡುಗಡೆಯಾದವು (ದುರದೃಷ್ಟವಶಾತ್, ಹಾ.ಮಾ. ನಾಯಕರು ಈ ವೇಳೆಗೆ ನಿಧನರಾದರು). ಅನಂತರ ಪ್ರಧಾನ್ ಗುರುದತ್ತ ಅವರು ರಾಜಾರಾಮ್ ಅವರ ಜತೆಗೆ, ಈ ಮಾಲೆಯ ಪ್ರಧಾನ ಸಂಪಾದಕರಾಗಿ ನಿಂತು, ಎರಡನೆಯ ಕಂತಿನ ಹನ್ನೆರಡು ಪುಸ್ತಕಗಳು ೨೦೦೨ರಂದು ಬಿಡುಗಡೆಯಾಗುವಂತೆ ನೋಡಿಕೊಂಡರು. ಇದು ಮೂರನೆಯ ಕಂತು. ಈ ಕಂತಿನ ಕೃತಿಗಳ ಬಿಡುಗಡೆಯಿಂದ ಒಟ್ಟು ಮೂವತ್ತಾರು ಪುಸ್ತಕಗಳು ಹೊರಬಂದಂತಾಯಿತು. ಈ ಯೋಜನೆಯ ಪ್ರಕಾರ ನಾಲ್ಕನೆಯ ಕಂತಿನ ಹನ್ನೆರಡು ಪುಸ್ತಕಗಳು ಸಿದ್ಧವಾಗುತ್ತಿವೆ. ಇದರಿಂದ ಈ ಮಾಲೆಯಲ್ಲಿ ಒಟ್ಟು ನಲವತ್ತೆಂಟು ಕೃತಿಗಳು – ಪ್ರಕಟನೆಗೊಂಡಂತಾಗುತ್ತದೆ. ಇದರ ಒಂದು ವಿಶೇಷ ವೆಂದರೆ : ಭಾರತದ ಯಾವ ಪ್ರಾದೇಶಿಕ ಭಾಷೆಯಲ್ಲೂ ಹೀಗೆ, 'ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತರ ಬದುಕು-ಬರೆಹ'ವನ್ನು ಪರಿಚಯಿಸುವ ಕೃತಿಗಳು, ಹೀಗೆ ಸಮಗ್ರವಾಗಿ ದೊರೆಯುವಂಥ ಸಾಹಸವನ್ನು, ಕನ್ನಡದ ನವಕರ್ನಾಟಕ ಪ್ರಕಾಶನದ ಹೊರತು ಬೇರೆ ಯಾರೂ ಕೈಕೊಂಡಿಲ್ಲ. ಅದಕ್ಕಾಗಿ ಪ್ರಕಾಶಕರನ್ನು - ಪ್ರಧಾನ ಸಂಪಾದಕರನ್ನು – ಹಾಗೂ ಬರೆದು ಕೊಟ್ಟ ಲೇಖಕರನ್ನು ಅಭಿನಂದಿಸಲೇಬೇಕು.

ಕೇಂದ್ರ ಸಾಹಿತ್ಯ ಅಕಾಡೆಮಿ ಸ್ಥಾಪಿತವಾದದ್ದು ೧೯೫೪ರಲ್ಲಿ. ಅದು ಅಂದಿನಿಂದ ಭಾರತದ ವಿವಿಧ ಭಾಷೆಗಳ ಶ್ರೇಷ್ಠ ಕೃತಿಯೊಂದಕ್ಕೆ ಪ್ರಶಸ್ತಿಯನ್ನು ನೀಡಿ ಲೇಖಕರನ್ನು ಗೌರವಿಸುತ್ತ ಬಂದಿದೆ. ಅದು ಪ್ರಶಸ್ತಿಗೆ ಮಾನ್ಯ ಮಾಡಿರುವ ಭಾಷಾ-ಸಾಹಿತ್ಯಗಳ ಸಂಖ್ಯೆ ಇಪ್ಪತ್ತೆರಡು. ಪ್ರಶಸ್ತಿಯ ಜತೆಗಿನ ಹಣದ ಮೊತ್ತದ ದೃಷ್ಟಿಯಿಂದ, ಹೆಚ್ಚು ಗಮನ ಸೆಳೆಯುವ ಇನ್ನೂ ಹಲವು ಪ್ರಶಸ್ತಿಗಳು ಅನಂತರ ಸ್ಥಾಪಿತವಾದರೂ – ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೇ ಒಂದು ರೀತಿಯಲ್ಲಿ ಅಧಿಕೃತ ಹಾಗೂ ಗೌರವದ ಸಂಕೇತವಾಗಿದೆ. ಈವರೆಗೆ ಕನ್ನಡದಲ್ಲಿ ಈ ಪ್ರಶಸ್ತಿಯನ್ನು ಪಡೆದವರ ಸಂಖ್ಯೆ ಒಟ್ಟು ೪೯. ಪ್ರತಿಯೊಂದು ಪ್ರಾದೇಶಿಕ ಭಾಷೆಯೊಳಗಿನ ಕಾವ್ಯ, ಕತೆ, ಕಾದಂಬರಿ, ನಾಟಕ, ಸಂಶೋಧನೆ, ಸಾಹಿತ್ಯ ವಿಮರ್ಶೆ, ಅಂಕಣ ಬರೆಹ – ಹೀಗೆ ವಿವಿಧ ಪ್ರಕಾರದ ಕೃತಿಗಳು ಈ ಮನ್ನಣೆಗೆ ಪಾತ್ರವಾಗಿವೆ.

ನವಕರ್ನಾಟಕದ ಈ ಯೋಜನೆ ಒಂದು ರೀತಿಯಲ್ಲಿ

ಅಕಾಡೆಮಿ ಪುರಸ್ಕೃತ ಸಾಹಿತಿಗಳನ್ನು ಕನ್ನಡ ಸಹೃದಯರಿಗೆ ಸಾರವತ್ತಾಗಿ ಪರಿಚಯ ಮಾಡಿಕೊಡುವ ಪ್ರಯತ್ನವಷ್ಟೆ ಅಲ್ಲ, ಒಂದು ಸಾಹಿತ್ಯ ಸಂದರ್ಭದ ಮುಖ್ಯ ಲೇಖಕರ ಮೂಲಮಾನದಲ್ಲಿ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಡುವ ಒಂದು ವಿಧಾನವೂ ಹೌದು. ಸಾಹಿತ್ಯ ಚರಿತ್ರೆಯ ರಚನೆಯಲ್ಲಿ ಸೂಚಿತವಾದ ಹಲವು ವಿಧಾನಗಳಲ್ಲಿ ಕೃತಿಕಾರ ಅಥವಾ ಕವಿಕೇಂದ್ರಿತ ಸಾಹಿತ್ಯ ಚರಿತ್ರೆಯೆ ಹೆಚ್ಚು ನಿರ್ದುಷ್ಟವಾದುದೆಂಬುದನ್ನು ಈವರೆಗಿನ ಸಾಹಿತ್ಯ ಚರಿತ್ರೆಯ ಪರಂಪರೆ ಖಚಿತಪಡಿಸುತ್ತದೆ.

ಸಾಹಿತ್ಯ ಚರಿತ್ರೆಯನ್ನು ಕಟ್ಟುವ ಕೆಲಸ ಕನ್ನಡದಲ್ಲಿ ಪ್ರಾರಂಭವಾದದ್ದು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ, ವೀಗಲ್, ರೈಸ್, ಕಿಟೆಲ್, ಆರ್. ನರಸಿಂಹಾಚಾರ್ ಇಂಥವರಿಂದ ಪ್ರಾರಂಭವಾಗಿ, ಇಪ್ಪತ್ತನೆಯ ಶತಮಾನದಲ್ಲಿ ಆಚಾರ್ಯ ಬಿ.ಎಂ.ಶ್ರೀ. ಅವರಿಂದ ಮತ್ತು ಅನಂತರ ಡಾ॥ ಮುಗಳಿಯವರಿಂದ ಒಂದು ನಿಶ್ಚಿತ ರೂಪವನ್ನು ಪಡೆದ ಸಾಹಿತ್ಯ ಚರಿತ್ರೆಯ ಬರೆಹದ ಕಾರ್ಯವು ಒಂದು ಉತ್ಕರ್ಷವನ್ನು ಪಡೆದುಕೊಂಡದ್ದು ಕಳೆದ ಶತಮಾನದ ಎಪ್ಪತ್ತರ ದಶಕಗಳಲ್ಲಿ. ಬೆಂಗಳೂರು, ಮೈಸೂರು ವಿಶ್ವವಿದ್ಯಾಲಯಗಳು ಹಲವು ಸಂಪುಟಗಳಲ್ಲಿ ಸಿದ್ಧಪಡಿಸಿದ ಸಮಗ್ರ ಸಾಹಿತ್ಯ ಚರಿತ್ರೆಯ ಸಂಪುಟಗಳು, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆಯ ಸಂಪುಟಗಳು, ಅನಂತರದ ಮುಂದಿನ ಕೆಲವೇ ವರ್ಷಗಳಲ್ಲಿ, ಐಬಿಎಚ್ ಸಂಸ್ಥೆಯು, ವಿ.ಸೀ.ಯವರ ಸಂಪಾದಕತ್ವದಲ್ಲಿ ಪ್ರಕಟಿಸಿದ 'ಕವಿ-ಕಾವ್ಯ ಪರಂಪರೆ'ಯ ಇಪ್ಪತ್ತೆಂಟು ಸಂಪುಟಗಳು, ಇವನ್ನೆಲ್ಲ ಗಮನಿಸಿದರೆ ಈ ಕಾಲದಲ್ಲಿ ಐವತ್ತಕ್ಕೂ ಹೆಚ್ಚು ಸಂಖ್ಯೆಯ ಕನ್ನಡ ಸಾಹಿತ್ಯ ಚರಿತ್ರೆಗಳು ಪ್ರಕಟವಾದವೆಂಬುದು ಗಮನಾರ್ಹವಾದ ಸಂಗತಿಯಾಗಿದೆ.

ಆದರೆ ಕಳೆದ ಶತಮಾನದ ಸಾಹಿತ್ಯ ಚರಿತ್ರೆಗಳ ಪ್ರಯತ್ನವೇನಿದ್ದರೂ, ಮುಖ್ಯವಾಗಿ ಪ್ರಾಚೀನ ಕನ್ನಡದ ಪುನರಾವಲೋಕನ ಮಾಡುವ ಮತ್ತು ನಮ್ಮ ಸಾಹಿತ್ಯ ಪರಂಪರೆಯನ್ನು ಸಮಕಾಲೀನತೆಯ ಬೆಳಕಿನಲ್ಲಿ ವ್ಯಾಖ್ಯಾನಿಸುವ ಸ್ವರೂಪದವು ಎನ್ನಬಹುದು. ಈಗ ನಾವು ಮನುಕುಲದ ಚರಿತ್ರೆಯಲ್ಲಿ ಮಹತ್ವದ ಕಾಲವಾದ ಇಪ್ಪತ್ತನೇ ಶತಮಾನವನ್ನು ದಾಟಿ ಇಪ್ಪತ್ತೊಂದನೆಯ ಶತಮಾನದಲ್ಲಿ ಕಾಲಿರಿಸಿದ ಈ ಹೊತ್ತಿನಲ್ಲಿ, ಇಪ್ಪತ್ತನೇ ಶತಮಾನದ ಕನ್ನಡ ಸಾಹಿತ್ಯವನ್ನು ಸಮಗ್ರವಾಗಿ ಸಮೀಕ್ಷಿಸಿ, ಅದರ ಚರಿತ್ರೆಯನ್ನು ರಚಿಸಬೇಕಾದ ಒಂದು ಅನುಕೂಲಕರವಾದ ನೆಲೆಯಲ್ಲಿ ನಿಂತಿದ್ದೇವೆ. ಇಪ್ಪತ್ತನೇ ಶತಮಾನದ ಉದ್ದಕ್ಕೂ, ಸಾಹಿತ್ಯದೊಂದಿಗೆ ಸಮಾನಾಂತರವಾಗಿ ಅಂದಂದಿನ ಸಾಹಿತ್ಯವನ್ನು ಕುರಿತ ವಿಮರ್ಶೆಯ ಕಾರ್ಯವೂ ಮತ್ತು ಆ ಮೂಲಕ ಅಂದಿನ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಡುವ ಕಾರ್ಯವೂ ತಕ್ಕಮಟ್ಟಿಗೆ ನಡೆದಿದ್ದರೂ, ಆ ಶತಮಾನದ, ಸಾಹಿತ್ಯ ಅಕಾಡೆಮಿ ಪುರಸ್ಕೃತ ಲೇಖಕರ ಮೂಲಮಾನದಲ್ಲಿ ಅವರನ್ನೂ, ಕನ್ನಡ ಸಾಹಿತ್ಯ ಸಂದರ್ಭವನ್ನು ಕುರಿತು, ಕನ್ನಡದ ಶ್ರೇಷ್ಠ ವಿಮರ್ಶಕರೂ ಬರೆದಿರುವ ಈ ಸಂಪುಟಗಳಷ್ಟನ್ನೂ, ಒಟ್ಟಿಗೆ (ಈಗ ಪ್ರಕಟವಾಗಿರುವ ೩೬ ಮತ್ತು ಇಷ್ಟರಲ್ಲೇ ಪ್ರಕಟವಾಗುವ ೧೨ನ್ನೂ) ಹಿಡಿದು ನೋಡಿದರೆ, ಅವು ನಾಳಿನ ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಿತಿಗೆ ಅಗತ್ಯವಾದ ಮತ್ತು ಮೌಲಿಕವಾದ ಮಾಹಿತಿ ಅಥವಾ ಸಾಮಗ್ರಿಯನ್ನು ಖಂಡಿತವಾಗಿ ಒದಗಿಸುತ್ತವೆ. ಅಷ್ಟೆ ಅಲ್ಲ, ಆಧುನಿಕ ಕನ್ನಡ ಸಾಹಿತ್ಯವು ನಡೆದುಬಂದ ದಾರಿಯ ಹೆಜ್ಜೆ ಗುರುತುಗಳ ಅಧಿಕೃತ ದಾಖಲೆಯೂ ಆಗುತ್ತದೆ.

ಆದರೆ ಗಮನಿಸಬೇಕು : ಆಧುನಿಕ ಕನ್ನಡ ಸಾಹಿತ್ಯ ಎಂದರೆ ಸಾಹಿತ್ಯ ಅಕಾಡೆಮಿ ಪುರಸ್ಕೃತ ಸಾಹಿತಿಗಳ ನಿರ್ಮಿತಿಯಷ್ಟೇ ಅಲ್ಲ. ಕಾರಣಾಂತರಗಳಿಂದ ಆ ಪ್ರಶಸ್ತಿಯನ್ನು ಪಡೆಯದ ಮತ್ತು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಗಣನೀಯವಾದ ಸಾಧನೆಮಾಡಿದವರ ಕೊಡುಗೆಯೂ ಸೇರುತ್ತದೆ. ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ, ಯಾರಿಗೆ ಎಂಥ ಪ್ರಶಸ್ತಿ ಬಂದರೂ, ಅದೊಂದು ಮಾಹಿತಿ ಮಾತ್ರವಷ್ಟೆ. ಒಂದು ಕಾಲದ ಸಾಹಿತ್ಯ ಚರಿತ್ರೆಯನ್ನು ನಿರ್ಮಿಸುವವರು, ಆ ಸಾಹಿತ್ಯ ಸಂದರ್ಭದಲ್ಲಿ ತಮ್ಮ ಪ್ರತಿಭೆಯಿಂದಲೋ ವಿದ್ವತ್ತಿನಿಂದಲೋ ಸಾಹಿತ್ಯ ನಿರ್ಮಿತಿಯಲ್ಲಿ ತಮ್ಮನ್ನು ಗಂಭೀರವಾಗಿ ತೊಡಗಿಸಿಕೊಂಡವರೆಲ್ಲರೂ. ಈ ಒಂದು ಅಂಶವನ್ನು ಗಣನೆಗೆ ತೆಗೆದುಕೊಂಡು, ಕೇಂದ್ರ ಸಾಹಿತ್ಯ ಅಕಾಡೆಮಿಯು ವಿವಿಧ ಭಾಷಾವಲಯದೊಳಗಿರುವ ಇಂಥ ಲೇಖಕರನ್ನು ಕುರಿತು 'ಮಾನೋಗ್ರಾಫ್' ಸ್ವರೂಪದ ಕಿರುಹೊತ್ತಿಗೆಗಳನ್ನು ಪ್ರಕಟಿಸುವ ಯೋಜನೆಯೊಂದನ್ನು ಹಾಕಿಕೊಂಡಿದೆ. ಇಂಥವರ ಸಾಧನೆಯನ್ನು ಕುರಿತ ಕೃತಿ ಮಾಲೆಗೆ, ಅಕಾಡೆಮಿ 'Makers of Indian Literature Series' (ಭಾರತೀಯ ಸಾಹಿತ್ಯ ನಿರ್ಮಾಪಕರು) – ಎಂದು ಕರೆದಿದೆ.

ಈ ಶೀರ್ಷಿಕೆ 'ಭಾರತೀಯ ಸಾಹಿತ್ಯ'ವನ್ನು ಕುರಿತ ಚಿಂತನೆಗೆ ನಮ್ಮನ್ನು ತೊಡಗಿಸುತ್ತದೆ. ಯಾಕೆಂದರೆ, ಅದು ಭಾರತೀಯ ಸಾಹಿತ್ಯದ ಲಕ್ಷಣವನ್ನೂ ನಿರ್ವಚಿಸುವಂತೆ ತೋರುತ್ತದೆ. ಭಾರತದ ವಿವಿಧ ಭಾಷೆಗಳಲ್ಲಿನ ಮುಖ್ಯವಾದ ಲೇಖಕರನ್ನು ಕುರಿತ ಈ ಮಾಲೆಗೆ 'ಭಾರತೀಯ ಸಾಹಿತ್ಯ ನಿರ್ಮಾಪಕರು' ಎಂದು ಕರೆಯುವ ಮೂಲಕ ಭಾರತದ ವಿವಿಧ ಭಾಷೆಗಳಲ್ಲಿ ಬರೆಯುತ್ತಿರುವ ಲೇಖಕರೆಲ್ಲರೂ 'ಭಾರತೀಯ ಸಾಹಿತ್ಯ ನಿರ್ಮಾಪಕರು' ಮತ್ತು ಅವರು ಬರೆದದ್ದು 'ಭಾರತೀಯ ಸಾಹಿತ್ಯ'– ಎನ್ನುವುದನ್ನು ಈ ಮಾತು ಸ್ಪಷ್ಟಪಡಿಸುತ್ತದೆ. ಸಾರಾಂಶವೇನೆಂದರೆ, ಪ್ರತಿಯೊಬ್ಬ ಮುಖ್ಯ ಲೇಖಕನೂ ತನ್ನ ಭಾಷೆಯಲ್ಲಿ ಬರೆಯುತ್ತ ಭಾರತೀಯ ಸಾಹಿತ್ಯದ ಆಯಾಮಗಳನ್ನು ವಿಸ್ತರಿಸುತ್ತಾನೆ. ಈ ಅರ್ಥದಲ್ಲಿ 'ಭಾರತೀಯ ಸಾಹಿತ್ಯ'– ಎಂದರೆ ಭಾರತದ ಬಹುಭಾಷೆಗಳಲ್ಲಿ ನಿರ್ಮಿತಿಯಾಗುತ್ತಿರುವ ಸಾಹಿತ್ಯ.

ವಾಸ್ತವವಾಗಿ 'ಭಾರತೀಯ ಸಾಹಿತ್ಯ' ಎಂಬುದೊಂದು ಅಮೂರ್ತವಾದ ಕಲ್ಪನೆ – ರಾಷ್ಟ್ರ, ರಾಷ್ಟ್ರೀಯತೆ ಎನ್ನುವ ಪದದ ಹಾಗೆ. ಈ ಶತಮಾನದ ಪ್ರಾಚೀನ ಕವಿಗಳು ಯಾರೂ ತಾವು ಬರೆಯುತ್ತಿರುವುದು 'ಭಾರತೀಯ ಸಾಹಿತ್ಯ'– ಎಂದು ಕರೆದುಕೊಳ್ಳಲಿಲ್ಲ; ಬದಲು ಆಯಾ ಭಾಷೆಯ ಸಾಹಿತ್ಯ ಎಂದುಕೊಂಡರು. ಭಾರತೀಯ ಸಾಹಿತ್ಯ ಅಥವಾ Indian Literature ಎನ್ನುವ ಪರಿಕಲ್ಪನೆ ಬಳಕೆಗೆ ಬಂದದ್ದು, ವಸಾಹತುಶಾಹೀ ಸಂದರ್ಭದಲ್ಲಿ ಐರೋಪ್ಯ ವಿದ್ವಾಂಸರು ಈ ದೇಶದ ಸಾಹಿತ್ಯವನ್ನು ಹೀಗೆ ಕರೆಯತೊಡಗಿದಾಗ. ಅವರಿಗೆ ಹಾಗೆ ಪರಿಚಯವಾದ ಮತ್ತು ಗಮನವನ್ನು ಸೆಳೆದ ಸಾಹಿತ್ಯವೆಂದರೆ ಸಂಸ್ಕೃತ ವಾಙ್ಮಯವೇ. ವೇದ, ಉಪನಿಷತ್ತು, ರಾಮಾಯಣ,

೧೭ನೇ ಪುಟಕ್ಕೆ

ಅನಾವರಣಗೊಂಡ ೧೨ ಕೃತಿಗಳು

ದಿಲ್ಲಿಯಲ್ಲಿ ಸಂಡೆ ಮಾರ್ಕೆಟ್ (ಸಂತೆ) ಪ್ರತಿವಾರ ನಡೆಯುತ್ತದೆ. ದಿಲ್ಲಿಯಂತಹ ಮಹಾನಗರದಲ್ಲಿಯೂ ಸಂತೆ ಆಗುತ್ತದೆ ಎಂದಾಗ ನಮ್ಮ ಮನೆಯ ಆರತಿಗೆ, ಕೀರುತಿಗೆ ಆಶ್ಚರ್ಯವೋ ಆಶ್ಚರ್ಯ. ಇದಕ್ಕೆ ಮೊದಲನೆಯ ಕಾರಣ ಅವಕ್ಕೆ ಸಂತೆ ಎಂದರೇನೇ ಗೊತ್ತಿರಲಿಲ್ಲ. ನಮ್ಮ ಕೀರುತಿಯಂತು ಸಂತೆ ಎಂದಾಗ 'ಏನಿದು' ಎಂದು ಕಣ್ಣು ಕಣ್ಣು ಬಿಟ್ಟಿತು. 'ಶಾಂಡಿ' ಎಂದಾಗ ನಮ್ಮ ಆರತಿಗೆ ಜ್ಞಾನೋದಯವಾಗಿ 'ಹಾಗೆ ಹೇಳು ಮತ್ತೆ. ಏನೋ ಸಂತೆ-ಗಿಂತೆ ಎಂದರೆ ನನಗೆ ಹೇಗೆ ಗೊತ್ತಾಗಬೇಕು' ಎಂದು ತನ್ನ ಕನ್ನಡದ ಅಜ್ಞಾನವನ್ನು ಪ್ರದರ್ಶಿಸಿತು. ಇನ್ನು ನನ್ನ ಮತ್ತು ನನ್ನವಳ ನಡುವೆ ಕನ್ನಡದ ಬಗ್ಗೆ ಯುದ್ಧವಾಗುವುದರಲ್ಲಿತ್ತು. ಕಡೆಗೆ ನಮ್ಮ ಆರತಿ, ಕೀರುತಿಗಳೇ ಕದನ ವಿರಾಮವನ್ನು ಮಂಡಿಸಿ ಸಂತೆಯ ಬಗ್ಗೆ ಮೊದಲಿನಿಂದ ಚರ್ಚೆ ಆರಂಭಿಸಲು ಆಜ್ಞೆ ಮಾಡಿದವು.




# ನಗರ ಸಂತೆ

''ಸಂತೆ ಅಂದರೆ ರೈತರು ತಾವೇ ಬೆಳೆದ ವಸ್ತುಗಳನ್ನು ಒಂದು ನಿರ್ದಿಷ್ಟ ಜಾಗಕ್ಕೆ ತಂದು, ಸೀದಾ ಜನಗಳಿಗೆ ಮಾರುವುದು ಎಂದರ್ಥ. ಇಲ್ಲಿ ಬೆಳೆಗಳೇ ಆಗಬೇಕಿಲ್ಲ, ಮನೆಯಲ್ಲಿ ಮಾಡಿದ ಬೇರೆ ವಸ್ತುವೂ ಆಗಬಹುದು. ಒಟ್ಟಿನಲ್ಲಿ ನೇರವಾಗಿ ಗ್ರಾಹಕರಿಗೆ ಉತ್ಪನ್ನವನ್ನು ಸುಲಭ ಬೆಲೆಯಲ್ಲಿ ತಲುಪಿಸುವ ಸುಲಭ ಮಾರ್ಗ'' ಎಂದಾಗ ''ವಾ !!! ನಮ್ಮ ಹಿಂದಿನವರು ಎಷ್ಟು ಗ್ರೇಟ್ ಅಲ್ವಾ'' ಎಂಬ ಉದ್ಗಾರ ಬಂತು. ''ಅಷ್ಟೇ ಅಲ್ಲ, ಕೆಲವು ಬಾರಿ ಅಲ್ಲಿ ಹಣಕಾಸಿನ ವ್ಯವಹಾರವೇ ಇರುತ್ತಿರಲಿಲ್ಲ. ಅಕ್ಕಿಗೆ ಬದಲು ಬೇಳೆ, ಬೇಳೆಗೆ ಬದಲು ತರಕಾರಿ ಹೀಗೆ ಉತ್ಪನ್ನಗಳ ವಿನಿಮಯವೂ ನಡೆಯುತ್ತಿತ್ತು'' ಎಂದಾಗ ''ಓ ಗೊತ್ತು ಗೊತ್ತು ಬಾರ್ಟರ್ ಸಿಸ್ಟಂ ಅಲ್ವಾ'' ಎಂದು ನಮ್ಮ ಆರತಿ ಕಿರುಚಿತು.

ಪ್ರತಿಯೊಂದು ಊರಿಗೂ ಒಂದು ನಿರ್ದಿಷ್ಟ ದಿನ ಸಂತೆಯಾಗಿರುತ್ತದೆ. ಆ ದಿನ ಜನವೆಲ್ಲ ಒಂದು ಮೈದಾನದಲ್ಲಿ ಸೇರಿ ವ್ಯಾಪಾರ, ವ್ಯವಹಾರ ಮಾಡಿ ಮನೆಗೆ ಹೋಗುತ್ತಾರೆ. ಆ ದಿನವಂತೂ ಆ ಊರಿಗೆ ಒಂದು ಹೊಸ ಕಳೆ ಬಂದಿರುತ್ತದೆ. ಹೀಗೆ ನಮ್ಮ ಹಿಂದಿನ ಸಂತೆಗಳು ಇಂದಿಗೂ ವಿವಿಧ ರೀತಿಗಳಲ್ಲಿ ನಮ್ಮ ನಗರಗಳಲ್ಲೂ ಜೀವಂತವಾಗಿವೆ. ಅವುಗಳ ಪಳೆಯುಳಿಕೆಯ ಬಗ್ಗೆ ಬರೆದಷ್ಟೂ ಸಾಲದು. ಇದು ನಮ್ಮ ಆರತಿ ಕೀರುತಿಯಂತಹ ನಗರದ ಮಕ್ಕಳ ತಿಳುವಳಿಕೆಗೂ ಒಂದಷ್ಟು ಆಹಾರವಾಗಬಹುದು.

ಸಂತೆ ದಿನ ಎಂದದ್ದಕ್ಕೆ ಯಾವುದೋ ಹಳೆಯ ನೆನಪು ಬಂತು. ಒಮ್ಮೆ ಮಂಗಳವಾರ ಒಂದು ತುರ್ತಾದ ಕೆಲಸಕ್ಕೆ ಹಾಸನಕ್ಕೆ ಹೋಗಬೇಕಿತ್ತು. ಅಲ್ಲಿ ಹೋದರೆ ನಗರದ ತುಂಬಾ ಜನವೋ ಜನ. ಆಫೀಸುಗಳಲ್ಲಿ ಜನವೇ ಇರಲಿಲ್ಲ. ಹೊರಗಡೆ ಜನರನ್ನು ಕೇಳಿದಾಗ ನನ್ನನ್ನೇ ಮಿಕಿ ಮಿಕಿ ನೋಡುತ್ತಾ, ''ಈವತ್ತು ಸಂತೆ, ಅಷ್ಟೂ ಗೊತ್ತಾಗಲಿಲ್ವಾ ?'' ಎಂದು ಗದರಿದರು. ಅಂದರೆ, ಅಲ್ಲಿ ಸಂತೆ ಎಂದರೆ ಮಿಕ್ಕೆಲ್ಲವೂ ಗೌಣ ಎಂದರ್ಥ. ಬಹುಶಃ ಅವರು, ''ಇದು ಯಾವುದೋ ನಗರದ ಗಮಾರನೋ, ಪಟ್ಟಣದ ಗುಗ್ಗುವೋ ಇರಬಹುದು'' ಎಂದು ನನ್ನನ್ನು ನೋಡಿ ನಕ್ಕಿರಬಹುದು.

ಇಂತಹ ಸಂತೆಗಳಲ್ಲಿ ಓಡಾಡಿ ವ್ಯಾಪಾರ ಮಾಡುವುದೇ ಒಂದು ಸೊಗಸು. ಆ ಹಳ್ಳಿಯ ಜನ, ಅವರ ಅಭಿರುಚಿ, ಅವರ ಅವಶ್ಯಕತೆಗಳು, ಅವರ ಮುಗ್ಧತೆ, ಆ ಜಾನಪದದ ಸೊಗಡು, ಹಳ್ಳಿಯ ಅಪರೂಪದ ವಸ್ತುಗಳು ಇವೆಲ್ಲವನ್ನೂ ಒಮ್ಮೆಗೇ ಸವಿಯಬಹುದು. ಆಡಂಬರ, ಶೋಕಿ, ನಗರದ ಪಂಚತಾರಾ ಸಂಸ್ಕೃತಿ ಇವೆಲ್ಲವೂ ಇಲ್ಲಿಯ ಜನರ ಸರಳತೆ, ಮುಗ್ಧತೆಗಳಲ್ಲಿ ಮುಚ್ಚಿಹೋಗಿರುತ್ತವೆ. ನಮ್ಮ ನಗರದ ಹೊರವಲಯದ ಹಳ್ಳಿಗಳಲ್ಲಿ ಇಂದಿಗೂ ಸಂತೆಯನ್ನು ಕಾಣಬಹುದು. ಆದರೆ ಇಲ್ಲಿ ನಗರದ ಸಹವಾಸದೋಷ ಅಲ್ಲಲ್ಲಿ ಇಣುಕುತ್ತಿರುತ್ತದೆ.

ನಮ್ಮ ನೆರೆ ಹಾಗೂ ಹೊರೆಯಾಗಿರುವ ಪಾತು, ಸಾತು ಒಟ್ಟೊಟ್ಟಿಗೆ ಶಾಪಿಂಗಿಗೆ ಹೋಗುತ್ತಾರೆ. ದೊಡ್ಡ ದೊಡ್ಡ ಅಂಗಡಿಗಳಲ್ಲಿ ಕಿಟಕಿಯ ವ್ಯಾಪಾರ ಮಾಡಿ ಆನಂತರ ಫುಟ್‌ಪಾತಿನ ಅಂಗಡಿಗಳಲ್ಲಿ ಏನೇನೋ ಚೌಕಾಸಿ ಮಾಡಿ ವ್ಯಾಪಾರ ಮಾಡಿದರೆ ಅವರಿಗೆ ಏನೋ ಆನಂದ. ಆ ದೊಡ್ಡ ಅಂಗಡಿಯವನಿಗೆ, ''ಏನು ಕೊಬ್ಬೂರೀ, ಒಂದಕ್ಕೆರಡು ಬೆಲೆ, ಅದನ್ನೇ ನೋಡಿ ನಾವು ಅರ್ಧಕ್ಕರ್ಧ ಬೆಲೆಗೆ ತಂದೆವು ನೋಡಿ'' ಎಂದು ಹೆಮ್ಮೆಯಿಂದ ಬೀಗುತ್ತಾರೆ.

ಇಂಥ ನಮ್ಮ ಸಾತೂ ಪಾತೂಗಳು ನಮ್ಮಲ್ಲಿ ಬೇಕಾದಷ್ಟು ಜನ ಇದ್ದಾರೆ. ಅವರಿಗೆ ಬೀದಿ ಬದಿಯಲ್ಲಿ ಚೌಕಾಸಿ ಮಾಡಿಕೊಂಡಾಗ ಸಿಗುವ ಆನಂದ ದೊಡ್ಡ ಅಂಗಡಿಯಿಂದ ದೊಡ್ಡಸ್ತಿಕೆಯಿಂದ ತಂದಾಗ ಸಿಗುವುದಿಲ್ಲ. ಅವರಿಗೆ ಬ್ರಾಂಡೆಡ್ ಮೊದಲಾದವುಗಳ ಬಗ್ಗೆ ಚಿಂತೆಯಿಲ್ಲ. ತಂದದ್ದು ಒಂದಷ್ಟು ದಿನ ತೃಪ್ತಿಯಿಂದ ಬಳಸಿದರೆ ಸಾಕು. ನಂತರ ಬೇರೊಂದು ತಂದರಾಯಿತು ಎಂಬ ಆಲೋಚನೆ. ಒಂದು ರೀತಿಯಲ್ಲಿ ಅಮೆರಿಕನ್ ಸಿಸ್ಟಂ, ಅಂದರೆ ಉಪಯೋಗಿಸಿ ಬಿಸಾಡಿಬಿಡುವ ಸಂಸ್ಕೃತಿ. ಆದರೆ ಬಲು ದೊಡ್ಡಸ್ತಿಕೆಯವರು ಈಗ ನಮ್ಮಲ್ಲಿ ತುಂಬಿದ್ದಾರೆ. ಬೀದಿಯಲ್ಲಿ ಹತ್ತು ರೂಪಾಯಿಗೆ ಸಿಗುವುದನ್ನೇ ಶೋಕಿ ಅಂಗಡಿಯಲ್ಲಿ ಐವತ್ತು ರೂ.ಗೆ ತಂದರೆ ಅವರಿಗೆ ಏನೋ ತೃಪ್ತಿ. ಬೀದಿಯಲ್ಲಿ ಕೊಳ್ಳುವ ಜನ ಎಂದರೆ ಅವರಿಗೆ ಏನೋ ಒಂದು ರೀತಿಯ ಅಸಡ್ಡೆ. ಇಂತಹ ಬಾಹ್ಯಾಡಂಬರದವರು ಎಲ್ಲೆಡೆಯಲ್ಲಿಯೂ ಇದ್ದೇ ಇರುತ್ತಾರೆ ಬಿಡಿ.

ಬೀದಿಯಲ್ಲಿ ಮಾರುವವರ ವಸ್ತುಗಳು ಬ್ರಾಂಡೆಡ್ ಇರಬಹುದು ಅಥವಾ ಯಾವುದೋ ಲೋಕಲ್ ಮೇಕ್ ಇರಬಹುದು. ಆದರೆ ಈ ರಸ್ತೆ ಅಂಗಡಿಗಳವರಿಗೆ ತಲೆಗಂದಾಯ, ಬಾಡಿಗೆ ಮೊದಲಾದವುಗಳ ತಲೆನೋವಿಲ್ಲ. ವಸ್ತು ಅಗ್ಗವಾಗಿರಲು ಇದೂ ಒಂದು ಕಾರಣ. ಅದೇ ಅಂಗಡಿಗಳವರಾದರೆ ಅವರ ಖರ್ಚು ವೆಚ್ಚಗಳನ್ನೆಲ್ಲಾ ನಮ್ಮ ತಲೆಯಮೇಲೇ ಎಳೆದುಬಿಡುತ್ತಾರೆ. ಆದ್ದರಿಂದ ಕೆಲವರಿಗೆ ಇಂದಿಗೂ ಈ ಬೀದಿ ಬದಿಯ ವ್ಯಾಪಾರದ ಮೇಲೆ ಏನೋ ವ್ಯಾಮೋಹ. ಇದು ಎಷ್ಟರಮಟ್ಟಿಗೆ ಆಗಿದೆ ಎಂದರೆ ಶಾಪಿಂಗ್ ಸೆಂಟರ್ ಎಂದರೆ ಅದರ ರಸ್ತೆ ಬದಿಯಲ್ಲೆಲ್ಲಾ ವ್ಯಾಪಾರಿಗಳಿದ್ದರೇ ಅದಕ್ಕೊಂದು

**ಪ್ರೊ॥ ಬಿ. ಎಸ್. ಜಗದೀಶಚಂದ್ರ**

ಮೆರುಗು. ಇಲ್ಲವಾದಲ್ಲಿ ಅದೊಂದು ಫ್ಲಾಪ್ ಶಾಪಿಂಗ್ ಸೆಂಟರ್ ಎಂಬ ಲೇಬಲ್ ಹಚ್ಚಿಬಿಡುತ್ತಾರೆ.

ಈ ರಸ್ತೆಬದಿಯ ವ್ಯಾಪಾರ ಎಷ್ಟು ಮನಸೆಳೆದಿದೆಯೆಂದರೆ ಭವ್ಯ ಭಾರತದ ರಾಜಧಾನಿ ದಿಲ್ಲಿಯಲ್ಲೂ ಇದು ಬಹುಜನಪ್ರಿಯ. ನೀವು ಅಲ್ಲಿಯ ಕರೋಲ್ ಬಾಗಿಗೆ ಹೋಗಿ, ಜನಪತ್‌ಗೇ ಹೋಗಿ, ಜನವೋ ಜನ. ಅಲ್ಲಿ ತಿರುಗಾಡುವುದೇ ಅನೇಕರಿಗೆ ಒಂದು ರೀತಿಯ ಮೋಜು. ಬೇರೆಲ್ಲೂ ಸಿಗದ ಕೆಲವು ವಸ್ತುಗಳು ಅಲ್ಲಿ ಮಾತ್ರ ಲಭ್ಯ. ಅಂತಹ ವಸ್ತುಗಳನ್ನು ಚೌಕಾಸಿ ಮಾಡಿ ಕೊಂಡವರಿಗೆ ತಲೆಯ ಮೇಲೆ ಕೊಂಬು ಬಂದಷ್ಟೇ ಸಂತೋಷ. ಇಲ್ಲಿಯ ಅಂಗಡಿಗಳ ರಸ್ತೆಗಳನ್ನು ನಿತ್ಯಸಂತೆ ಎಂದು ಕರೆದರೂ ಅಡ್ಡಿಯಿಲ್ಲ. ಇಂತಹ ಜಾಗಗಳನ್ನು ನಗರದ ಮೆಜೆಸ್ಟಿಕ್, ಸಿಟಿ ಮಾರ್ಕೆಟ್, ಶಿವಾಜಿನಗರ ಮೊದಲಾದ ಕಡೆ ಇಂದಿಗೂ ಕಾಣಬಹುದು.

ದಿಲ್ಲಿಯಲ್ಲಿ ಭಾನುವಾರದಂದು ನೀವು ದರಿಯಾಗಂಜಿಗೆ ಒಮ್ಮೆ ಖಂಡಿತಾ ಹೋಗಬೇಕು. ಉಳಿದ ಅಂಗಡಿಗಳಿಗೆ ರಜೆ ಇರುವುದರಿಂದ ಅವುಗಳ ಮುಂಭಾಗವೆಲ್ಲಾ ಅಂದು ಪುಸ್ತಕ ಮಾರುವವರಿಗೇ ಮೀಸಲು. ನೀವು ಪುಸ್ತಕಪ್ರಿಯರಾದರೆ ನಿಮಗೆ ಅಲ್ಲಿಂದ ಹೊರಗೆ ಬರಲು ಮನಸ್ಸೇ ಆಗುವುದಿಲ್ಲ. ಅದೆಲ್ಲಿಂದ ಕಲೆಹಾಕಿರುತ್ತಾರೋ ನರ್ಸರಿ ಪುಸ್ತಕದಿಂದ ಹಿಡಿದು ಮೆಡಿಕಲ್ ಪುಸ್ತಕಗಳವರೆಗೂ ರಾಶಿ ರಾಶಿ ಬಿದ್ದಿರುತ್ತವೆ. ಹುಡುಕಲು ನಿಮಗೆ ವ್ಯವಧಾನ ಇರಬೇಕು, ಅಷ್ಟೆ. ಇಂತಹ ಪುಸ್ತಕ ಸಂತೆಯು ಬೆಂಗಳೂರಿನ ಬಳೇಪೇಟೆಯಲ್ಲಿಯೂ ಭಾನುವಾರ ಸ್ವಲ್ಪಮಟ್ಟಿಗೆ ಇರುತ್ತದೆ.

ಕೆಲವೆಡೆ ಕದ್ದಮಾಲಿನ ಸಂತೆಯೂ ಇರುತ್ತದೆ ಎಂದರೆ ನಂಬುತ್ತೀರಾ ? ಹೌದು, ಮುಂಬಯಿಯಲ್ಲಿ ಚೋರ್ ಬಜಾರ್ ಎಂಬ ಒಂದು ಸಂತೆಯಿದೆ. ಅಲ್ಲಿ ಸಿಗುವುದೆಲ್ಲಾ ಕದ್ದ ಮಾಲುಗಳೇ. ನಿಮ್ಮ ಮನೆಯಲ್ಲಿ ಕಳುವಾಗಿರುವ ವಸ್ತುವೂ ಅಲ್ಲಿ ಇರಬಹುದು. ಆದರೆ ಅದನ್ನು ನೀವು ದುಡ್ಡು ಕೊಟ್ಟೇ ಕೊಳ್ಳಬೇಕು. ಇಲ್ಲಿ ಸಿಗದ ವಸ್ತುಗಳೇ ಇಲ್ಲ. ಅದರ ಚೆನ್ನ, ಚಾರ, ಕಂಡಿಷನ್ನು ಇವೆಲ್ಲವನ್ನೂ ಕೊಳ್ಳುವ ಮುನ್ನ ನೀವೇ ನೋಡಿಕೊಳ್ಳಬೇಕು.

ಇದರ ಹಾಗೆಯೇ ದಿಲ್ಲಿಯಲ್ಲಿ ಶಾಂತಿವನದ ಮುಂಭಾಗದಲ್ಲಿ, ಕೆಂಪುಕೋಟೆಯ ಹಿಂದೆ ಒಂದು ಮೈದಾನದಲ್ಲಿ ಕೇವಲ ಬಟ್ಟೆ ಮಾರಾಟದ ಒಂದು ಜಾತ್ರೆಯೇ ನಡೆಯುತ್ತದೆ, ಅದೂ ಭಾನುವಾರ ಮಾತ್ರ. ಅಲ್ಲಿ ಸಿಗುವುದು ಉಪಯೋಗಿಸಿರುವುದೋ, ಹೊಸದೋ ಹಳೆಯದೋ ಗೊತ್ತಿಲ್ಲ. ನೀವೇ ಕಣ್ಣಾರೆ ಕಂಡು ನಿಮಗೆ ಬೇಕೆಂದರೆ ಚೌಕಾಸಿ ಮಾಡಿಕೊಳ್ಳಬಹುದು. ಎಲ್ಲಾ ರೀತಿಯ ಜನರೂ ಅಲ್ಲಿ ಬಂದು ಕೊಳ್ಳುವುದನ್ನು ಕಂಡು ಬೆರಗಾಗಿದ್ದೇನೆ. ನನ್ನ ಹಾಸ್ಟೆಲಿನ ಕೋಣೆಗೆ ಒಂದು ದಪ್ಪ ಕಡ್ಡಿಯ ಹಸಿ ಚಾಪೆಯನ್ನು ಇಲ್ಲಿಂದಲೇ ಕೊಂಡು ಸಿಂಗರಿಸಿಕೊಂಡಿದ್ದೆ.



ನಾನೂ ಹೀಗೆ ಒಂದೆರಡು ಬಾರಿ ನಗರ ಸಂತೆಯಲ್ಲಿ ಒಂದೆರಡು ಸಾಮಾನನ್ನು ಕೊಂಡು ಆ ವ್ಯಾಪಾರಿಯ ಪರಿಚಯ ಮಾಡಿಕೊಂಡಿದ್ದೆ. ಆದರೆ ಇದ್ದಕ್ಕಿದ್ದಹಾಗೆ ಅವ ಕಾಣೆಯಾದ. ನಂತರ ಇನ್ನೆಲ್ಲೋ ಆತನನ್ನು ಭೇಟಿಯಾದೆ. ''ಇದೇನಯ್ಯಾ ಹೀಗೆ ನರಪೇತಲನಾಗಿ ಹೋಗಿದ್ದೀ ?'' ಎಂದು ತಮಾಷೆ ಮಾಡಿ ''ಏನು ಸಮಾಚಾರ'' ಎಂದು ವಿಚಾರಿಸಿದೆ. ''ಅಯ್ಯೋ ಬಿಡಿ ಸ್ವಾಮಿ, ನಮ್ಮ ಕಷ್ಟ ನಮಗೆ, ನಿಮಗೇನು ಗೊತ್ತಾಗುತ್ತೆ'' ಎಂದ. ''ವಿವರವಾಗಿ ಹೇಳಯ್ಯ. ಇಲ್ಲವಾದರೆ ನಿಮ್ಮ ಕಷ್ಟ ನಮಗೆ ಗೊತ್ತಾಗುವುದೇ ಇಲ್ಲ'' ಎಂದೆ. ಅವರಿಗೆ ನಿತ್ಯವೂ ಪೋಲೀಸರ, ರೌಡಿಗಳ ಕಾಟ. ಪೋಲೀಸರು ಬಂದರೆಂದರೆ ಸಾಮಾನುಗಳನ್ನೆಲ್ಲ ಎತ್ತಿಕೊಂಡು ಓಡಬೇಕು. ಹಾಗೆ ಓಡುವಾಗ ಸಾಮಾನುಗಳು ಬಿದ್ದು ಕಳವಾಗಿದ್ದೂ ಉಂಟಂತೆ. ಅಂತಹ ಸಮಯವನ್ನೇ ಕಾದು ವ್ಯಾಪಾರ ಮಾಡುವಾಗ ದುಡ್ಡು ಕೊಡದೇ ಮಾಲಿನೊಂದಿಗೆ ಓಡಿಹೋದ ಜನರೂ ಇದ್ದಾರಂತೆ. ಇದರ ಮಧ್ಯೆ ಮಧ್ಯವರ್ತಿಗಳಿಗೆ ಮಾಮೂಲು ಬೇರೆ. ''ಇಷ್ಟೆಲ್ಲಾ ಮಾಡಿಕೊಂಡು ಜೀವನ ಸಾಗಿಸುವುದು ಹೇಗೆ ಸ್ವಾಮಿ ? ನಾವೇನು ಭಿಕ್ಷೆ ಬೇಡಿ ಜನರಿಗೆ ತೊಂದರೆ ಕೊಡುತ್ತಿದ್ದೇವೆಯೇ ?'' ಎಂದು ಅಲವತ್ತುಕೊಂಡ.

''ನೋಡಿ ಸ್ವಾಮಿ, ನಾನು ಬಡವ. ಇನ್ನೊಬ್ಬರ ಹಂಗಿನಲ್ಲಿ ಬಾಳದೆ ನಾನೇ ಒಂದು ವ್ಯಾಪಾರ ಮಾಡಿ ಜೀವನ ಮಾಡುತ್ತಿದ್ದೆ. ಕೆಲಸಕ್ಕೆಂದು ಅಲೆದು ಅಲೆದು ಸಾಕಾಗಿ ಈ ಸ್ವಉದ್ಯೋಗ ಮಾಡಿಕೊಂಡಿದ್ದೆ. ನಿರುದ್ಯೋಗಿ ಭತ್ಯೆ ನನಗೇನಾದರೂ ಇವರು ಕೊಡುತ್ತಾರೆಯೇ ? ದಾಖಲೆ ಮೀರಿ ಬೆಳೆಯುತ್ತಿರುವ ಈ ಜನಸಾಗರದಲ್ಲಿ ಸ್ವಂತವಾಗಿ ಒಂದಿಷ್ಟು ಸಂಪಾದಿಸುವುದು ತಪ್ಪೇ ? ನಿಮ್ಮಂತಹವರು ನಮಗೆ ಒಂದಿಷ್ಟು ಸಹಾಯ ಮಾಡಿದರೆ ಅನುಕೂಲವಾಗುತ್ತೆ'' ಎಂದ.

''ನಾವೇನಯ್ಯ ಮಾಡಕ್ಕಾಗುತ್ತೆ'' ಎಂದಾಗ, ''ಯಾಕಾಗಲ್ಲ ಸ್ವಾಮಿ'' ಎಂದು ಮತ್ತೆ ಮುಂದುವರೆಸಿದ. ''ನೋಡಿ, ನಾವು ನಮ್ಮ ಕಾಲಿನ ಮೇಲೆ ನಿಂತಿರುವವರು, ನಮಗೆ ಕೆಲಸ ಕೊಡಿ ಎಂದು ಯಾರನ್ನೂ ಕಾಡಿ ಬೇಡಿಲ್ಲ, ನಿರುದ್ಯೋಗ ಭತ್ಯೆ ನೀಡಿ ಎಂದು ಕೇಳುತ್ತಿಲ್ಲ, ಬಾಡಿಗೆ ನೀಡಲು ನಮ್ಮಲ್ಲಿ ಹಣವಿಲ್ಲ, ಆದ್ದರಿಂದ ವ್ಯಾಪಾರ ಮಾಡಲು ನಮಗೆ ಚೂರು ಜಾಗ ನೀಡಿದರೆ ಸಾಕು, ನಮ್ಮ ಪಾಡಿಗೆ ನಾವಿರುತ್ತೇವೆ. ಈ ಚೂರು ಜಾಗಕ್ಕೆ ನಮ್ಮ ಸರಕಾರಕ್ಕೆ ಗತಿಯಿಲ್ಲವೇ ?'' ಎಂದ. ''ಹಳ್ಳಿಗಳಲ್ಲಿ ಸಂತೆಮಾಳವಿದ್ದಂತೆ ನಮಗೂ ಏಕೆ ಒಂದು ಸಂತೆ ಮಾಳವನ್ನು ಬಿಟ್ಟುಕೊಡಬಾರದು ? ಒಂದೊಂದು ಬಡಾವಣೆಗೂ ಒಂದೊಂದು ದಿನ ಸಂತೆ ಎಂದು ನಿಗದಿಪಡಿಸಿದರೆ ನಾವು ಅಂದು ಮಾತ್ರ ಬಂದು ವ್ಯಾಪಾರ ಮಾಡಿಕೊಂಡು ಹೋಗುತ್ತೇವೆ ಅಥವಾ ನಮ್ಮಂತಹವರನ್ನು ನೋಂದಣಿ ಮಾಡಿಕೊಂಡು ಯಾವುದಾದರೂ ರಸ್ತೆಯಲ್ಲಿ ಕಾಯಮ್ಮಾಗಿ ಜಾಗ ಮಾಡಿಕೊಡಬಹುದು. ನಮ್ಮಿಂದ ತೊಂದರೆಯಾಗುತ್ತೆ ಎಂದರೆ ಅದಕ್ಕೊಂದಿಷ್ಟು ರೂಲು, ರೆಗ್ಯುಲೇಷನ್ನು ಮಾಡಲಿ, ನಾವು ಅದನ್ನು ಪಾಲಿಸುತ್ತೇವೆ. ಪಾಲಿಸದವರಿಗೆ ದಂಡ ವಿಧಿಸಲಿ'' ಎಂದು ತಾನೇ ಪರಿಹಾರವನ್ನೂ ಸೂಚಿಸಿದ.

ಇದನ್ನು ಕೇಳಿದ ನನಗೂ ಅವನು ಹೇಳುವುದು ನಿಜ ಅನ್ನಿಸಿತು. ''ಏರುತ್ತಿರುವ ನಮ್ಮ ಜನಸಂಖ್ಯೆಯೇ ನಮ್ಮ ದೇಶದ ಅಮೂಲ್ಯ ಬಂಡವಾಳ'' ಎಂದು ಕೂಗಾಡುವ ಜನರಿಗೆ ಇದು ಏಕೆ ಕಾಣುವುದಿಲ್ಲ. ಇಂತಹ ಸಣ್ಣ ವ್ಯಾಪಾರಿಗಳನ್ನು ಉತ್ತೇಜಿಸಿದರೆ ಒಳ್ಳೆಯದಲ್ಲವೇ ಎಂದೆನಿಸದೇ ಇರಲಿಲ್ಲ. ಇತ್ತೀಚೆಗೆ ತಾನೆ ಸರಕುಗಳನ್ನು ಅಡ್ಡಾದಿಡ್ಡಿಯಾಗಿ ಹರಡಿಕೊಂಡು ಓಡಾಡುವವರಿಗೆ ತೊಂದರೆ ಮಾಡುತ್ತಾರೆ ಎಂದು ಜಯನಗರದ ರಸ್ತೆ ವ್ಯಾಪಾರಿಗಳನ್ನು ಖಾಲಿ ಮಾಡಿಸಿದ ವಾರ್ತೆಯ ನೆನಪಾಯಿತು. ಹೊಟ್ಟೆ ಹೊರೆದುಕೊಳ್ಳುವ ಜನರನ್ನು ಏಕಾಏಕಿ ಓಡಿಸುವುದೂ ತರವಲ್ಲ, ಹಾಗೆಯೇ ಅವರು ಮಾಡಿದ್ದೆಲ್ಲಾ ಸರಿ ಎಂದು ನೋಡಿಕೊಂಡು ಕೂಡುವುದೂ ಸರಿಯಲ್ಲ, ಇದಕ್ಕೆ



ಏನಾದರೂ ಪರಿಹಾರ ನೀಡುವುದು ಜಾಣತನ ಅಲ್ಲವೇ ?

ಸಂತೆ ಅಂದರೆ ನೋಡಿ, ಚಿತ್ರಸಂತೆಯ ನೆನಪು ಬರುತ್ತಿದೆ. ಇದು ವರ್ಷಕ್ಕೊಮ್ಮೆ ನಡೆಯುವ ಒಂದು ಸಂತೆ. ಚಿತ್ರಕಲಾ ಪರಿಷತ್ತಿನ ರಸ್ತೆಯೇ ಅಂದು ಸಂತೆಯಾಗಿ ಪರಿವರ್ತಿತವಾಗಿರುತ್ತದೆ. ಅಂದು ಆ ರಸ್ತೆಯಲ್ಲಿ ವಾಹನಗಳು ಸಂಚರಿಸುವಂತಿಲ್ಲ. ಯಾವ ಯೋಚನೆಯೂ ಇಲ್ಲದೇ ನೀವೇ ರಾಜರಂತೆ ಅಲ್ಲಿ ನಡೆದಾಡುತ್ತಾ ವ್ಯಾಪಾರ ಮಾಡಬಹುದು. ಅಲ್ಲಿ ನಮ್ಮ ಕಲಾವಿದರ, ಅವರ ಕಲಾಕೃತಿಗಳ ಪರಿಚಯ ನಿಮಗಾಗುತ್ತೆ, ಯಾವುದೋ ಹೊಸಲೋಕಕ್ಕೆ ಹೋದ ಅನುಭವ ನಿಮ್ಮದಾಗ ಬಹುದು. ನಿಮ್ಮ ಚಿತ್ರವನ್ನು ನಿಮಗೆ ಬೇಕಾದ ಭಂಗಿಯಲ್ಲಿ ಕುಳಿತು ಬರೆಸಿಕೊಳ್ಳ ಬಹುದು. ನಿಮಗೆ ಬೇಕಾದ ಚಿತ್ರವನ್ನು ನೀವೇ ನೇರವಾಗಿ ಕಲಾವಿದರಿಂದ ಕೊಳ್ಳ ಬಹುದು. ಇಂತಹ ಕಲಾವಿದರ ಸಂತೆಗಳು ಯೂರೋಪಿನ ಪ್ಯಾರಿಸ್, ರೋಂ, ಕಲೋನ್ ಮೊದಲಾದೆಡೆಯ ಪ್ರವಾಸ ತಾಣಗಳಲ್ಲಿ ನಿತ್ಯವೂ ಕಾಣಬಹುದು. ಅಲ್ಲಿನ ಕಲಾವಿದರ ಅದ್ಭುತ ಕಲ್ಪನೆಗಳ ಸಾಮ್ರಾಜ್ಯವನ್ನು ನೀವು ಕಣ್ಣಾರೆ ಕಾಣಬಹುದು; ಬೇಕೆಂದರೆ ಕೊಳ್ಳಲೂಬಹುದು. ಈ ನೆಪದಲ್ಲಿ ಅಲ್ಲಿ ಕಲಾವಿದರಿಗೆ ಕೊಟ್ಟಿರುವ ಉತ್ತೇಜನ ನನಗೆ ತುಂಬಾ ಇಷ್ಟವಾಯಿತು.

ನಮ್ಮ ದೊಡ್ಡ ದೊಡ್ಡ ಅಂಗಡಿಗಳು ತುಂಬ ಯಾಂತ್ರಿಕ ಅನ್ನಿಸುತ್ತದೆ. ರಸ್ತೆಬದಿಯ ವ್ಯಾಪಾರ ತುಂಬಾ ಹೋಮ್ಲಿ. ನಮ್ಮ ದಿನನಿತ್ಯದ ವಸ್ತುಗಳಿಗೆ ಅಂಗಡಿಗೆ ಹೋಗಿ, ಅಲ್ಲಿ ಜನಜಂಗುಳಿಯ ನಡುವೆ ನುಗ್ಗಾಡಿ ಒದ್ದಾಡುವುದಕ್ಕಿಂತ ತಿರುಗಾಡುವಾಗ ಕಣ್ಣಿಗೆ ಬಿದ್ದ ಕೂಡಲೇ ಬೇಕೆನ್ನಿಸಿದ ವಸ್ತುವನ್ನು ಕೊಳ್ಳುವುದೇ ನನಗೆ ಇಷ್ಟ. ರಸ್ತೆಬದಿಯ ವ್ಯಾಪಾರ ಒಂದು ವಿಂಡೋ ಶಾಪಿಂಗ್ ಇದ್ದಹಾಗೆ. ಬೇಕೆನ್ನಿಸಿದರೆ ಕೊಳ್ಳಬಹುದು, ಚೌಕಾಸಿ ಮಾಡಬಹುದು, ಬೇಡವಾದರೆ ಬಿಟ್ಟು ಮುಂದೆ ಸಾಗಬಹುದು. ಇದು ಒಂದು ರೀತಿಯ ಖುಷಿ. ವ್ಯಾಪಾರ ಮಾಡುವಾಗ ಸರಿಯಾಗಿ ಮಾಡಬೇಕು. ಮೋಸಗಾರರು, ಟೋಪಿ ಹಾಕುವವರು ಎಲ್ಲಿಲ್ಲ ಹೇಳಿ. ನಮ್ಮ ಹುಷಾರಿಯಲ್ಲಿ ನಾವಿದ್ದರೆ ಯಾವ ತೊಂದರೆಯೂ ಇರುವುದಿಲ್ಲ.

ನಗರ ಸಂತೆಯು ಒಂದು ನಿರ್ದಿಷ್ಟ ಸಮಯ, ಕಾಲ, ಜಾಗ ಮೊದಲಾದ ಇತಿಮಿತಿ ಗಳೊಂದಿಗಿದ್ದರೆ ಯಾವ ತೊಂದರೆಯೂ ಇರುವುದಿಲ್ಲ. ಇದು ಜನರಿಗೆ, ವ್ಯಾಪಾರಿ ಗಳಿಗೆ ಉಪಯೋಗವಾಗಬೇಕೇ ವಿನಾ ತೊಂದರೆಯಾಗದಂತಿದ್ದರೆ ಸರಿ.

ಬಡಾವಣೆಗಳ ಸಂತೆಯು ಒಂದಕ್ಕೊಂದು ಸ್ಪರ್ಧಿಸುವಂತಹ ವಾತಾವರಣ ನಿರ್ಮಾಣ ವಾಗಬೇಕು. ಇದು ನಮ್ಮ ಹಳೆಯ ಕಾಲದ ಸಂಸ್ಕೃತಿಯನ್ನು ಬಿಂಬಿಸುವಂತಿರಬೇಕು.

ಹೊರಗಿನವರು ಇದನ್ನು ನೋಡಲಿಕ್ಕಾಗಿಯೇ ಬಂದು ವ್ಯಾಪಾರ ಮಾಡುವಂತಿರ ಬೇಕು. ನಾವು ಮಾರುವ ಮಾಲುಗಳು ಚೆನ್ನಾಗಿದ್ದರೆ, ಅಗ್ಗವಾಗಿದ್ದರೆ ಜನರೇ ಮುಗಿಬಿದ್ದು ಕೊಳ್ಳುತ್ತಾರೆ. ಇಲ್ಲವಾದರೆ ನಮಗೇ ನಷ್ಟ. ಜನರಿಂದಲೇ ಅಲ್ಲವೇ ನಾವು ಬದುಕಿರುವುದು ?

ಇಲ್ಲಿ ಮಧ್ಯವರ್ತಿಗಳ, ಎತ್ತಂಗಡಿ ಮಾಡಿಸುವವರ ಕಾಟ ಮಾತ್ರ ಇರಬಾರದು. ಇಲ್ಲ ವಾದಲ್ಲಿ ನಮ್ಮ ತಲೆಯ ಮೇಲೆ ತೂಗುಕತ್ತಿ ಇಳಿಬಿಟ್ಟಂತೆ. ವ್ಯಾಪಾರ ಮಾಡುವಾಗಲೆಲ್ಲಾ ಯಾವುದೋ ಅವ್ಯಕ್ತ ಭಯ ನಮ್ಮನ್ನು ಕಾಡುತ್ತಿರುತ್ತದೆ. ನೆಮ್ಮದಿಯೇ ಇರುವುದಿಲ್ಲ.

ಇಷ್ಟೆಲ್ಲಾ ಪುರಾಣ ಕೇಳಿ ಆಯಿತಲ್ಲ, ನಿಮಗೇನು ಅನಿಸುತ್ತದೆ? ನಗರ ಸಂತೆ ಬೇಕೇ ? ಬೇಡವೇ ?

**ಪ್ರೊ|| ಬಿ. ಎಸ್. ಜಗದೀಶಚಂದ್ರ**
ನಂ. ೪೪೨, ೩೮ನೇ ಕ್ರಾಸ್, ೫ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

*೧೪ನೇ ಪುಟದಿಂದ (ಪುಸ್ತಕ ಸಂಸ್ಕೃತಿ)*

ಮಹಾಭಾರತ, ಕಾಳಿದಾಸ – ಭಾಸಾದಿ ನಾಟಕಕಾರರು, ಶಾಸ್ತ್ರಸಾಹಿತ್ಯ ಮತ್ತು ಅಲಂಕಾರ ಶಾಸ್ತ್ರ – ಇತ್ಯಾದಿ. ಒಟ್ಟಿನಲ್ಲಿ ಅವರ ದೃಷ್ಟಿಗೆ ಸಂಸ್ಕೃತದಲ್ಲಿ ರಚಿತವಾದದ್ದೇ ಭಾರತೀಯ ಸಾಹಿತ್ಯ. ಆದರೆ ಬಹು ಭಾಷಿಕ ಬಹುಸಾಂಸ್ಕೃತಿಕ ಸಮುಚ್ಚಯವಾದ ಈ ದೇಶದಲ್ಲಿ ಸಂಸ್ಕೃತಕ್ಕೆ ಸಮಾನಾಂತರವಾಗಿ, ಸಮೃದ್ಧವೂ ಪ್ರಾಚೀನವೂ ಆದ ಪರಂಪರೆಗಳನ್ನುಳ್ಳ ವಿವಿಧ ಪ್ರಾದೇಶಿಕ ಭಾಷಾ ಸಾಹಿತ್ಯಗಳಿವೆ ಎನ್ನುವುದು ಬಹುಕಾಲ ಅವರ ಗಮನಕ್ಕೇ ಬಂದಂತೆ ತೋರುವುದಿಲ್ಲ. ಹೀಗೆ ಪಶ್ಚಿಮದವರ ದೃಷ್ಟಿಯಲ್ಲಿ ಇಂಡಿಯನ್ ಲಿಟರೇಚರ್ ಎಂದರೆ ಕೇವಲ ಸಂಸ್ಕೃತ ಸಾಹಿತ್ಯವಷ್ಟೇ.

ಒಂದು ಕಾಲಕ್ಕೆ ಇಂಡಿಯನ್ ಲಿಟರೇಚರ್ ಎಂದರೆ ಸಂಸ್ಕೃತದಲ್ಲಿ ರಚಿತವಾದದ್ದು ಸಾಹಿತ್ಯ ಎಂದು ಪಾಶ್ಚಿಮಾತ್ಯರು ಹೇಗೆ ಭಾವಿಸಿದರೋ ಹಾಗೆಯೇ, ಈ ಹೊತ್ತಿಗೂ ಇಂಡಿಯನ್ ಲಿಟರೇಚರ್ ಎಂದರೆ ಭಾರತೀಯ ಲೇಖಕರಿಂದ ಇಂಗ್ಲಿಷ್ ಭಾಷೆಯಲ್ಲಿ ರಚಿತವಾಗುತ್ತಿರುವ ಸಾಹಿತ್ಯ ಎಂಬ ತಪ್ಪು ತಿಳಿವಳಿಕೆಯೊಂದು ಪಶ್ಚಿಮದಲ್ಲಿ ಪ್ರಚಲಿತ ವಾಗಿರುವುದೊಂದು ವಿಪರ್ಯಾಸವಾಗಿದೆ. ಆರ್.ಕೆ. ನಾರಾಯಣ್, ಮುಲ್ಕ್‌ರಾಜ್ ಆನಂದ್, ಅರುಂಧತೀರಾಯ್, ರಾಜಾರಾವ್, ಖುಷವಂತ್ ಸಿಂಗ್, ನಯೀಪಾಲ್ – ಇಂಥವರು ಇಂಗ್ಲಿಷಿನಲ್ಲಿ ಬರೆದಿರುವ ಸಾಹಿತ್ಯವೇ ಭಾರತೀಯ ಸಾಹಿತ್ಯ. ವಿವಿಧ ಪ್ರಾದೇಶಿಕ ಭಾಷೆಗಳಲ್ಲಿ ರಚಿತವಾಗುತ್ತಿರುವ ಸಾಹಿತ್ಯಗಳ ವಿಷಯ ಅವರಿಗೆ – ಅಂದರೆ ಪಶ್ಚಿಮದ ಸಾಹಿತ್ಯಾಸಕ್ತರಿಗೆ – ಗೊತ್ತೇ ಇಲ್ಲ. ಅಷ್ಟೇ ಯಾಕೆ, ನಮ್ಮ ಅಕ್ಕಪಕ್ಕದ ಪ್ರದೇಶಗಳ ಭಾಷಾಸಾಹಿತ್ಯಗಳ ಹಾಗೂ ಸಾಹಿತಿಗಳ ಪರಿಚಯವಾದರೂ ನಮಗೆಷ್ಟಿದೆ ! ಇತ್ತೀಚೆಗೆ, ಸಾಹಿತ್ಯ ಅಕಾಡೆಮಿ, ನ್ಯಾಷನಲ್ ಬುಕ್ ಟ್ರಸ್ಟ್ ಇಂಥ ಸಂಸ್ಥೆಗಳು ಕೈಗೊಂಡಿರುವ ಅನ್ಯಭಾಷಾ ಕೃತಿಗಳ ಅನುವಾದದ ಪರಿಣಾಮವಾಗಿ ನಮಗೆ ಪರಿಚಯವಾದ ಅಲ್ಪಸ್ವಲ್ಪ ಭಾರತೀಯ ಸಾಹಿತ್ಯದ ಹಿನ್ನೆಲೆಯಿಂದ ಹೇಳುವು ದಾದರೆ ನಮ್ಮ ದೇಶದ ವಿವಿಧ ಪ್ರಾದೇಶಿಕ ಸಾಹಿತ್ಯಗಳಲ್ಲಿ ಜಗತ್ತಿನ ಯಾವುದೇ ಪ್ರತಿಷ್ಠಿತ ಪ್ರಶಸ್ತಿಗಳಿಗೂ ಅರ್ಹವಾದ ಅನೇಕ ಕೃತಿಗಳಿವೆ ಎಂದು ಅನ್ನಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದ ವಿಚಾರದಲ್ಲೂ ಈ ಮಾತು ನಿಜ. ಆದರೆ ವಿವಿಧ ಪ್ರಾದೇಶಿಕ ಭಾಷೆಯ ಈ ಮಹತ್ ಕೃತಿಗಳು ಇಂಗ್ಲಿಷ್ ಭಾಷೆಗೆ, ಸಾಧ್ಯವಾದರೆ ಪಶ್ಚಿಮದ ಕೆಲವು ಮುಖ್ಯ ಭಾಷೆಗಳಿಗೆ ಭಾಷಾಂತರವಾಗುವ ಮೂಲಕ ಹೊರ ಜಗತ್ತಿಗೆ ನಿಜವಾದ ಭಾರತೀಯ ಸಾಹಿತ್ಯದ ಪರಿಚಯವಾಗುವ ಕಾಲ ಸನ್ನಿಹಿತವಾಗಿದೆ.

ಈ ಹಿನ್ನೆಲೆಯಲ್ಲಿ ನವಕರ್ನಾಟಕ ಪ್ರಕಾಶನದ ಈ ಒಂದು ಯೋಜನೆಯ ಮೂಲಕ ಪ್ರಕಟವಾಗುತ್ತಿರುವ 'ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಲೇಖಕರ ಬದುಕು-ಬರೆಹ ಮಾಲೆ'ಯ ಯೋಜನೆಯ ಈ ಪುಸ್ತಕಗಳು, ಕನ್ನಡದಲ್ಲಿ ಬರೆಯುತ್ತ ಭಾರತೀಯ ಸಾಹಿತ್ಯದ ಆಯಾಮಗಳನ್ನು ಗಣನೀಯವಾಗಿ ವಿಸ್ತರಿಸಿದ ಲೇಖಕರ ಬದುಕು ಬರೆಹಗಳ ಪರಿಚಯವನ್ನು ಮಾಡಿಕೊಡುತ್ತ ಓದುಗರ ಅರಿವಿನ ಪರಿಧಿಯನ್ನು ವಿಸ್ತರಿಸುವ ಸ್ವರೂಪದವುಗಳಾಗಿವೆ. ಈ ಕೃತಿಗಳು ಇತರ ಭಾರತೀಯ ಭಾಷೆಗಳಿಗೂ ಅನುವಾದಗೊಳ್ಳುವ ಅಗತ್ಯವಿದೆ.

ನಮ್ಮ ಸಾಹಿತ್ಯ ಸಂದರ್ಭದ ಶ್ರೀಮಂತಿಕೆಯನ್ನು, ಕನ್ನಡದ ಪ್ರತಿಭಾವಂತರು ಪಡೆದುಕೊಂಡ ಬಹುಸಂಖ್ಯೆಯ ಪ್ರತಿಷ್ಠಿತ ಪ್ರಶಸ್ತಿಗಳನ್ನು, ಪುಸ್ತಕೋದ್ಯಮದ ಉತ್ಕರ್ಷವನ್ನು ಕುರಿತು ನಾವೆಷ್ಟೇ ಹೆಮ್ಮೆಪಟ್ಟುಕೊಂಡರೂ, ಕನ್ನಡ ನಾಡು-ನುಡಿ ಗಳಿಗೆ ದಿನದಿಂದ ದಿನಕ್ಕೆ ಒದಗುತ್ತಿರುವ ಆತಂಕ-ಅಪಾಯಗಳನ್ನು ಗಮನಿಸಿದರೆ, ಬರುವ ದಿನಗಳಲ್ಲಿ ಕನ್ನಡ ಭಾಷೆ-ಸಾಹಿತ್ಯ-ಸಂಸ್ಕೃತಿಗಳು ಉಳಿದಾವೇ ಎಂದು ಗಾಬರಿಯಾಗುತ್ತದೆ. ಎಲ್ಲಿಯವರೆಗೆ ಆಡಳಿತಾರೂಢರಲ್ಲಿ ಕನ್ನಡಪರವಾದ ದೃಢವಾದ ರಾಜಕೀಯ ಸಂಕಲ್ಪವೊಂದು ರೂಪುಗೊಳ್ಳುವುದಿಲ್ಲವೋ ಮತ್ತು ಕನ್ನಡ ಜನಸಮಷ್ಟಿಯ ಅಂತರಾಳದಲ್ಲಿ ಕನ್ನಡದ ಬಗ್ಗೆ ಉತ್ಕಟವಾದ ಪ್ರೀತಿಯು ಮೂಡುವು ದಿಲ್ಲವೋ ಅಲ್ಲಿಯವರೆಗೆ ಕನ್ನಡದ ಸಮಸ್ಯೆಗಳಿಗೆ ಪರಿಹಾರವಿಲ್ಲ. (೩೦.೭.೨೦೦೬ ರಂದು ನಡೆದ ಸಮಾರಂಭದಲ್ಲಿ ಪುಸ್ತಕ ಅನಾವರಣಗೊಳಿಸಿ ಮಾಡಿದ ಭಾಷಣ.)

**ಡಾ|| ಜಿ.ಎಸ್. ಶಿವರುದ್ರಪ್ಪ**
ನಂ. ೫೬೭, ೧೫ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦



ಉರ್ದು ಮೂಲ :

**ಸಾದತ್ ಹಸನ್ ಮಾಂಟೋ**

ಕನ್ನಡಕ್ಕೆ :

**ಹಸನ್ ನಯೀಂ ಸುರಕೋಡ**

# ನಾಯಿಪಾಡು

**ಹ**ಲವಾರು ದಿನಗಳಿಂದ ಎರಡೂ ಕಡೆಯ ಸೈನಿಕರು ತಮ್ಮ ತಮ್ಮ ನೆಲೆಗಳಲ್ಲಿ ಸಮರಕ್ಕೆ ಸಜ್ಜಾಗಿದ್ದರು. ಹಗಲಿನಲ್ಲಿ ಅತ್ತಿಂದಲೂ ಇತ್ತಿಂದಲೂ ಹತ್ತು ಹನ್ನೆರಡು ಸಲ ಗುಂಡಿನ ಚಕಮಕಿ ನಡೆಯುತ್ತಲೇ ಇತ್ತು. ಗುಂಡಿನ ಸದ್ದಿನೊಂದಿಗೆ ಮನುಷ್ಯ ಪ್ರಾಣಿಯ ಚೀತ್ಕಾರವೇನೂ ಕೇಳಿಬರುತ್ತಿರಲಿಲ್ಲ.

ವಾತಾವರಣ ತುಂಬ ಆಹ್ಲಾದಕರವಾಗಿತ್ತು. ಗಾಳಿ ಕಾಡ ಹೂಗಳ ಪರಿಮಳದ ಸಂಗದಲ್ಲಿ ನೆಮ್ಮದಿ ಕಂಡಿತ್ತು. ಪರ್ವತದ ಶಿಖರಗಳು ಹಾಗೂ ಕೊಳ್ಳಗಳಲ್ಲಿ ನಡೆದ ಕದನದಿಂದ ತಲೆಕೆಡಿಸಿಕೊಳ್ಳದ ನಿಸರ್ಗ ತನ್ನ ದೈನಂದಿನ ಚಟುವಟಿಕೆಗಳಲ್ಲಿ ತಲ್ಲೀನವಾಗಿತ್ತು. ಗುಬ್ಬಿಗಳು ಎಂದಿನಂತೆ ಚಿಂವ್ ಚಿಂವ್ ಎನ್ನುತ್ತಿದ್ದವು. ಹೂಗಳು ತಮ್ಮ ಜಾಯಮಾನಕ್ಕನುಗುಣವಾಗಿ ಮುಗುಳ್ನಗುತ್ತಿದ್ದವು. ದುಂಬಿಗಳು ಝೇಂಕಾರದೊಂದಿಗೆ ತಮ್ಮ ವಿಶಿಷ್ಟ ಗತ್ತಿನಲ್ಲಿ ಹೂಗಳನ್ನು ಮುತ್ತಿ ಮಕರಂದ ಹೀರುತ್ತಿದ್ದವು.

ಗುಂಡಿನ ಸದ್ದು ಕಾಡು ಮೇಡುಗಳಲ್ಲಿ ಪ್ರತಿಧ್ವನಿಸತೊಡಗಿದಾಗ, ಅಕಸ್ಮಾತ್ತಾಗಿ ವಾದ್ಯದ ತಂತಿಗೆ ಕೈ ತಗಲುತ್ತಲೇ ಕಿವಿಗೆ ದಂಗು ಬಡಿಯುವಂತೆ ಬೆಚ್ಚಿಬಿದ್ದ ಗುಬ್ಬಿಗಳು ಚಿಂವ್‌ಗುಡುತ್ತಾ ಹಾರಾಡುತ್ತಿದ್ದವು. ಸೆಪ್ಟೆಂಬರ್‌ನ ಮುಪ್ಪು ಅಕ್ಟೋಬರ್‌ನ ಶೈಶವವನ್ನು ಅಪ್ಪಿಕೊಳ್ಳತೊಡಗಿತ್ತು. ಚಳಿಗಾಲ ಹಾಗೂ ಬೇಸಿಗೆಯ ನಡುವೆ ಸಂಧಾನದ ಮಾತುಕತೆ ನಡೆದಿದೆಯೇನೋ ಎನಿಸುತ್ತಿತ್ತು. ನೀಲಿ ಆಗಸದಲ್ಲಿ ಹಿಂಜಿದ ಅರಳೆಯಂಥ ಹಗುರಾದ ತೆಳ್ಳನೆ ಮೋಡಗಳು ಹೇಗೆ ತೇಲುತ್ತಿದ್ದವೆಂದರೆ ಅವು ತಮ್ಮ ಶ್ವೇತ ನೌಕೆಗಳಲ್ಲಿ ಸವಾರಿಯಾಗಿ ನದಿಯಲ್ಲಿ ವಿಹಾರಕ್ಕೆ ಹೊರಟಿವೆಯೇನೋ ಎನಿಸುತಿತ್ತು.

ಯಾವುದಾದರೊಂದು ನಿರ್ಧಾರ ಏಕೆ ಆಗುತ್ತಿಲ್ಲವೋ ಎಂದು ಪರ್ವತದಲ್ಲಿನ ಎರಡೂ ಕಡೆಯ ಸೈನಿಕರು ಬಹು ದಿನಗಳಿಂದ ಕಾದು ಕಂಗೆಟ್ಟಿದ್ದರು. ಬೇಸರ ಕಳೆಯಲು ಅವರು ಹೊತ್ತುಗೊತ್ತಿಲ್ಲದೆ ಶಾಯರಿ (ಕವನ) ಹೇಳಲು ಮುಂದಾಗುತ್ತಿದ್ದರು. ಕೇಳುಗರು ಸಿಗುವುದು ಸಾಧ್ಯವಿಲ್ಲವೆನಿಸಿದಾಗ ಶಾಯರಿ ಹೇಳುವವರು ತಮ್ಮಷ್ಟಕ್ಕೆ ಗುನುಗುನಿಸುತ್ತಿದ್ದರು. ಕಲ್ಲು ಬಂಡೆಗಳಿದ್ದ ನೆಲದಲ್ಲಿ ಅವರು ಅಂಗತ್ತಲಾಗಿ ಇಲ್ಲಾ ಬೋರಲಾಗಿ ಬಿದ್ದುಕೊಂಡಿರುತ್ತಿದ್ದರು. ಆಜ್ಞೆ ಬಂದೊಡನೆ ಒಂದೆರಡು ಸುತ್ತು ಗುಂಡುಹಾರಿಸುತ್ತಿದ್ದರು.

ಎರಡೂ ನೆಲಗಳು ತುಂಬ ಸುರಕ್ಷಿತವಾದ ತಾಣಗಳಲ್ಲಿದ್ದವು. ಗುಂಡುಗಳು ಬಲು ವೇಗದಿಂದ ಬರುತ್ತಿದ್ದವು. ಅವು ಬಂಡೆಗಳ ಗುರಾಣಿಗೆ ಅಪ್ಪಳಿಸಿ ಅಲ್ಲೇ ಮಣ್ಣುಗೂಡುತ್ತಿದ್ದವು. ಈ ನೆಲೆಗಳಿದ್ದ ಎರಡೂ ಪರ್ವತಗಳ ಎತ್ತರ ಹೆಚ್ಚು ಕಡಿಮೆ ಅಷ್ಟೇ ಇತ್ತು. ನಡುವೆ ಹಸಿರು ತುಂಬಿದ ಕೊಳವಿತ್ತು. ಅದರ ಎದೆ ಮೇಲೆ ಒಂದು ಹಳ್ಳ ಸರ್ಪದಂತೆ ಹರಿಯುತಿತ್ತು.

ವಿಮಾನಗಳಿಂದ ಯಾವುದೇ ಅಪಾಯವಿರಲಿಲ್ಲ. ತೋಪುಗಳು ಇಬ್ಬರ ಬಳಿಯೂ ಇರಲಿಲ್ಲ. ಆದ್ದರಿಂದ ಯಾವುದೇ ವಿಷಯದ ಕುರಿತು ಚಿಮ್ಮುತ್ತಿದ್ದ ನಗೆಯ ಅಲೆಯು ಎರಡೂ ಕಡೆಯ ಸೈನಿಕರ ಕಿವಿಗಳಿಗೆ ಬಡಿಯುತ್ತಿತ್ತು. ಒಮ್ಮೊಮ್ಮೆ ಯಾರಾದರೂ ಲಹರಿ ಬಂದು ಹಾಡತೊಡಗಿದರೆ ಅದರ ಪ್ರತಿಧ್ವನಿಯಾಗುತ್ತಿತ್ತು. ಪರ್ವತಗಳು ಸಂಗೀತದ ಪಾಠ ಹೇಳಿಸಿಕೊಳ್ಳುತ್ತಿವೆಯೇನೋ ಎನಿಸುತ್ತಿತ್ತು.

ಚಹ ಪಾನದ ಅವಧಿ ಮುಗಿದಿತ್ತು. ಕಲ್ಲಿನ ಒಲೆಯಲ್ಲಿ ದೇವದಾರದ ಸಣ್ಣಪುಟ್ಟ ಕೆಂಡಗಳು ಹೆಚ್ಚು ಕಡಿಮೆ ತಣ್ಣಗಾಗಿದ್ದವು. ಆಕಾಶ ನಿರಭ್ರವಾಗಿತ್ತು. ಚಳಿಯು ಪರಿಸರವನ್ನೆಲ್ಲ ಆವರಿಸಿತ್ತು. ಗಾಳಿಯಲ್ಲಿ ಹೂಗಳ ಪರಿಮಳವಿರಲಿಲ್ಲ. ಬಹುಶಃ ರಾತ್ರಿವೇಳೆ ಹೂಗಳು ತಮ್ಮ ಭಂಡಾರವನ್ನು ಮುಚ್ಚಿದ್ದವೇನೋ. ದೇವದಾರದ ಬೆವರಿನ ವಾಸನೆ ಇತ್ತು. ಅದು ಕೂಡ ಅಷ್ಟೇನೂ ಅಸಹನೀಯವಾಗಿರಲಿಲ್ಲ. ಎಲ್ಲರೂ ಕಂಬಳಿಹೊದ್ದು ಮಲಗಿದ್ದರು. ಕೆಲವರಂತೂ ಅದೆಷ್ಟು ಠಕ್ಕಿನಿಂದ ಮಲಗಿದ್ದರೆಂದರೆ ಸಣ್ಣ ಪುಟ್ಟ ಸದ್ದಿಗೆ ಎದ್ದವರೇ ಹೋರಾಡಲು, ಹೋರಾಡಿ ಮಡಿಯಲು ಅಣಿಯಾಗುತ್ತಿದ್ದರು. ಹರನಾಮಸಿಂಗ್ ಕಾವಲಿಗಿದ್ದ. ತನ್ನ ಗಡಿಯಾರದಲ್ಲಿ ಎರಡು ಗಂಟೆಯಾದಾಗ ಅವನು ಗಂಡಾಸಿಂಗ್‌ನನ್ನು ಎಬ್ಬಿಸಿ ಕಾವಲಿಗೆ ನಿಲ್ಲಿಸಿದ. ಅವನಿಗೆ ಮಲಗಬೇಕೆನಿಸುತ್ತಿತ್ತು. ಆದರೆ ಒರಗಿ ಕೊಂಡರೆ ಆಕಾಶದಲ್ಲಿ ಚುಕ್ಕಿಗಳು ಠಿಕಾಣಿ ಹೂಡಿದಂತೆ ನಿದ್ದೆ ಕೂಡ ಅಷ್ಟೇ ದೂರದಲ್ಲಿ ಬೀಡು ಬಿಟ್ಟಿರುತ್ತಿತ್ತು. ಜಮಾದಾರ್ ಹರನಾಮ ಸಿಂಗ್ ಅಂಗಾತ್ತಾಗಿ ಮಲಗಿ ಗುನುಗುನಿಸತೊಡಗಿದ :

ಕುತ್ತಿ ಲೇನಿ ಆ ಸಿತಾರೆಯಾಂವಾಲಿ
ಸಿತಾರೆಯಾಂವಾಲಿ
ವೇ ಹರನಾಮ ಸಿಂಹಾ, ಓ ಯಾರಾ
ಭಾವೇಂ ತೇರಿ ಬಿಕ ಜಾಯೆ

(ತಾರೆಯರ ಮಹಾರಾಣಿಯೇ ನಿನಗೆಷ್ಟು ಚಪ್ಪಲಿ ಬೇಕಿದ್ದರೂ ತನ್ನ ಬಳಿ ಇದ್ದುಬದ್ದುದನ್ನೆಲ್ಲ ಮಾರಿ ನಿನಗೆ ಕೊಡಿಸಲು ಈ ಹರನಾಮ ಸಿಂಹಾ ತಯಾರಿದ್ದಾನೆ, ಬಾ...)

ಹೀಗೆ ಆಕಾಶದಲ್ಲಿ ಮಿನುಗುತ್ತಿದ್ದ ಚುಕ್ಕೆಗಳು ಅವನಿಗೆ ತನ್ನ ಪ್ರಿಯತಮೆಯ ಚಪ್ಪಲಿಗಳಾಗಿ ಕಂಡವು.

ಜುಲ್ತೆ ಲೇ ದೇಯಾಂ ಸಿತಾರೆಯಾಂವಾಲಿ
ಸಿತಾರೆಯಾಂವಾಲಿ ನೀ ಹರನಾಮ ಕೌರ್
ಓ ನಾರೆ ಭಾಂವೇ ಮೇರಿ
ಮಹಿಂ ಇಕ್ ಜಾವೇ

(ಬಾ ಹರನಾಮ ಕೌರ್, ಬಂದು ಸ್ವೀಕರಿಸು ನನ್ನ ಈ ಕಾಣಿಕೆಯನ್ನ. ನನ್ನದೆಲ್ಲವನ್ನೂ ಮಾರಿಕೊಂಡು ನೀಡುತ್ತಿರುವೆ ಈ ಕಾಣಿಕೆಯನ್ನ.)

ತನ್ನ ಕಲ್ಪನೆಯ ಕುದುರೆಗೆ ಲಗಾಮು ಹಾಕಲಾಗದೆ ತಾನೂ ಎದ್ದ, ಉಳಿದವರನ್ನೂ ಎಬ್ಬಿಸಿದ. ಹೆಣ್ಣಿನ ಬಣ್ಣನೆ ಅವನಿಗೆ ಹುಚ್ಚು ಹಿಡಿಸಿತ್ತು. ಉಳಿದವರಿಗೂ ಅವರವರ ಕನಸಿನ ಕನ್ಯೆಯರು ಹುಚ್ಚು ಹಿಡಿಸಿರಬಹುದು. ಅವರ ಹೃದಯದಾಳದ ಭಾವನೆಗಳಿಗೆ ಹೊರದಾರಿ ಸಿಕ್ಕರೆ ಹಬ್ಬದ ವಾತಾವರಣ ನಿರ್ಮಾಣವಾಗಬಹುದೆಂದು ಅವರಿಗೆ ಕುಮ್ಮಕ್ಕು ನೀಡಿದ. ನಾ ಮೇಲು ನೀ ಮೇಲು ಎಂದು ಅವರು ಬಾಯಿಬಿಟ್ಟರು. ಆದರೆ ಯಾರ ಮಾತಿಗೂ ತಲೆ ಬುಡವಿರಲಿಲ್ಲ. ಅವರಲ್ಲಿ ಬಂತಾ ಸಿಂಗ್ ಎನ್ನುವ ಯುವಕನಿದ್ದ. ವಯಸ್ಸಿನಲ್ಲಿ ಎಲ್ಲರಿಗಿಂತ ಚಿಕ್ಕವನು. ಅವನ ಕಂಠ ಬಲು ಮಧುರವಾಗಿತ್ತು. ಅವನು ಇವರ ಸಹವಾಸವೇ ಬೇಡವೆಂದು ದೂರ ಹೋಗಿ ಕುಳಿತುಕೊಂಡ. ಉಳಿದವರು ಕಚಗುಳಿ ಇಡುವ ಪ್ರಸಂಗಗಳನ್ನು ನಿರೂಪಿಸಿ ಮೋಜು ಮಾಡುವುದರ ಜೊತೆಗೆ ಆಕಳಿಸತೊಡಗಿದರು. ಸ್ವಲ್ಪ ಸಮಯದ ನಂತರ ಬಂತಾ ಸಿಂಗ್ ಏಕಾಏಕಿ ಭಗ್ನ ಹೃದಯಿಗಳ ನೋವಿಗೆ ದನಿಯಾದವನಂತೆ 'ಹೀರ್' (ವಿರಹದಿಂದ ಬಳಲುತ್ತಿದ್ದ ರಾಂಝಾನ ಪ್ರೇಯಸಿ ಹೀರ್ ಕುರಿತ ಸುಪ್ರಸಿದ್ಧ ಪ್ರೇಮಗೀತೆ) ಹಾಡತೊಡಗಿದ :

*ಹೀರ್ ಆಖ್ಯಾ ಜೋಗಿಯಾ ಝೂಟಾ ಬೋಲೆ*
*ಕೌನ್ ರೂಠಡೆ ಯಾರ ಮನಾವೂಂದಾ ಯೀ*
*ಐಸಾ ಕೋಯಿ ನ ಮಿಲೆಯಾ ಮೈಂ ಢೂಂಡ್ ಥಕ್ಕಿ*
*ಜೆಹಡಾ ಗಯಾಂನಾ ಮೋಡ್ ಲ್ಯಾವೂಂದಾ ಯೀ*

(ಹೀರ್ ತನ್ನ ನೋವು ತೋಡಿಕೊಂಡರೆ
ನಂಬಲಾರನು ಬೈರಾಗಿ
ಮುನಿಸಿಕೊಂಡ ನನ್ನಿಯನನ್ನ ನಾ ಹೇಗೆ ರಮಿಸಲಿ
ನಾನೊಂದು ನೋವುಂಡ ಜೀವ ಬಳಲಿ
ಬೆಂಡಾಗಿದ್ದೇನೆ
ಯಾರಿಗೆ ಹೇಳಲಿ ನನ್ನ ನೋವಿನ ಕತೆಯನ್ನ?)

ಸ್ವಲ್ಪ ಹೊತ್ತು ಸುಮ್ಮನಾಗಿ ಹೀರಳ ಈ ಪ್ರಶ್ನೆಗೆ ರಾಂಝಾನ ಮಾತಿನಲ್ಲಿ ಉತ್ತರ ನೀಡಿದ :

*ಜೆಹಡೆ ಬಾಜ್ ತೊ ಕಾಂಗ್ ನೇ ಕೂಂಜ ಖೋಹಿ*
*ಸಬ್ರ ಶುಕರ್ ಕರ್ ಬಾಜ್ ಫನಾ ಹೋ ಯಾ*
*ದುನಿಮಾಂ ಭಡ್ಡ್ ಉದಾಸಿಯಾಂ ಪಹನ್ ಲೈಯಾಂ*
*ಸೈಯದ್ ವಾರಿಸೋಂ ಹುನ್ ವಾರಿಸ್ ಶಾ*
*ಹೋಯಾ*

[ನಿನ್ನ ಆಸೆ ಈಡೇರಲಿದೆ ದೇವರು ಮತ್ತವನ ಪ್ರವಾದಿಯೇ ಸಾಕ್ಷಿ. ಈ ಜಗದ ನೋವೇ ತನ್ನದೆಂದವನೇ ಆಗುವನು ವಾರಿಸ್ ಶಾ (ಸುಪ್ರಸಿದ್ಧ ಹೀರ್-ರಾಂಝಾ ಪ್ರೇಮಗೀತೆಯನ್ನು ಬರೆದ ಪ್ರಸಿದ್ಧ ಸೂಫಿ ಸಂತ ವಾರಿಸ್ ಶಾ)]

ಬಂತಾ ಸಿಂಗ್ ಹೇಗೆ ಏಕಾಏಕಿ ಹಾಡಲಾರಂಭಿಸಿದ್ದನೋ ಅದೇ ರೀತಿ ಹಠಾತ್ತಾಗಿ ಮೌನಕ್ಕೆ ಶರಣಾದ. ಪರ್ವತಗಳು ಶೋಕದಲ್ಲಿ ಮುಳುಗಿದ್ದಂತೆ ಕಂಡವು. ಜಮಾದಾರ್ ಹರನಾಮ ಸಿಂಗ್ ಅದ್ಯಾರಿಗೋ ಅಶ್ಲೀಲವಾಗಿ ಬೈಯ್ದು ಮಲಗಿದ. ಇದ್ದಕ್ಕಿದ್ದಂತೆ ರಾತ್ರಿಯ ಕಡೆಯ ಪ್ರಹರದ ಶೋಕತಪ್ತ ವಾತಾವರಣದಲ್ಲಿ ನಾಯಿಯೊಂದು ಬೊಗಳಗೊಡಗಿತು. ಎಲ್ಲರೂ ಬೆಚ್ಚಿಬಿದ್ದರು. ಸದ್ದು ಸಮೀಪದಿಂದಲೇ ಬಂದಿತ್ತು.

ಹರನಾಮ ಸಿಂಗ್ ಎದ್ದವನೇ, ''ಇದೆಲ್ಲಿಂದ ಬಂತು ಈ ಹಾಳಾದ ನಾಯಿ ?'' ಎಂದು ಗೊಣಗಿದ.

ನಾಯಿ ಮತ್ತೆ ಬೊಗಳಿತು. ಈಗ ಅದರ ಸದ್ದು ಇನ್ನೂ ಹತ್ತಿರದಿಂದ ಬಂದಂತಾಯಿತು. ಬಂತಾ ಸಿಂಗ್ ಎದ್ದು ಅದರತ್ತ ನುಗ್ಗಿದ. ಅವನು ವಾಪಸಾದಾಗ ಅವನ ಜೊತೆ ಒಂದು ಬಡಾಡಿ ನಾಯಿ ಇತ್ತು. ಅದು ತನ್ನ ಬಾಲ ಅಲ್ಲಾಡಿಸುತ್ತಿತ್ತು. ಅವನು ಮುಗುಳ್ನಕ್ಕು, ''ಜಮಾದಾರ್ ಸಾಹೇಬರೇ, ಹೂ ಕಮ್ಸ್ ಹಿಯರ್ ಎಂದು ನಾನು ಕೇಳಿದ್ದಕ್ಕೆ ನಾನು ಚಪಡ್ ಝುನ್ ಝುನ್ ಎಂದಿತು ಇದು'' ಎಂದ.

ಎಲ್ಲರೂ ನಗಲಾರಂಭಿಸಿದರು. ಜಮಾದಾರ್ ಹರನಾಮ ಸಿಂಗ್ ನಾಯಿಯ ಬಾಲವನ್ನು ನೀವಿದ. ''ಇತ್ತ ಬಾ, ಚಪಡ್ ಝುನ್ ಝುನ್,'' ಎಂದ.

ನಾಯಿ ಬಾಲವನ್ನಲ್ಲಾಡಿಸುತ್ತಾ ಹರನಾಮ ಸಿಂಗ್ ಬಳಿಹೋಯಿತು. ತಿನ್ನಲು ಏನಾದರೂ ಎಸೆದಿದ್ದಾರೇನೋ ಎಂದು ನೆಲದ ಮೇಲೆ ಬಿದ್ದಿದ್ದ ಕಲ್ಲನ್ನು ಮೂಸಿನೋಡತೊಡಗಿತು. ಜಮಾದಾರ್ ಹರನಾಮ ಸಿಂಗ್ ಚೀಲ ಬಿಚ್ಚಿ ಒಂದು ಬಿಸ್ಕತ್‌ಅನ್ನು ಹೊರತೆಗೆದು ಅದರತ್ತ ಎಸೆದ. ನಾಯಿ ಅದನ್ನು ಮೂಸಿನೋಡಿ ಬಾಯಿ ತೆರೆಯಿತು. ಆದರೆ ಹರನಾಮ ಸಿಂಗ್ ಹಠಾತ್ತಾನೇ ಮುನ್ನುಗ್ಗಿ, ಗಬಕ್ಕನೇ ಬಿಸ್ಕತ್ತನ್ನು ಕೈಗೆತ್ತಿಕೊಂಡ. ''ನಿಲ್ಲು, ನೀನು ಪಾಕಿಸ್ತಾನಿ ಏನು ?'' ಎಂದು ಕೇಳಿದ.

ಮತ್ತೆ ನಗೆಯ ಬುಗ್ಗೆ ಉಕ್ಕಿತು. ಸರದಾರ್ ಬಂತಾ ಸಿಂಗ್ ಮುಂದೆ ಹೋಗಿ ನಾಯಿಯ ಬೆನ್ನ ಮೇಲೆ ಕೈಯಾಡಿಸುತ್ತಾ, ''ಇಲ್ಲ, ಜಮಾದಾರ್ ಸಾಹೇಬರೇ, ಚಪಡ್ ಝುನ್ ಝುನ್ ಭಾರತೀಯ,'' ಎಂದ.

ಜಮಾದಾರ್ ಹರನಾಮ ಸಿಂಗ್ ನಕ್ಕ. ನಾಯಿಯನ್ನು ಉದ್ದೇಶಿಸಿ, ''ಪುರಾವೆ ಎಲ್ಲಿದೆ ?'' ಎಂದು ಕೇಳಿದ.

ನಾಯಿ ಬಾಲ ಅಲ್ಲಾಡಿಸತೊಡಗಿತು. ಹರನಾಮ ಸಿಂಗ್ ಇನ್ನಷ್ಟು ಜೋರಾಗಿ ನಕ್ಕ. ''ಇದು ಪುರಾವೆಯಾಗಲಾರದು. ಎಲ್ಲ ನಾಯಿಗಳೂ ಬಾಲ ಅಲ್ಲಾಡಿಸುತ್ತವೆ.''

ಬಂತಾ ಸಿಂಗ್ ನಾಯಿಯ ಕಂಪಿಸುತ್ತಿದ್ದ ಬಾಲ ಹಿಡಿದುಕೊಂಡ. ''ಪಾಪ, ನಿರಾಶ್ರಿತ.''

ಜಮಾದಾರ್ ಹರನಾಮ ಸಿಂಗ್ ಬಿಸ್ಕತ್ ಎಸೆದ. ನಾಯಿ ಅದನ್ನು ಗಬಕ್ಕನೇ ಕಬಳಿಸಿತು. ಒಬ್ಬ ಸೈನಿಕ ತನ್ನ ಬೂಟಿನ ಹಿಮ್ಮಡಿಯಿಂದ ನೆಲ ಕೆದರುತ್ತಾ, ''ಈಗ ನಾಯಿ ಕೂಡ ಭಾರತೀಯ ಆಗಬೇಕು, ಇಲ್ಲಾ ಪಾಕಿಸ್ತಾನಿ,'' ಎಂದು ನಕ್ಕ.

ಜಮಾದಾರ್ ತನ್ನ ಚೀಲದಿಂದ ಇನ್ನೊಂದು ಬಿಸ್ಕತ್ ತೆಗೆದು ಎಸೆದ. ''ಪಾಕಿಸ್ತಾನಿ ಮನುಷ್ಯರನ್ನು ಗುಂಡಿಕ್ಕಿ ಕೊಲ್ಲುವಂತೆ ನಾಯಿಗಳನ್ನೂ ಕೊಲ್ಲಬೇಕಾಗುತ್ತದೆ.''

ಒಬ್ಬ ಜೋರಾಗಿ ಘೋಷಣೆ ಕೂಗಿದ. ''ಹಿಂದುಸ್ತಾನ್ ಜಿಂದಾಬಾದ್ !''

ಬಿಸ್ಕತ್ತನ್ನು ಎತ್ತಿಕೊಳ್ಳಲು ಮುನ್ನುಗ್ಗಿದ್ದ ನಾಯಿ ಹೆದರಿ ಹಿಂದೆ ಸರಿಯಿತು. ಅದರ ಬಾಲ ಅದರ ತೊಡೆ ಸಂಧಿ ಸೇರಿತು. ಜಮಾದಾರ್ ಹರನಾಮ ಸಿಂಗ್ ನಕ್ಕ. ''ನಮ್ಮ ಘೋಷಣೆ ಕೇಳಿ ಯಾಕೆ ಹೆದರುತ್ತಿಯಾ ? ಚಪಡ್ ಝುನ್ ಝುನ್, ತಿನ್ನು ಇಕೋ ಇನ್ನೊಂದು...'' ಅವನು

ಚೀಲದಿಂದ ಮತ್ತೊಂದು ಬಿಸ್ಕತ್ ಅದರ ಬಾಯಿಗಿಟ್ಟ.

ಮಾತು ಮಾತಿನಲ್ಲಿ ಬೆಳಗಾಯಿತು. ಸೂರ್ಯ ಹೊರ ಬೀಳಬೇಕೆಂದಿದ್ದ. ಅದಕ್ಕೂ ಮೊದಲೇ ಕತ್ತಲೆ ಕಂಬಿ ಕಿತ್ತಿತು. ಬಟನ್ ಒತ್ತಿದೊಡನೆ ಬೆಳಕು ಹರಡುವಂತೇ ಟಿಟವಾಲ್ ಎನ್ನುವ ಹೆಸರಿನ ಆ ಪರ್ವತ ಪ್ರದೇಶದಲ್ಲಿ ನೋಡುನೋಡುವಷ್ಟರಲ್ಲಿ ಸೂರ್ಯನ ಕಿರಣಗಳು ಪಸರಿಸಿಕೊಂಡವು.

ಈ ಪ್ರದೇಶದಲ್ಲಿ ತುಂಬ ಸಮಯದಿಂದ ಕದನ ನಡೆದಿತ್ತು. ಒಂದೊಂದು ಪರ್ವತಕ್ಕಾಗಿ ಹತ್ತಾರು ಸೈನಿಕರು ಮಡಿಯುತ್ತಿದ್ದರು. ಆದಾಗ್ಯೂ ಅದರ ಕಬ್ಜಾ ಶಾಶ್ವತವಾಗುತ್ತಿರಲಿಲ್ಲ. ಇಂದು ಈ ಪರ್ವತ ಇವರ ಕಬ್ಜಾದಲ್ಲಿದ್ದರೆ ನಾಳೆ ಅದು ವೈರಿಗಳ ವಶದಲ್ಲಿರುತ್ತದೆ. ನಾಡಿದ್ದು ಇವರದಾಗುತ್ತದೆ. ಮುಂದಿನ ದಿನ ಮತ್ತೆ ಅವರ ಕಬ್ಜಾದಲ್ಲಿರುತ್ತದೆ.

ಜಮಾದಾರ್ ಹರನಾಮ ಸಿಂಗ್ ದುರ್ಬೀನು ಹಿಡಿದು ಆಸುಪಾಸಿನ ಪ್ರದೇಶದ ಸಮೀಕ್ಷೆ ಮಾಡಿದ. ಎದುರಿಗೆ ಪರ್ವತದಲ್ಲಿಂದ ಹೊಗೆ ಏಳತೊಡಗಿತ್ತು. ಅದರರ್ಥ ಅಲ್ಲಿ ಚಹಾ ಇಲ್ಲಾ ಇನ್ನೇನೋ ತಯಾರಾ ಗುತ್ತಿದೆ ಎಂದಾಗಿತ್ತು. ಇಲ್ಲಿ ಕೂಡ ಉಪಹಾರದ ತಯಾರಿ ನಡೆದಿತ್ತು. ಬೆಂಕಿ ಹೊತ್ತಿಸಲಾಗುತ್ತಿತ್ತು. ಆ ಕಡೆಯವರಿಗೂ ಇಲ್ಲಿಂದ ಹೊಗೆ ಏಳುತ್ತಿದ್ದುದು ಕಾಣುತ್ತಿತ್ತು. ಉಪಹಾರದ ಕಾಲಕ್ಕೆ ಎಲ್ಲ ಸೈನಿಕರು ತಮ್ಮ ತಟ್ಟೆಯಿಂದ ನಾಯಿಗೂ ಬಡಿಸಿದರು. ಅದು ಹೊಟ್ಟೆ ಬಿರಿಯುವಂತೆ ತಿಂದಿತು. ಎಲ್ಲರೂ ಅದರ ಜೊತೆ ಸ್ನೇಹ ಬೆಳೆಸಲು ಕಾತರರಾಗಿದ್ದರೇನೋ ಎನ್ನುವಂತೆ ಅವರು ಅದರ ಬಗ್ಗೆ ವಿಶೇಷ ಕಾಳಜಿ ವಹಿಸಿದರು. ನಾಯಿಯ ಆಗಮನದಿಂದ ಅವರಲ್ಲಿ ಅಪಾರ ಲವಲವಿಕೆ ಬಂದಂತಾಗಿತ್ತು. ಒಬ್ಬರ ನಂತರ ಒಬ್ಬರು ಚಪಡ್ ಝುನ್ ಝುನ್ ಎಂದು ಕರೆದು ಅದರ ಬೆನ್ನ ಮೇಲೆ ಕೈಯಾಡಿಸಿ ಪ್ರೀತಿ ತೋರುತ್ತಿದ್ದರು.

ಸಂಜೆ ಹೊತ್ತು ಇನ್ನೊಂದೆಡೆ ಸುಬೇದಾರ್ ಹಿಮ್ಮತ್ ಖಾನ್ ತನ್ನ ಭಾರೀ ಗಾತ್ರದ ಮೀಸೆ ತಿರುವುತ್ತಾ ಟಿಟವಾಲದ ನಕಾಶೆಯನ್ನು ಕೂಲಂಕಷವಾಗಿ ವೀಕ್ಷಿಸುತ್ತಿದ್ದ. ಅವನ ಆ ಮೀಸೆ ಕುರಿತ ಜನಜನಿತವಾದ ಕತೆಗಳಿಗೆ ಲೆಕ್ಕವಿರಲಿಲ್ಲ. ಅವನೊಟ್ಟಿಗೇ ವೈರಲೆಸ್ ಆಪರೇಟರ್ ಕುಳಿತಿದ್ದ. ಸುಬೇದಾರ್ ಹಿಮ್ಮತ್ ಖಾನ್‌ಗಾಗಿ ಅವನು ಪ್ಲಟೂನ್ ಕಮಾಂಡರ್‌ನಿಂದ ಆಜ್ಞೆ ಸ್ವೀಕರಿಸುತ್ತಿದ್ದ. ಸ್ವಲ್ಪ ದೂರದಲ್ಲಿ ಬಂಡೆಗೆ ಬೆನ್ನು ಹಚ್ಚಿ ಬಂದೂಕು ಹಿಡಿದು ನಿಂತಿದ್ದ ಬಶೀರ್ ಮೆಲ್ಲನೇ ಗುನುಗುನಿಸುತ್ತಿದ್ದ: ಚೆನ್ನಾ ಕಿತ್ಥೆ ಗವಾಯಿ ಆಯಿ ರಾತ್ ವೇ (ನಲ್ಲ, ನಿನ್ನೆ ನೀನೆಲ್ಲಿ ರಾತ್ರಿ ಕಳೆದುಬಂದೆ)... ಬಶೀರ್‌ಗೆ ಹುರುಪು ಬಂದಂತಾಯಿತು. ಎತ್ತರದ ದನಿಯಲ್ಲೇ ಮೈಮರೆತು ಹಾಡತೊಡಗಿದ. ಇದ್ದಕ್ಕಿದ್ದಂತೆ ಹಿಮ್ಮತ್‌ಖಾನ್, ''ಲೋ ಇಡೀ ರಾತ್ರಿ ಎಲ್ಲಿದ್ದೆ ?'' ಎಂದು ಗುಡುಗಿದ್ದು ಕೇಳಿ ಅವನನ್ನೇ ಗಾಬರಿಯಿಂದ ನೋಡಿ ಅವನು ತನ್ನನ್ನಲ್ಲ ಇನ್ಯಾರನ್ನೋ ಉದ್ದೇಶಿಸಿ, ''ಎಲ್ಲಿದ್ದೆ ಹೇಳು'' ಎಂದ, ಬಶೀರ್ ಸ್ವಲ್ಪ ದೂರದಲ್ಲಿ ಅದೇ ಬಿಡಾಡಿ ಕುಳಿತಿದ್ದನ್ನು ನೋಡಿದ. ಕೆಲ ದಿನಗಳ ಹಿಂದೆ ಕರೆಯದೆ ಬರುವ ಅತಿಥಿಗಳಂತೆ ತಮ್ಮ ನೆಲೆಗೆ ಬಂದಿದ್ದ ನಾಯಿ ಇಲ್ಲೇ ಠಿಕಾಣಿ ಹೂಡಿತ್ತು. ಮುಗುಳ್ನಕ್ಕು ಬಶೀರ್ ನಾಯಿಯನ್ನು ಉದ್ದೇಶಿಸಿ, ''ಚೆನ್ನಾ ಕಿತ್ಥೆ ಗವಾಯಿ ಆಯಿ ರಾತ ವೇ...'' ಎಂದು ಮುಂದುವರಿಸಿದ.

ನಾಯಿ ಜೋರಾಗಿ ಬಾಲ ಅಲ್ಲಾಡಿಸತೊಡಗಿತು. ಅದು ತನ್ನ ಬಾಲದಿಂದ ನೆಲ ಗುಡಿಸುತ್ತಿದೆಯೇನೋ ಎನ್ನಿಸುತ್ತಿತ್ತು.

ಸುಬೇದಾರ್ ಹಿಮ್ಮತ್‌ಖಾನ್ ಒಂದು ಹರಳನ್ನೆತ್ತಿ ನಾಯಿಯತ್ತ ಎಸೆದ. ''ಈ ಸೂಳೇ ಮಗನಿಗೆ ಬಾಲ ಅಲ್ಲಾಡಿಸುವುದನ್ನು ಬಿಟ್ಟರೆ ಇನ್ನೇನೂ ಗೊತ್ತಿಲ್ಲ.''

ಬಶೀರ್‌ನ ದೃಷ್ಟಿ ಅದೇಕೋ ನಾಯಿಯ ಮೇಲೆ ನಟ್ಟಿತ್ತು.

''ಇದರ ಕೊರಳಲ್ಲಿ ಏನಿದೆ ?'' ಎಂದು ಅದರ ಸಮೀಪ ಹೋಗತೊಡಗಿದ. ಅಷ್ಟರಲ್ಲಿ ಇನ್ನೊಬ್ಬ ಸೈನಿಕ ನಾಯಿಯನ್ನು ಹಿಡಿದುಕೊಂಡು ಅದರ ಕೊರಳಿಗೆ ಕಟ್ಟಿದ್ದ ಹಗ್ಗ ಬಿಚ್ಚಿದ. ಅದರಲ್ಲಿ ಒಂದು ರಟ್ಟಿನ ಪಟ್ಟಿಯನ್ನು ಪೋಣಿಸಲಾಗಿತ್ತು. ಅದರ ಮೇಲೆ ಏನೋ ಬರೆಯಲಾಗಿತ್ತು. ಸುಬೇದಾರ್ ಹಿಮ್ಮತ್‌ಖಾನ್ ಪಟ್ಟಿಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು, ''ಓಹ್... ಇದು ಲಂಡೆ ಲಿಪಿ... ಯಾರಾದರೂ ಇದನ್ನು ಓದುವಿರಾ ?'' ಎಂದು ತನ್ನ ಸೈನಿಕರನ್ನು ಕೇಳಿದ.

ತಕ್ಷಣ ಮುಂದೆ ಬಂದ ಬಶೀರ್. ಆ ಪಟ್ಟಿಯನ್ನು ಇಸಿದುಕೊಂಡ. ''ಅಷ್ಟಿಷ್ಟು ಓದಬಲ್ಲೆ,'' ಎಂದ. ಓದಲು ತುಂಬ ತಿಣುಕಾಡಿದ. ಮೊದಲು ಒಂದೊಂದೇ ಅಕ್ಷರ ಓದಿ ಆನಂತರ ಒಂದರ ಜೊತೆ ಇನ್ನೊಂದು ಅಕ್ಷರ ಜೋಡಿಸತೊಡಗಿದ. ''ಚ...ಪ...ಡ... ಚಪಡ್... ಝು...ನ...ಝು...ನ... ಝುನ್ ಝುನ್... ಚಪಡ್ ಝುನ್ ಝುನ್'' ಹೀಗೆಂದರೇನೋ ಎಂದು ಅಚ್ಚರಿಪಟ್ಟ.

ಹಿಮ್ಮತ್‌ಖಾನ್ ತನ್ನ ಭಾರೀ ಗಾತ್ರದ ಚಾರಿತ್ರಿಕ ಮೀಸೆಯನ್ನು ಹುರಿಗೊಳಿಸುತ್ತಾ, ''ಕೋಡ್ ವರ್ಡ್ ಇರಬಹುದು'' ಎಂದ. ''ಬಶೀರ್ ಇನ್ನೇನಾದರೂ ಬರೆಯಲಾಗಿದೆಯೇ ?'' ಎಂದು ಕೇಳಿದ.

ಬಶೀರ್ ಅಕ್ಷರಗಳ ಜೋಡಣೆಯಲ್ಲಿ ಮಗ್ನ ನಾಗಿದ್ದ. ''ಹಾಂ, ಇ...ದು... ಇದು... ಹಿಂ...ದು... ಇದು ಹಿಂದುಸ್ತಾನಿ ನಾಯಿ.''

ಸುಬೇದಾರ್ ಹಿಮ್ಮತ್‌ಖಾನ್ ಯೋಚನೆಗೆ ತೊಡಗಿದ್ದ. ''ಇದರರ್ಥ ಏನು ? ಏನಂತ ಓದಿದೆ ನೀನು ? ಚಪಡ್... ?''

ಬಶೀರ್ ಉತ್ತರಿಸಿದ, ''ಚಪಡ್ ಝುನ್... ಝುನ್...''

ಒಬ್ಬ ಸೈನಿಕ ತಾನು ತುಂಬ ಜಾಣನೆನ್ನುವಂತೆ, ''ಗುಟ್ಟಿರುವುದು ಇದರಲ್ಲೇ'' ಎಂದ.

ಸುಬೇದಾರ್ ಹಿಮ್ಮತ್‌ಖಾನ್‌ಗೆ ಈ ಮಾತು ಸರಿ ಎನಿಸಿತು, ''ಹೌದು, ನನಗೂ ಹೀಗೇ ಅನಿಸುತ್ತಿದೆ.''

ಬಶೀರ್ ಪಟ್ಟಿಯ ಮೇಲಿನ ಬರಹವನ್ನು ಮತ್ತೊಮ್ಮೆ ಪೂರ್ತಿ ಓದಿದ. ''ಚಪಡ್ ಝುನ್ ಝುನ್... ಇದು ಹಿಂದುಸ್ತಾನಿ ನಾಯಿ.''

ಸುಬೇದಾರ್ ಹಿಮ್ಮತ್‌ಖಾನ್ ವೈಯರ್‌ಲೆಸ್ ಸೆಟ್ ಅನ್ನು ತೆಗೆದುಕೊಂಡು ಕಿವಿಗಳಿಗೆ ಹೆಡ್‌ಫೋನ್ ತಗುಲಿಸಿ ಪ್ಲಟೂನ್ ಕಮಾಂಡರ್ ಜೊತೆ ತಾನೇ ಖುದ್ದಾಗಿ ಆ ನಾಯಿಯ ವಿಷಯವಾಗಿ ಮಾತುಕತೆ ನಡೆಸಿದ. ನಾಯಿ ಹೇಗೆ ಬಂದಿತ್ತು, ಎಷ್ಟು ದಿನ ತಮ್ಮ ಜೊತೆಗಿತ್ತು, ನಂತರ ಏಕಾಏಕಿ ಕಾಣೆಯಾಗಿತ್ತು, ಇಡೀ ರಾತ್ರಿ ಅದರ ಸುಳಿವೇ ಇಲ್ಲವಾಗಿತ್ತು... ಹೀಗೆ ಮಾಹಿತಿ ನೀಡತೊಡಗಿದ. ಕೊನೆಗೆ ಅದರ ಕೊರಳಲ್ಲಿ ಒಂದು ಹಗ್ಗವಿತ್ತು, ಅದರಲ್ಲಿ ಒಂದು ರಟ್ಟಿನ ಪಟ್ಟಿಯನ್ನು ಪೋಣಿಸಲಾಗಿತ್ತು ಎಂದು ಹೇಳಿ ಪಟ್ಟಿಯ ಮೇಲೆ ಬರೆದದ್ದನ್ನು ಮೂರ್‍ನಾಲ್ಕು ಬಾರಿ ಪ್ಲಟೂನ್ ಕಮಾಂಡರ್‌ಗೆ ಓದಿ ತಿಳಿಸಿದ. ಆದರೆ ಈ ಮಾತುಕತೆಯಿಂದ ಏನೂ ಪ್ರಯೋಜನವಾಗಲಿಲ್ಲ.

ಬಶೀರ್ ಒಬ್ಬನೇ ನಾಯಿ ಜೊತೆ ಕುಳಿತುಕೊಂಡು ಅದನ್ನು ಒಮ್ಮೆ ರಮಿಸಿ ಇನ್ನೊಮ್ಮೆ ಹೆದರಿಸಿ ಬೆದರಿಸಿ ವಿಚಾರಣೆ ನಡೆಸಿದ. ಇಡೀ ರಾತ್ರಿ ನೀ ಎಲ್ಲಿದ್ದಿ? ನಿನ್ನ ಕೊರಳಿಗೆ ಹಗ್ಗ ಹಾಗೂ ಪಟ್ಟಿಯನ್ನು ಯಾರು ಕಟ್ಟಿದರು ? ಇತ್ಯಾದಿ. ಅವನ ಯಾವ ಪ್ರಶ್ನೆಗೂ ನಾಯಿಯಿಂದ ಸೂಕ್ತವಾದ ಉತ್ತರ ಸಿಗಲಿಲ್ಲ. ಅವನ ಒಂದೊಂದು ಪ್ರಶ್ನೆಗೂ ಉತ್ತರವಾಗಿ ಅದು ಬರೀ ಬಾಲ ಅಲ್ಲಾಡಿಸುತ್ತಿತ್ತು. ಕಡೆಗೆ ಕಂಗೆಟ್ಟ ಬಶೀರ್ ನಾಯಿಯನ್ನು ಹಿಡಿದು ಬಲವಾಗಿ ತದಕಿದ. ನೋವಿನಿಂದ ಅದು ಕುಂಯ್ ಕುಂಯ್ ಎನ್ನತೊಡಗಿತು.

ವೈರ್‌ಲೆಸ್‌ನಿಂದ ಕೈತೊಳೆದುಕೊಂಡ ಹಿಮ್ಮತ್ ಖಾನ್ ಸ್ವಲ್ಪ ಹೊತ್ತು ನಕಾಶೆಯನ್ನು ಲಕ್ಷ್ಯಗೊಟ್ಟು ವೀಕ್ಷಿಸಿ ಏನೋ ನಿರ್ಧಾರ ಮಾಡಿದವನಂತೆ ಮೇಲೆದ್ದ. ಸಿಗರೇಟ್ ಪ್ಯಾಕ್‌ನ ಮುಚ್ಚಳ ತೆಗೆದು ಬಶೀರ್ ಕೈಗೆ ಕೊಟ್ಟ. ''ಬಶೀರ್, ಬರೀ ಇದರ ಮ್ಯಾಲ ಗುರು ಮುಖಿಯಲ್ಲಿ... ಆ ಕ್ರಿಮಿ ಕೀಟಗಳಂಥ ಅಕ್ಷರಗಳಲ್ಲಿ''

> ನಾಯಿ ಗುಂಡಿನ ಸದ್ದಿಗೆ ಹೆದರಿ ಹಿಂತಿರುಗಿತು. ಅದರ ಒಂದು ಕಾಲು ಪೂರ್ತಿ ನಿರುಪಯುಕ್ತವಾಗಿತ್ತು. ಉಳಿದ ಮೂರೂ ಕಾಲುಗಳನ್ನೆಳೆದು ಕೊಂಡು ಹೇಗೋ ಮಾಡಿ ಇನ್ನೊಂದು ದಿಕ್ಕಿನಲ್ಲಿ ಕೆಲವೇ ಅಡಿಗಳಷ್ಟು ದೂರ ಹೋಗಿತ್ತು. ಅದೇ ದಿಕ್ಕಿನಿಂದ ಜಮಾದಾರ್ ಹರನಾಮ ಸಿಂಗ್ ಗುರಿ ಇಟ್ಟು ಗುಂಡು ಹೊಡೆದ. ಈ ಗುಂಡು ನಾಯಿಯ ಕತೆ ಮುಗಿಸಿಬಿಟ್ಟಿತು. ಸುಬೇದಾರ್ ಹಿಮ್ಮತ್‌ಖಾನ್ ವಿಷಾದದಿಂದ ಕೈ ಚೆಲ್ಲಿದ. "ಛೇ... ಛೇ... ಹುತಾತ್ಮ ಆಗಿಬಿಟ್ಟಿತು," ಎಂದ. ಜಮಾದಾರ್ ಹರನಾಮ ಸಿಂಗ್ ಸುಡುತ್ತಿದ್ದ ಬಂದೂಕಿನ ನಳಿಗೆಯನ್ನು ನೇವರಿಸುತ್ತಾ, "ನಿನ್ನಂಥವರಿಗೆ ಇದೇ ಪಾಡು," ಎಂದು ಅವುಡುಗಚ್ಚಿದ.

ಎಂದು ಆಜ್ಞಾಪಿಸಿದ.

ಬಶೀರ್ ಸಿಗರೇಟ್ ಪ್ಯಾಕ್‌ನ ತುಕಡಿಯನ್ನು ಇಸಿದುಕೊಂಡು, ''ಏನು ಬರೀಲ್ರಿ ಸುಬೇದಾರ್ ಸಾಹೇಬ್ ?'' ಎಂದು ಕೇಳಿದ.

ಸುಬೇದಾರ್ ಹಿಮ್ಮತ್‌ಖಾನ್ ಮೀಸೆ ತಿರುವುತ್ತಾ ಯೋಚನೆ ಮಾಡತೊಡಗಿದ್ದ. ''ಬರಿಯೋ... ಅದs... ಬರದುಬಿಡು,'' ಎನ್ನುತ್ತಾ ಜೇಬಿನಿಂದ ಪೆನ್ಸಿಲ್ ಹೊರತೆಗೆದು ಬಶೀರ್ ಕೈಯಲ್ಲಿ ಇಟ್ಟ. ''ಏನು ಬರೀಬೇಕು ?'' ತನಗೆ ತಾನೇ ಕೇಳಿಕೊಂಡ.

ಬಶೀರ್ ಪೆನ್ಸಿಲ್ ತುದಿಯನ್ನು ತುಟಿಗೆ ಹಚ್ಚಿಕೊಂಡು ಯೋಚಿಸಿದ. ನಂತರ ಇದ್ದಕ್ಕಿದ್ದಂತೆ ಪ್ರಶ್ನಿಸುವ ಗತ್ತಿನಲ್ಲಿ, ''ಸಪಡ್ ಸುನ್ ಸುನ್ ?'' ಎಂದ. ತಕ್ಷಣ ಸಂತೃಪ್ತನಾಗಿ ಏನೋ ನಿರ್ಧಾರಕ್ಕೆ ಬಂದವನಂತೆ, ''ಚಪಡ್ ಝುನ್ ಝುನ್‌ಗೆ ಸಪಡ್ ಸುನ್ ಸುನ್ ಸರಿಯಾದ ಉತ್ತರವಾಗಬಲ್ಲದು, ಅವ್ನೌನ ಆ ಸಿಕ್ಖರು ಇದನ್ನ ಓದಿ ಶಹಬ್ಬಾಷ್ ಎನ್ನಲೇಬೇಕು,'' ಎಂದ.

ಸಿಗರೇಟ್ ಪ್ಯಾಕ್‌ನ ತುಕಡಿ ಮೇಲೆ ಪೆನ್ಸಿಲ್ ನೆಟ್ಟು, ''ಸಪಡ್ ಸುನ್ ಸುನ್,'' ಎಂದು ಪುನರಾವರ್ತನೆಯಲ್ಲಿ ತೊಡಗಿದ.

''ಹೌದು. ನೂರಕ್ಕ ನೂರರಷ್ಟ ಬರೋಬರಿ ಐತಿ. ಬರಿ... ಸಪಡ್ ಸುನ್‌ಸುನ್,'' ಎಂದ ಸುಬೇದಾರ್ ಹಿಮ್ಮತ್‌ಖಾನ್ ಗಹಗಹಿಸಿ ನಕ್ಕ. ''ಅದರ ಮುಂದ... ಇದು ಪಾಕಿಸ್ತಾನಿ ನಾಯಿ ಅಂತ ಬರಿ.''

ಸುಬೇದಾರ್ ಹಿಮ್ಮತ್‌ಖಾನ್ ರಟ್ಟಿನ ತುಕಡಿಯನ್ನು ಬಶೀರ್‌ಖಾನ್‌ನಿಂದ ಇಸಿದುಕೊಂಡ. ಪೆನ್ಸಿಲ್‌ನಿಂದ ಅದರಲ್ಲಿ ಒಂದು ತೂತು ಕೊರೆದ. ಹಗ್ಗದಲ್ಲಿ ಅದನ್ನು ಪೋಣಿಸುತ್ತಾ ನಾಯಿ ಕಡೆಗೆ ಹೆಜ್ಜೆ ಹಾಕಿದ. ''ತಗೊಂಡು ಹೋಗು ಇದನ್ನ ನಿನ್ನ ಮಕ್ಕಳ ಹಂತೇಕ,'' ಎಂದು ನಾಯಿಗೆ ಆಜ್ಞಾಪಿಸಿದ.

ಈ ಮಾತನ್ನು ಕೇಳಿದ ಸೈನಿಕರೆಲ್ಲ ಬಿದ್ದು ಬಿದ್ದು ನಕ್ಕರು. ಸುಬೇದಾರ್ ಹಿಮ್ಮತ್‌ಖಾನ್ ನಾಯಿಯ ಕೊರಳಿಗೆ ಹಗ್ಗ ಬಿಗಿದ. ಈ ಮಧ್ಯೆ ಅದು ತನ್ನ ಬಾಲ ಅಲ್ಲಾಡಿಸುತ್ತಲೇ ಇತ್ತು. ಇದಾದ ನಂತರ ಸುಬೇದಾರ್ ಅದಕ್ಕೊಂದಿಷ್ಟು ತಿನ್ನಲು ಕೊಟ್ಟ. ಹಿತವಚನ ನುಡಿಯುವ ಶೈಲಿಯಲ್ಲಿ, ''ದೋಸ್ತ್, ನಮಕ್ ಹರಾಂ ಕೆಲಸ ಮಾಡಬ್ಯಾಡ. ನೆನಪಿರಲಿ. ದಗಾಕೋರತನಕ್ಕ ಶಿಕ್ಷಾ ಅಂದ್ರ ಸಾವs'' ಎಂದು ಹೇಳಿದ.

ನಾಯಿ ಮಾತ್ರ ಬಾಲ ಆಡಿಸುವುದನ್ನು ನಿಲ್ಲಿಸಲಿಲ್ಲ. ಅದು ಹೊಟ್ಟೆ ಬಿರಿಯುವಂತೆ ತಿಂದ ಮೇಲೆ ಸುಬೇದಾರ್ ಹಿಮ್ಮತ್‌ಖಾನ್ ಅದರ ಕೊರಳಿಗೆ ಹಗ್ಗ ಹಿಡಿದು ಅದರ ಮುಖವನ್ನು ಪರ್ವತದ ಏಕೈಕ ಕಾಲದಾರಿಯತ್ತ ತಿರುಗಿಸಿದ. ''ಹೋಗು ನಮ್ಮ ಈ ಪತ್ರವನ್ನು ನಮ್ಮ ವೈರಿಗಳಿಗೆ ಮುಟ್ಟಿಸು... ಆದ್ರ ಇಲ್ನೋಡು ವಾಪಸ್ ಬರಬೇಕ... ಇದು ನಿನ್ನ ಆಫೀಸರ್‌ನ ಆರ್ಡರ್, ತಿಳಿತಿಲ್ಲೊ ?''

ನಾಯಿ ಮತ್ತೊಮ್ಮೆ ಬಾಲ ಅಲ್ಲಾಡಿಸಿತು. ಬಳುಕುತ್ತಾ ಹೊರಟು ಕೆಳಗೆ ಪರ್ವತದ ಸೆರಗನ್ನು ಸೇರುತ್ತಿದ್ದ ಕಾಲದಾರಿಯಲ್ಲಿ ಅದು ಮೆಲ್ಲನೆ ಹೆಜ್ಜೆಹಾಕತೊಡಗಿತು. ಸುಬೇದಾರ್ ಹಿಮ್ಮತ್‌ಖಾನ್ ತನ್ನ ಬಂದೂಕನ್ನೆತ್ತಿ ಗಾಳಿಯಲ್ಲಿ ಗುಂಡು ಹಾರಿಸಿದ.

ಗುಂಡು ಹಾರಿಸಿದ ಸದ್ದು ಹಾಗೂ ಅದರ ಪ್ರತಿಧ್ವನಿ ಭಾರತೀಯರ ನೆಲೆಯಲ್ಲಿ ಕೇಳಿಸಿತು. ಅವರಿಗೆ ಇದರ ಅರ್ಥ ತಿಳಿಯದಾಯಿತು. ಜಮಾದಾರ್ ಹರನಾಮ ಸಿಂಗ್ ಮೊದಲೇ ಅದ್ಯಾವ ಕಾರಣಕ್ಕೊ ಸಿಡಿಮಿಡಿಗೊಂಡಿದ್ದ. ಈ ಸದ್ದು ಕೇಳಿ ಅವನು ಕನಲಿದ. ತಕ್ಷಣ ಫೈರ್‌ಗೆ ಆಜ್ಞೆ ಮಾಡಿದ. ಅರ್ಧಗಂಟೆ ತನಕ ಎರಡೂ ನೆಲೆಗಳಿಂದ ಗುಂಡಿನ ಸುರಿಮಳೆ ಆಯಿತು. ಈ ಕ್ರಮದಿಂದ ಬೇಸತ್ತು ಜಮಾದಾರ್ ಹರನಾಮ ಸಿಂಗ್ ಫೈರ್ ನಿಲ್ಲಿಸಲು ಆರ್ಡರ್ ಮಾಡಿ ಗಡ್ಡ ಬಾಚಿಕೊಳ್ಳ ತೊಡಗಿದ. ಈ ಕೆಲಸಕ್ಕೆ ವಿರಾಮ ಹೇಳಿ ಎಲ್ಲ ಕೂದಲನ್ನು ತುಂಬ ಹುಷಾರಾಗಿ ಜಾಳಿಗೆಯಲ್ಲಿ ಸೇರಿಸಿಕೊಂಡ. ''ಓಯ್ ಬಂತಾ ಸಿಂಗ್, ಚಪಡ್ ಝುನ್ ಝುನ್ ಎಲ್ಲಿ ಹೋಯಿತು ?'' ಎಂದು ಕೇಳಿದ.

ಬಂತಾ ಸಿಂಗ್ ಒಣಗಿದ ದೇವದಾರ ಕಟ್ಟಿಗೆಯ ತೊಗಟೆಯನ್ನು ಉಗುರಿನಿಂದ ಸುಲಿಯುತ್ತಾ, ''ಗೊತ್ತಿಲ್ರಿ,'' ಎಂದ.

ಜಮಾದಾರ್ ಹರನಾಮ ಸಿಂಗ್, ''ನಾಯಿಗೆ ತುಪ್ಪ ಜೀರ್ಣ ಆಗಿಲ್ಲ ಅಂದ್ಹಾಂಗಾಯ್ತು,'' ಎಂದ.

ಬಂತಾ ಸಿಂಗ್‌ಗೆ ಈ ನುಡಿಗಟ್ಟು ಅರ್ಥವಾಗಲಿಲ್ಲ. ''ನಾಯಿಗೆ ನಾವು ತುಪ್ಪದ ಯಾವ ತಿನಿಸ ತಿನ್ನಿಸಿರಲಿಲ್ಲ.''

ಜಮಾದಾರ್ ಹರನಾಮ ಸಿಂಗ್ ಖೊಳ್ಳೆಂದು ನಕ್ಕ. ''ಲೇ ಮಳ್ಳ, ನಿನ್ನ ಜತಿ ಮಾಡುವ ವ್ಯವಹಾರದಾಗ ಶೇಕಡಾ ೯೫ ಲುಕ್ಸಾನ್ ಗ್ಯಾರಂಟಿ ಅಂತ ಪದರನ್ಯಾಗ ಗಂಟ ಹಾಕ್ಕೊಳ್ಳಬೇಕು.''

ಅಷ್ಟರಲ್ಲಿ ಕಾವಲಿಗಿದ್ದ ಸೈನಿಕನೊಬ್ಬ ದುರ್ಬಿನ್ ಹಿಡಿದು ಅತ್ತಿತ್ತ ವೀಕ್ಷಿಸುತ್ತಿದ್ದ. ಏಕಾಏಕಿ ಅವನು ಜೋರಾಗಿ, ''ಅದು ಬರಾಕಹತ್ತೈತಿ,'' ಎಂದು ಕೂಗಿ ಹೇಳಿದ.

ಎಲ್ಲರಿಗೂ ಆಶ್ಚರ್ಯ. ಜಮಾದಾರ್ ಹರನಾಮ ಸಿಂಗ್, ''ಏನು ?'' ಎಂದು ಕೇಳಿದ.

ಕಾವಲಿಗೆ ನಿಂತಿದ್ದ ಸೈನಿಕ, ''ಅದs... ಏನ ಅದರ ಹೆಸರು... ಚಪಡ್ ಝುನ್‌ಝುನ್,'' ಎಂದು ತಿಳಿಸಿದ.

''ಚಪಡ್ ಝುನ್ ಝುನ್ ?'' ನಂಬಲಾಗದೆ ಹರನಾಮ ಸಿಂಗ್‌ನ ಕಿವಿ ನಿಮಿರಿದವು. ''ಏನ್ ಮಾಡಲಿಕ್ಕೆ ಹತ್ತೈತಿ ?''

''ಬರಲಿಕ್ಕೆ ಹತ್ತೈತ್ರಿ.''

ಜಮಾದಾರ್ ಹರನಾಮ್ ಸಿಂಗ್ ಅವನ ಕೈಯಲ್ಲಿದ್ದ ದುರ್ಬಿನ್ ಇಸಿದುಕೊಂಡವನೇ ತಾನೇ ವೀಕ್ಷಣೆಗೆ ತೊಡಗಿದ. ನಾಯಿ ಇತ್ತ ಕಡೆಗೇ ಬರುತ್ತಿತ್ತು... ಕೊರಳಿಗೆ ಹಗ್ಗ ಬಿಗಿಯಲಾಗಿತ್ತು... ''ಆದ್ರ ಇದು ಆ ಕಡೀಂದ ಬರಾಕ ಹತ್ತೈತಲ್ಲ... ನಮ್ಮ ವೈರಿಗಳ ನೆಲೆಯಿಂದ,'' ಎಂದವನೇ ನಾಯಿಯ ಅವ್ವನ ಮೇಲೆ ಅತ್ಯಂತ ಅಶ್ಲೀಲ ಬೈಗುಳ ಕಾರಿದ. ಅದಾದ ನಂತರ ಬಂದೂಕನ್ನೆತ್ತಿ ಗುಂಡು ಹಾರಿಸಿದ. ಗುರಿ ತಪ್ಪಿತು. ಗುಂಡು ನಾಯಿಯಿಂದ ಸ್ವಲ್ಪ ದೂರ ಸುಂಯ್ ಎಂದು ಬಂಡೆಯ ತುಣುಕುಗಳನ್ನು ಹಾರಿಸುತ್ತಾ ಮಣ್ಣುಗೂಡಿತು. ನಾಯಿ ಹೌಹಾರಿ ನಿಂತುಬಿಟ್ಟಿತು.

ಇನ್ನೊಂದು ನೆಲೆಯಲ್ಲಿ ಸುಬೇದಾರ್ ಹಿಮ್ಮತ್ ಖಾನ್ ಕಾಲುದಾರಿಯಲ್ಲಿ ನಾಯಿ ನಿಂತದ್ದನ್ನು ತನ್ನ ದುರ್ಬಿನ್‌ನಲ್ಲಿ ನೋಡಿದ. ಮತ್ತೊಮ್ಮೆ ಗುಂಡು ಹಾರಿದೊಡನೆ ಅದು ಬಾಲ ಮುದುರಿಕೊಂಡು ಹಿಂತಿರುಗಿ ಓಡಲಾರಂಭಿಸಿತು, ಸುಬೇದಾರ್ ಹಿಮ್ಮತ್‌ಖಾನ್‌ನ ನೆಲೆಯತ್ತ. ಸುಬೇದಾರ್ ಜೋರಾಗಿ ಅರಚಿದ: ''ಶೂರರು ಹೆದರೂದಿಲ್ಲ... ವಾಪಸ್ ಹೋಗು.'' ಅದಕ್ಕೆ ಹೆದರಿಸುವ ಉದ್ದೇಶದಿಂದ ಅವನು ಗುಂಡು ಹಾರಿಸಿದ. ನಾಯಿ ಮತ್ತೆ ನಿಂತುಬಿಟ್ಟಿತು. ಆ ಕಡೆಯಿಂದ ಜಮಾದಾರ್ ಹರನಾಮ ಸಿಂಗ್ ಸಹ ಗುಂಡು ಹಾರಿಸಿದ. ಗುಂಡು ನಾಯಿಯ ಕಿವಿಗೆ ತೀರ ಹತ್ತಿರದಿಂದಲೇ ಸುಂಯ್ ಎಂದು ಹಾರಿಹೋಯಿತು. ಅದು ಭಂಗನೇ ನೆಗೆದು ತನ್ನ ಕಿವಿಗಳನ್ನು ಝಾಡಿಸಿಕೊಂಡಿತು. ಆ ಕಡೆಯಿಂದ ಸುಬೇದಾರ್ ಹಿಮ್ಮತ್‌ಖಾನ್ ಎರಡನೇ ಸಲ ಗುಂಡುಹಾರಿಸಿದ. ಈ ಗುಂಡು ನಾಯಿಯ ಮುಂಗಾಲ ಪಂಜದ ಬಳಿಯೇ ಕಲ್ಲುಗಳಲ್ಲಿ ನಟ್ಟಿತು. ದಿಕ್ಕು ತೋಚದೆ ನಾಯಿ ಅತ್ತೊಮ್ಮೆ ಇತ್ತೊಮ್ಮೆ ಓಡುತ್ತಿತ್ತು.

ನಾಯಿಯ ಸಂಕಟ ಕಂಡು ಹಿಮ್ಮತ್‌ಖಾನ್ ಹಾಗೂ ಹರನಾಮ ಸಿಂಗ್ ಹಿರಿಹಿರಿ ಹಿಗ್ಗಿದರು. ಅಟ್ಟಹಾಸಗೈಯ ತೊಡಗಿದರು. ನಾಯಿ ಜಮಾದಾರ್ ಹರನಾಮ ಸಿಂಗ್‌ನ ನೆಲೆಯ ಕಡೆಗೆ ಧಾವಿಸತೊಡಗಿತ್ತು. ಅಷ್ಟಕ್ಕೆ ಅವನ ಪಿತ್ತ ನೆತ್ತಿಗೇರಿತು. ಅವನು ಒಂದು ಅತ್ಯಂತ ಅಶ್ಲೀಲವಾದ ಬೈಗುಳ ಕಾರಿದ. ನಾಯಿಯನ್ನೇ ದುರುಗುಟ್ಟಿ ನೋಡತೊಡಗಿದ್ದ ಹರನಾಮ ಸಿಂಗ್ ಈ ಸಲಕ ಗುರಿ ಇಟ್ಟು ಗುಂಡುಹೊಡೆದ.

ಗುಂಡು ನಾಯಿಯ ಕಾಲಿಗೆ ತಾಕಿತು. ಗಗನವನ್ನೇ ಭೇದಿಸುವ ಒಂದು ಚೀತ್ಕಾರ ಹೊರಹೊಮ್ಮಿತು. ನಾಯಿ ದಿಕ್ಕನ್ನು ಬದಲಿಸಿತು.

ಕುಂಟುತ್ತಾ ಕುಂಟುತ್ತಾ ನಾಯಿ ಸುಬೇದಾರ್ ಹಿಮ್ಮತ್ ಖಾನ್‌ನ ನೆಲೆಯತ್ತ ಓಡತೊಡಗಿದರೆ ಅವನೂ ಗುಂಡು ಹೊಡೆದ. ಅವನ ಉದ್ದೇಶ ನಾಯಿಗೆ ಹೆದರಿಸುವುದಾಗಿತ್ತು. ಗುಂಡು ಹೊಡೆಯುತ್ತಲೇ ನಾಯಿಗೆ ಪುಸಲಾಯಿಸುತ್ತಾ ಕೂಗುಹಾಕಿದ. ''ಶೂರರಿಗೆ ಗಾಯಗಳ ಬಗ್ಗೆ ಪರಿವೆ ಇರೂದಿಲ್ಲ... ಓಡು ಓಡು... ಪ್ರಾಣವನ್ನು ಪಣಕ್ಕಿಟ್ಟು ಓಡು ಶಾಬಾಷ್...''

ನಾಯಿ ಗುಂಡಿನ ಸದ್ದಿಗೆ ಹೆದರಿ ಹಿಂತಿರುಗಿತು. ಅದರ ಒಂದು ಕಾಲು ಪೂರ್ತಿ ನಿರುಪಯುಕ್ತವಾಗಿತ್ತು. ಉಳಿದ ಮೂರೂ ಕಾಲಗಳನ್ನೆಳೆದುಕೊಂಡು ಹೇಗೋ ಮಾಡಿ ಇನ್ನೊಂದು ದಿಕ್ಕಿನಲ್ಲಿ ಕೆಲವೇ ಅಡಿಗಳಷ್ಟು ದೂರಹೋಗಿತ್ತು. ಅದೇ ದಿಕ್ಕಿನಿಂದ ಜಮಾದಾರ್ ಹರನಾಮ ಸಿಂಗ್ ಗುರಿ ಇಟ್ಟು ಗುಂಡು ಹೊಡೆದ. ಈ ಗುಂಡು ನಾಯಿಯ ಕತೆ ಮುಗಿಸಿಬಿಟ್ಟಿತು.

ಸುಬೇದಾರ್ ಹಿಮ್ಮತ್‌ಖಾನ್ ವಿಷಾದದಿಂದ ಕೈ ಚೆಲ್ಲಿದ. ''ಛೇ... ಛೇ... ಹುತಾತ್ಮ ಆಗಿಬಿಟ್ಟಿತು,'' ಎಂದ.

ಜಮಾದಾರ್ ಹರನಾಮ ಸಿಂಗ್ ಸುಡುತ್ತಿದ್ದ ಬಂದೂಕಿನ ನಳಿಗೆಯನ್ನು ನೇವರಿಸುತ್ತಾ, ''ನಿನ್ನಂಥವರಿಗೆ ಇದೇ ಪಾಡು,'' ಎಂದು ಅವುಡುಗಚ್ಚಿದ.

ಉರ್ದು ಮೂಲ : **ಸಾದತ್ ಹಸನ್ ಮಾಂಟೋ**
ಕನ್ನಡಕ್ಕೆ : **ಹಸನ್ ನಯೀಂ ಸುರಕೋಡ**
ಮುದ್ದಿಗಲ್ಲಿ, ರಾಮದುರ್ಗ - ೫೯೧ ೧೨೩, ಬೆಳಗಾಂ ಜಿಲ್ಲೆ

# ರಂಗ ನಿರ್ದೇಶಕ

# ನಾರಾಯಣ ರಾಮಚಂದ್ರ ಮಾಸೂರ್

(ಜನನ : ೧೨-೬-೧೯೨೦ ಮರಣ : ೬-೫-೧೯೯೮)



ಸಾಗರದಲ್ಲಿ ನಾಟಕಕ್ಕೆ ಸಂಬಂಧಿಸಿದಂತೆ ಉದಯ ಕಲಾವಿದರು ರಂಗಸಂಸ್ಥೆ (ಅಟ್ಟ) ಹೇಗೆ ನೆನಪಿಗೆ ಬರುವುದೋ ಅದರ ಜೊತೆಗೇ ಮಾಸೂರರು ನೆನಪಿಗೆ ಬರುತ್ತಾರೆ. ಗೋಧಿ ಬಣ್ಣದ ತೆಳ್ಳನೆ ಶರೀರ, ಕಚ್ಚೆ ಪಂಚೆ, ಜುಬ್ಬ ಇವರ ಯಾವತ್ತೂ ಉಡುಪು. ಪೆಟ್ರೋಲ್ ಬಂಕೊಂದರಲ್ಲಿ ಗುಮಾಸ್ತರಾಗಿ ಕೆಲಸ ಮಾಡುತ್ತಿದ್ದ ಇವರ ಮನಸ್ಸಿನಲ್ಲಿ ನಾಟಕದ ದೃಶ್ಯಗಳೇ ತುಂಬಿಕೊಂಡಿರುತ್ತಿದ್ದವೋ ಏನೋ! ಏಕೆಂದರೆ ನಾಟಕದ ಕಂಪನಿಯನ್ನೇ ಸೇರಿಕೊಳ್ಳಬೇಕೆನಿಸುವಷ್ಟು ನಾಟಕದ ಗೀಳು ಬಾಲ್ಯದಿಂದಲೂ ಮಾಸೂರರಿಗಿತ್ತಂತೆ. ನಾಟಕ ಕಂಪನಿಯವರ ಬಗ್ಗೆ ಸಮಾಜದಲ್ಲಿ ಇರುವ ಅಭಿಪ್ರಾಯ, ಅನಾದರ ಮುಂತಾದ್ದರಿಂದ ಮಾಸೂರರು ಕಂಪನಿ ಸೇರುವ ಧೈರ್ಯ ಮಾಡಲಿಲ್ಲ.

ಎನ್. ಆರ್. ಮಾಸೂರರು ಯಾವುದೇ ಸಂಸ್ಥೆಯಿಂದ ನಾಟಕ ಶಿಕ್ಷಣ ಪಡೆದವರಲ್ಲ. ಆದರೆ ನಾಟಕದ ಪ್ರದರ್ಶನಕ್ಕೆ ಮಾತುಗಾರಿಕೆ, ನಟನೆ, ಪರದೆ ಕಟ್ಟುವುದು (ಈಗಿನ ಹಾಗೆ ಹಿಂದೆ ಸಿದ್ಧರಂಗಮಂದಿರಗಳಿರಲಿಲ್ಲ. ದೀಪ ಕಟ್ಟಲು ಕಂಬ ಹುಗಿಯುವುದು, ರಂಗಕ್ಕೆ ಪರದೆ ಕಟ್ಟುವುದು, ಧ್ವನಿವರ್ಧಕ ಜೋಡಿಸಿಕೊಳ್ಳುವುದು ಮುಂತಾದವುಗಳನ್ನು ತಂಡದ ಸದಸ್ಯರೇ ಸಿದ್ಧತೆ ಮಾಡಬೇಕಿತ್ತು) ರಂಗಪರಿಕರ ಜೋಡಿಸುವುದು ಮುಂತಾದವುಗಳಲ್ಲಿ ಸ್ಪಷ್ಟತೆ, ಶಿಸ್ತು ಸಾಧಿಸಿದವರು. ಏಣಿ ಹಾಕಿ, ಕಷ್ಟಪಟ್ಟು ಎತ್ತರ ಏರಿ ಸುಸ್ತಾದವನು ವಿಶ್ರಾಂತಿಗೆ ನೆಲ ಮುಟ್ಟುವ ಅವಸರದಲ್ಲಿ ಹೇಗೆ ಹೇಗೋ ಪರದೆ ಕಟ್ಟಿ ಇಳಿದರೆ ಮಾಸೂರರು ಸುಮ್ಮನಿರುವವರೇ ಅಲ್ಲ. ತಮ್ಮ ಮನಸ್ಸಿಗೆ ಸಮಾಧಾನವಾಗುವ ಹಾಗೆ ಪರದೆ ಕಟ್ಟುವುದು ಅವರಿಗೆ ಮುಖ್ಯವೇ ಹೊರತು ಶ್ರಮದಲ್ಲಿ ರಿಯಾಯ್ತಿಯನ್ನು ಎಂದಿಗೂ ಮಾಸೂರರು ಒಪ್ಪಿದವರಲ್ಲ.

ಶ್ರೀರಂಗರು 'ಸಾಹಿತಿಯ ಆತ್ಮಜಿಜ್ಞಾಸೆ' ಬರೆದಾಗ, ಇದನ್ನೋದಿದ ಮಾಸೂರರು ಶ್ರೀರಂಗರಿಗೆ ಹೇಳಿದರಂತೆ : ''ನಿಮ್ಮ ಸಾಹಿತಿಯ ಆತ್ಮಜಿಜ್ಞಾಸೆ ಓದಿ ನಮಗೆ ಎಷ್ಟು ಲಾಭವಾಗಿದೆ ಎಂಬುದರ ಕಲ್ಪನೆ ನಿಮಗೆ ಬರುವುದಿಲ್ಲ. ಆಯಾ ನಾಟಕ ಬರೆಯುವ ಮೊದಲು ಅದರ ಹಿನ್ನೆಲೆ, ಅದಕ್ಕೆ ಪ್ರೇರಣೆ, ಪ್ರಚೋದನೆ, ನಾಟಕಕಾರನ ಮನೋಭೂಮಿಕೆ ಇವುಗಳನ್ನೆಲ್ಲಾ ತಿಳಿದು ನಾಟಕ ನಿರ್ದೇಶನ ಮಾಡುವುದಕ್ಕೆ 'ಆತ್ಮ ಜಿಜ್ಞಾಸೆ' ಎಂಥ ಮಾರ್ಗದರ್ಶಿಕೆ ಎಂಬುದನ್ನು ವಿವರಿಸಲು ಅಸಾಧ್ಯವಾಗಿದೆ.'' ೧೯೯೮ರಲ್ಲಿ ಉದಯ ಕಲಾವಿದರು ಪ್ರಕಟಿಸಿದ ಹೊನ್ನ ಹರುಷ ಸುವರ್ಣ ಮಹೋತ್ಸವ ಸಂಚಿಕೆಗೆ ಶಾರದಾ ಆದ್ಯ ರಂಗಾಚಾರ್ ಹೀಗೆ ಬರೆಯುತ್ತಾರೆ: ''ನಾಟಕ ನಿರ್ದೇಶಕನೊಬ್ಬ ನಾಟಕದ ಅಭ್ಯಾಸ ಮಾಡುವಾಗಿನ ಶ್ರದ್ಧೆಯನ್ನು ಈ ಬರಹದಿಂದ ಕಾಣಬಹುದಾಗಿದೆ.''

ಶ್ರೀರಂಗ ಮತ್ತು ಮಾಸೂರರ ಸಂಬಂಧ ಕನ್ನಡ ರಂಗಭೂಮಿಯಲ್ಲಿ ವಿಶೇಷ ಸ್ಥಾನ ಪಡೆದುಕೊಳ್ಳುತ್ತದೆ. ಶ್ರೀರಂಗರ ನಾಟಕಗಳಲ್ಲಿ ಮಾತೇ ಮುಖ್ಯ. ನಾಟಕ ನಿರ್ದೇಶನದಲ್ಲಿ ಮಾಸೂರರೂ ಮಾತಿಗೆ ಪ್ರಾಮುಖ್ಯತೆ ನೀಡಿದ್ದರು. ಹೀಗಾಗಿ ಮಾಸೂರರಿಗೆ ಶ್ರೀರಂಗರ ನಾಟಕಗಳು ಬಹಳ ಇಷ್ಟವಾಗುತ್ತಿದ್ದಿರಬೇಕು. ಶ್ರೀರಂಗರ ನಾಟಕಗಳಲ್ಲಿ ಕಂಸಗಳಲ್ಲಿ ನಿರ್ದೇಶನಗಳಿರುತ್ತವೆ. ತಾನು ನಿರ್ದೇಶಕನಾಗಿ ಬೆಳೆಯಲು ಕಂಸದೊಳಗಿನ ಬರಹಗಳೇ ಕಾರಣವೆಂದು ಮಾಸೂರರು ಹೇಳಿದ್ದನ್ನು ಡಾ|| ಗುರುರಾವ್ ಬಾಪಟ್ ನೆನೆಯುತ್ತಾರೆ.

ಪಶ್ಚಿಮದಲ್ಲಿ ಶೇಕ್ಸ್‌ಪಿಯರನ ನಾಟಕಗಳನ್ನೇ ಆಡುವ ತಂಡಗಳು ಮತ್ತು ಶೇಕ್ಸ್‌ಪಿಯರ್ ನಾಟಕಗಳನ್ನೇ ನಿರ್ದೇಶಿಸುವ ನಿರ್ದೇಶಕರುಗಳನ್ನು ಕಾಣುತ್ತೇವೆ. ಬ್ರೆಕ್ಟ್‌ನ ನಾಟಕಗಳನ್ನು ಆಡಿಸಲು ಫ್ರಿಟ್ಜ್ ಬೆನವಿಟ್ಜ್ ಪ್ರಸಿದ್ಧ ರಂಗನಿರ್ದೇಶಕರಾಗಿದ್ದರು. ಭಾರತೀಯ ರಂಗಭೂಮಿಯಲ್ಲಿ ಈ ರೀತಿ ಬೆಳವಣಿಗೆಗಳಿಲ್ಲ. ಉತ್ತರಪ್ರದೇಶದಲ್ಲಿ ಭರತೇಂದು ಅವರ ನಾಟಕಗಳನ್ನೇ ಆಡಿಸುವ ತಂಡವಿತ್ತು ಎಂಬ ಮಾಹಿತಿಯಿದೆ. ಶ್ರೀರಂಗ ಮತ್ತು ಎನ್. ಆರ್. ಮಾಸೂರರದ್ದು ನಾಟಕಕಾರ ಮತ್ತು ನಿರ್ದೇಶಕನ ಅಪರೂಪದ ಜೋಡಿಯಾಗಿತ್ತು. ಈ ನಾಟಕಗಳನ್ನು ಪ್ರದರ್ಶಿಸಿದವರು ಉದಯ ಕಲಾವಿದರು. ಮಾಸೂರರು ಇತರ ನಾಟಕಕಾರರ ನಾಟಕಗಳನ್ನು ನಿರ್ದೇಶಿಸಿದ್ದರೂ ಅವರು ಶ್ರೀರಂಗರ ನಾಟಕಗಳನ್ನು ಆಡಲು ವಿಶೇಷ ಆಸಕ್ತಿ ಹೊಂದಿದ್ದರು.

''ಹಿರೇಕೆರೂರು ವಿಠೋಬ ರಾಯರ ಕಂಪನಿ, ಹಲಗೇರಿ ದೊಡ್ ಜಟ್ಟಪ್ಪ– ಸಣ್ಣ ಜಟ್ಟಪ್ಪನವರ ಕಂಪನಿ, ತುಮಕೂರಿನ ಗುಬ್ಬಿ ಕಂಪನಿ, ಗದಗದ ಗರೂಡ ಸದಾಶಿವರಾಯರ ಕಂಪನಿಗಳು ಪ್ರದರ್ಶಿಸುತ್ತಿದ್ದ ನಾಟಕಗಳು ರಂಗಾಸಕ್ತಿಯನ್ನು ಮತ್ತಷ್ಟು ಬೆಳೆಸಿದವು. ಸಿದ್ದಾಪುರ ಜಾತ್ರೇಲಿ ನೋಡಿದ ಪೌರಾಣಿಕ ನಾಟಕವೊಂದು ನನ್ನ ಮೇಲೆ ತುಂಬಾ ಪ್ರಭಾವ ಬೀರಿದೆ. ಅಜ್ಜಿ ವೆಂಕೂಬಾಯಿ... ತಾಯಿಗಿಂತ ಅಜ್ಜಿ ನನ್ನ ಸಾಕಿದವರು. ನನ್ನ ನಲವತ್ತನೇ ವರ್ಷದಲ್ಲಿ ಸಾಗರದಲ್ಲಿ ಕೊನೆ ಉಸಿರೆಳೆದಳು. ನನ್ನ ಮ್ಯಾಲೆ ಭಾಳಾ ಪ್ರಭಾವ ಬೀರಿದ್ದಾಳೆ.'' (ಮಾಸೂರರು ಹೇಳಿದ್ದನ್ನು ಬರಹಕ್ಕಿಳಿಸಿದವರು ಡಾ|| ಜಿ. ಎಸ್. ಭಟ್)

**ಉದಯ ಕಲಾವಿದರು – ಸ್ಥಾಪನೆ : ೧೯೪೮**

೧೯೩೮ರಲ್ಲಿ ಕಿರಿಯರ ತಂಡ ಸಂಸ್ಥೆ ಸಾಗರದಲ್ಲಿ ತುಂಬಾ ಚುರುಕಾಗಿತ್ತು. ಆ ಕಾಲದಲ್ಲಿ ಬುದ್ಧ ಮತ್ತು ಕಿಸಾಗೌತಮಿ ಮತ್ತು ಇಂಗ್ಲಿಷ್ ನಾಟಕ ಬಿಷಪ್ಸ್ ಕ್ಯಾಂಡಲ್ ಸ್ಟಿಕ್ಸ್ ನಾಟಕಗಳ ಪ್ರದರ್ಶನಗಳು ಪ್ರಭಾವಶಾಲಿಯಾಗಿದ್ದವು. ಈ ತಂಡದಲ್ಲಿ ಎನ್. ಆರ್. ಮಾಸೂರರು

೨೬ನೇ ಪುಟಕ್ಕೆ

> ಎನ್. ಆರ್. ಮಾಸೂರರನ್ನು ನಿರ್ದೇಶಕರಾಗಿ ಬಲ್ಲವರು, ನಾಟಕದ ಮಾತಿನ ಏರಿಳಿತಗಳ ಮಹತ್ವ ಮತ್ತು ಅದರ ಕಲಿಕೆ, ಶ್ರೀರಂಗರು ಬರೆದ ನಾಟಕಗಳಲ್ಲಿ ಉತ್ತರಕರ್ನಾಟಕದ ಮಾತಿನ ಲಯ, ಮಾತಿನ ಸ್ಪಷ್ಟತೆ, ಖಚಿತವಾದ ರಂಗಚಲನೆ, ಬೆಳಕು, ರಂಗಪರಿಕರ, ವೇಷಭೂಷಣಗಳಲ್ಲಿ ಶಿಸ್ತು ಮುಂತಾದವುಗಳ ಬಗೆಗೆ ಹೇಳದೆ ಇರುವುದಿಲ್ಲ. ಅಂದು ಅವರು ನಾಟಕ ಕಲಿಸುವಾಗ ಬಯ್ಯಿಸಿಕೊಂಡವರು, ಹೊಡೆಸಿಕೊಂಡವರು ಇಂದು ಅವುಗಳನ್ನು ಆಶೀರ್ವಾದವೆಂದು ಪರಿಗಣಿಸುತ್ತಾರೆ. ಅವರ ಒಡನಾಟದ ಅನುಭವಗಳನ್ನು ಅಭಿಮಾನದಿಂದ ನೆನೆಯುತ್ತಾರೆ.

**ಬಂದಗದ್ದೆ ರಾಧಾಕೃಷ್ಣ**

# ಮೆಹಜಬೀನ್

## ಕನ್ನಡಕ್ಕೆ ಬಂದ ವಿಶಿಷ್ಟ ಸ್ತ್ರೀಧ್ವನಿ

### 'ಎಲೆಯುದುರೂ ಕಾಲ' ಸಂಕಲನದ ಭಾವಾನುವಾದವನ್ನು ಕುರಿತು ಕೆಲ ಟಿಪ್ಪಣಿಗಳು

**ಕ**ನ್ನಡದ ಕಾವ್ಯ ಸಂದರ್ಭದಲ್ಲಿ ಅಪ್ಪಟ ಸ್ತ್ರೀಪರ ಧ್ವನಿ ಹೊಸತೇನಲ್ಲ. ಅದಕ್ಕೊಂದು ಸವಿಸ್ತಾರ ಪರಂಪರೆಯೇ ಇದೆ. ಇಲ್ಲಿ ಸ್ತ್ರೀದೃಷ್ಟಿಕೋನದ, ವಾಸ್ತವಿಕ ನೆಲೆಯ ಹಲವಾರು ಕವಯಿತ್ರಿಯರು ತಮ್ಮ ಹೆಜ್ಜೆಗಳನ್ನು, ಗಟ್ಟಿಧ್ವನಿಯನ್ನು ದಾಖಲಿಸಿದ್ದಾರೆ. ಈ ಯಾದಿಯನ್ನು ಪ್ರಾರಂಭಿಸಲು ಪ್ರಥಮಳಾದ ಅಕ್ಕಮಹಾದೇವಿ, ಹಂಪನ ಜೊತೆ ಚರ್ಚಿಸಿ ಸವಾಲೆಸೆದ ಕಂತಿ ಮುಂತಾದವರ ಜೊತೆಗೆ ಸಮಕಾಲೀನ ಕವಯಿತ್ರಿಯರಾದ ಪ್ರತಿಭಾನಂದಕುಮಾರ್, ಸ. ಉಷಾ, ಶಶಿಕಲಾ ವೀರಯ್ಯ ಸ್ವಾಮಿ, ಮಮತಾ ಜಿ. ಸಾಗರ, ಮುಕ್ತಾಯಕ್ಕ ಮೊದಲಾದ ಆಧುನಿಕರಿದ್ದಾರೆ. ಸೀಮಂತಿನಿ ನಿರಂಜನ ತಂದ ಸ್ತ್ರೀವಾದದ ವಿಚಾರವಿದೆ, ವಿಜಯಾ ದಬ್ಬೆಯವರ ತಾತ್ವಿಕತೆ ಇದೆ. ವಿಜಯಲಕ್ಷ್ಮಿ ಕನ್ನಡಕ್ಕೆ 'ಸಿಲ್ವಿಯಾ ಪ್ಲಾತ್'ಳನ್ನು ಕರೆತಂದಿದ್ದಾರೆ. ಶಾ. ಬಾಲುರಾವ್ 'ಅನಾ ಅಹ್ಮತೋವ'ಳನ್ನು ಪರಿಚಯಿಸಿದ್ದಾರೆ. ಇಂತಹುದೊಂದು ಪಾರಂಪರಿಕ ನೆಲೆಯ ವರ್ತಮಾನಕ್ಕೆ ಈವರೆಗಿನ ಧ್ವನಿಗಳಿಗಿಂತ ವಿಭಿನ್ನವಾದ, ಅನನ್ಯವಾದ ಹೊಸದನಿಯೊಂದನ್ನು ಕನ್ನಡಕ್ಕೆ ಗೆಳೆಯ ಚಿದಾನಂದ ಸಾಲಿ ಪರಿಚಯಿಸುತ್ತಿದ್ದಾನೆ. ನೆರೆಯ ಆಂಧ್ರದಲ್ಲಿ ತೊಂಬತ್ತರ ದಶಕದಲ್ಲಿ ಹೊಸ ದನಿ, ಹೊಸ ಬಗೆ, ಹೊಸ ಸಂವೇದನೆಯೊಂದಿಗೆ ಗಮನಾರ್ಹವಾಗಿ ದಾಖಲಾಗಿರುವ ಮೆಹಜಬೀನ್‌ರನ್ನು ಗೆಳೆಯ ಸಾಲಿ ಕನ್ನಡಕ್ಕೆ ಕರೆತಂದಿದ್ದಾನೆ. ಹಾಗೆ ನೋಡಿದರೆ, ಕನ್ನಡಕ್ಕೆ ತೆಲುಗು ಕವಿಗಳು ಅಪರಿಚತರೇನಲ್ಲ. ವೇಮನನಿಂದ... ಶ್ರೀ ಶ್ರೀ ಚರಬಂಡರಾಜು ಮೊದಲಾದವರೆಲ್ಲಾ ಕನ್ನಡದ ಪ್ರಜ್ಞೆಗೆ, ಮನಸ್ಸಿಗೆ ಚಿರಪರಿಚಿತರೇ. ಆದರೆ ಈ ಹೊತ್ತು ಕನ್ನಡದ ಪ್ರಜ್ಞಾವಲಯವನ್ನು ಪ್ರವೇಶಿಸುತ್ತಿರುವ 'ಮೆಹಜಬೀನ್' ನಮ್ಮೊಡನಿದ್ದು ನಮ್ಮಂತಲ್ಲದ ಕವಯಿತ್ರಿ !

'ಎಲೆಯುದುರೂ ಕಾಲ' ಚಿದಾನಂದ ಸಾಲಿ ಮೆಹಜಬೀನ್‌ರ ಕವಿತೆಗಳನ್ನು ಕನ್ನಡೀಕರಿಸಿರುವ ಸಂಕಲನ. ಈ ಕನ್ನಡೀಕರಣದ ಅನುವಾದದ ನೆಲೆಯಲ್ಲಿ ಚಿದಾನಂದ ಸಾಲಿ ಕನ್ನಡದ ನುಡಿಗಟ್ಟು, ಮಟ್ಟುಗಳಲ್ಲಿ ಕವನವನ್ನು ಅದರ ತೆಲುಗುತನವನ್ನು ಮುಕ್ಕಾಗದ ರೀತಿಯಲ್ಲಿ ತಂದಿರಿಸಿದ್ದಾರೆ. ಹಾಗೆಂದೇ ಈ ಸಂಕಲನದ ಮೊದಲ ಓದುವಿಕೆಯೇ ಸರಾಗವಾದ, ಆಪ್ತವಾದ, ಹೃದಯಸ್ಪರ್ಶಿಯಾದ ಅನುಭವ ನೀಡುತ್ತದೆ. ಸ್ತ್ರೀತನದ ಗಟ್ಟಿದನಿಯ ಈ ಕವಿತೆಗಳನ್ನು ಸ್ತ್ರೀ ದನಿಯಲ್ಲದ ಕವಿಯೊಬ್ಬ ಭಾವಾನುವಾದ ಮಾಡುವಾಗ ಈ 'ಸ್ತ್ರೀತನ' ಎದುರಾಗದೇ ಉಳಿದ ಸೂಕ್ಷ್ಮತೆ ಇದೆಯಲ್ಲ, ಅದು ಅನುವಾದದ ಸಾರ್ಥಕತೆ, ಕನ್ನಡದ ಹೆಮ್ಮೆ.

'ಎಲೆಯುದುರುವ' ಬಹುಮುಖ್ಯ ರೂಪಕವನ್ನೇ ಮೈಪಡೆದಿರುವ ಈ ಸಂಕಲನದಲ್ಲಿ ಪ್ರತಿ ಹಂತದಲ್ಲೂ ಪ್ರತಿ ವಿನ್ಯಾಸದಲ್ಲೂ ಉದುರಿದ ಎಲೆಗಳ ಮರ್ಮರ ಸದ್ದಿದೆ. 'ಶಿಶಿರ' ಬಂದ ಹೊತ್ತಿನಲ್ಲಿ ಎಲೆ ಉದುರುವ ಪ್ರಾಕೃತಿಕ ಧರ್ಮ ಒಂದು ನೆಲೆಯಿಂದ ಅನಾವರಣಕ್ಕೆ ಸಂಬಂಧಿಸಿದ್ದು. ಪ್ರಕೃತಿ ತಾನು ಹೊದ್ದ ಹಸಿರಿನ ಛಾದರವನ್ನು ಬದಲಿಸುವ ಈ ಪರಿ ಬೆತ್ತಲಾಗುವ ಕ್ರಿಯೆ – ನಿರ್ಬಂಧದ ಮಹಾ ರೂಪವೇ ಆದುದು. ಅದರೊಂದಿಗೆ ಇನ್ನೂ ಮಾಗಿರದ, ಹಣ್ಣಾಗದ, ಸಕ್ರಿಯವಾದ ಎಲೆಗಳೂ ಉದುರುವ ಒತ್ತಡಕ್ಕೆ ಸಿಲುಕಿ, ಬೀಳುವುದು ಪ್ರಾಕೃತಿಕ ನಿಯಮಗಳನ್ನು ಮೀರಿದ ಸಂಗತಿ. ಈ ಎರಡೂ ನೆಲೆಗಳ ಎಲೆಯುದುರುವ ಪ್ರಕ್ರಿಯೆ ಈ ಸಂಕಲನದ ಎಲ್ಲಾ ಕವಿತೆಗಳಲ್ಲಿದೆ. ಘೋಷಿತ 'ಸ್ತ್ರೀವಾದಿ'ಯಂತಲ್ಲದ ವಿಶಿಷ್ಟ ದನಿಯೊಂದು ಈ ಕವಿತೆಗಳಲ್ಲಿ ಮೈಪಡೆಯುವ ರೀತಿಯೇ ರೋಚಕವಾದುದು. ಇಲ್ಲಿ ಸ್ತ್ರೀಯೊಬ್ಬಳು ಅಭಿವ್ಯಕ್ತಿಸಿದ, ಆಕೆಯದೇ ವೈಯಕ್ತಿಕ ನಿಲುವಿನ ಪ್ರೇಮವಿದೆ, ಪ್ರಣಯವಿದೆ, ಭಾವಪೂರ್ಣತೆ ಇದೆ, ವೈಚಾರಿಕತೆ ಇದೆ ಮತ್ತು ಇವನ್ನೆಲ್ಲಾ ಯಥಾವತ್ತಾಗಿ ಅಭಿವ್ಯಕ್ತಿಸುವ ಆತ್ಮಸ್ಥೈರ್ಯವಿದೆ.

*'ನಿಸ್ಸಂದೇಹವಾಗಿ*
*ಗಂಡಸರ ಬುನಾದಿಗಳು ಅದುರುತ್ತಿವೆ'* (ಡಾಟರ್ಸ್ ಕಿಂಗ್‌ಡಮ್)

ಎಂಬ ಈ ಸಾಲುಗಳಲ್ಲಿ ಸ್ತ್ರೀತನದ ನಿಜದ ಧಾರ್ಷ್ಟ್ಯವಿದೆ. ಅದು ಏಕಾಏಕಿ ಬಂದ ನಿಲುವೇನಲ್ಲ. ವ್ಯಕ್ತಿ ಸ್ವಾತಂತ್ರ್ಯದ ಹಂಬಲಕ್ಕೂ ಮಿಗಿಲಾದ ಸ್ತ್ರೀಪರವಾದ ಹಂಬಲ ತನ್ನನ್ನು ವ್ಯಕ್ತಪಡಿಸುವ ರೀತಿಯಲ್ಲೇ ಗಂಭೀರತೆಯನ್ನೂ ಕಾಠಿಣ್ಯವನ್ನೂ ಪಡೆಯುತ್ತದೆ. ಹಾಗೆಂದೇ ಗಂಡಸರ ಬುನಾದಿಗಳು ಅದುರುತ್ತಿರುವ ಸೂಕ್ಷ್ಮ ಕಂಪನ ಈ ಮನಸ್ಸಿಗೆ ಗೋಚರವಾಗುತ್ತದೆ.

ಗಂಡಸರೆಂದರೆ : ಒಂದು ಹೆಣ್ಣು ಮಗು ತನಗೆ ಹತ್ತಿರದಿಂದ ಕಾಣಬಲ್ಲ ಮೊದಲ ಗಂಡಸು – ಅಪ್ಪ. ಆತನನ್ನು ತಂದೆಯಾಗಿ, ತಾಯಿಯ ಗಂಡನಾಗಿ, ಪುರುಷ ಪ್ರಪಂಚದ ಪ್ರತಿನಿಧಿಯಾಗಿ ಗುರುತಿಸಿಕೊಂಡ ಧ್ವನಿ ಅಸಂಖ್ಯ. ಆದರೆ 'ಗೊತ್ತಾದ ತಂದೆಯನ್ನು' 'ಅಜ್ನಬಿ' ಎಂದು ಕರೆದ ಧ್ವನಿ ಅಪರೂಪದ್ದು. 'ಜನ್ಮದಾತ'ನೆಂದು ತಂದೆಯನ್ನು ಹೆಸರಿಸುವ ಈ ಪರಂಪರೆಯ ಕವಿಯ ಮುಂದೆ ಕವಯಿತ್ರಿ ಜಬೀನ್ ಹೇಳುವುದು 'ಕ್ರೋಮೋಸೋಮುಗಳನ್ನು ಕೊಟ್ಟವನೇ' ಎಂದು! ಹುಟ್ಟಿಗೆ ಕಾರಣನಾದ ಈ ಪರಕೀಯನನ್ನು ಕುರಿತು ಕವಿತೆಯಲ್ಲಿ ಕರುಣೆಗಿಂತ ಕನಿಕರವಿದೆ. ಪ್ರೀತಿ ತೋರಿದ್ದರೆ ಈತನ ವೃದ್ಧಾಪ್ಯದಲ್ಲಿ ನನ್ನ ಹೆಗಲು ಆಧಾರವಾಗುತ್ತಿರಲಿಲ್ಲವೇ ಎಂಬ ದೃಢ ಚಿತ್ತದ ಮಾತು ಪುರುಷ ಅಹಂಕಾರಕ್ಕೆ ಸಲ್ಲುವ ಒಂದು ಕನಿಕರದ ವ್ಯಂಗ್ಯ.

ಇದೇ ಧ್ವನಿ ತಾಯಿಯನ್ನು, ತಾಯ್ತನವನ್ನು ಗುರುತಿಸುವ ರೀತಿಯೇ ಬೇರೆ. ಅದು ಮಾದಕಗೊಂಡಂತಹ ಪರಿ. ಈ ಕವಿತೆಯ ಕಣ್ಣುಗಳು

*ಬೆಳದಿಂಗಳು ಪ್ರವಹಿಸುವ ಆಕೆಯ ಮೇಲೆ*
*ಅಪ್ಪ ಮಾಡಿದ ಗಾಯಗಳು...* ನೋಡಿದೆ. ಅಮ್ಮನನ್ನು ತೀರಾ ಹತ್ತಿರದಿಂದ ಬಲ್ಲ ಈ ಮನಸ್ಸಿಗೆ

*'ಅಕ್ಷರಬಲ್ಲ ಅಮ್ಮ*
*ನಿರ್ದಾಕ್ಷಿಣ್ಯವಾಗಿ ಗಾಯಗೊಂಡಾಗ – ಭಾಷೆಗೆ ನಿಲುಕದ ಭಾವಗಳು'* ಅರ್ಥವಾಗಿವೆ.

ಮನೆಯ ಕೆಲಸದ ಹುಡುಗಿಯನ್ನು ಚಿಕ್ಕ ಅಮ್ಮ ಎಂದೇ ಗುರುತಿಸಿಕೊಳ್ಳುವ ಈ ಭಾವ;

*'ಹಠಾತ್ತಾಗಿ ಅಮ್ಮನೇ*
*ಸಣ್ಣವಳಾದಂತೆ ಕಾಣುತ್ತಾಳೆ'* ಎಂದು ಭಾವಿಸುತ್ತದೆ.

ಸ್ತ್ರೀಪರವಾದ ಈ ನಿಲುವು, ತಾಯ್ತನದ ಕುರಿತು ಈ ಮೃದುತ್ವ, ಕನಿಕರ ಎಲ್ಲಾ ಘನೀಭವಿಸಿ ಸ್ಫೋಟಗೊಳ್ಳುವುದು ಮಾತೃತ್ವಕ್ಕೆ ಹೊಸ ವ್ಯಾಖ್ಯಾನವೊಂದನ್ನು ಬರೆಯಹೊರಟಾಗ.

*'ನಮಗೆ ಮಾತ್ರ ಸಾಧ್ಯವಾಗುವ ಆ ಕ್ರಿಯೆ*
*ನಮಗೆ ಮಾತ್ರ ಕೊಡಲಾದ ಆ ವರ'* ಎಂದೇ ತಾಯ್ತನವನ್ನು ಖಾಸಗೀಕರಿಸಿಕೊಳ್ಳುವ ಜಬೀನ್, ಆ ಕ್ರಿಯೆಯ ನೈಮಿತ್ತ್ಯಕ್ಕೆ –

*'ಯಾರಾದರೇನು ? ಒಂದು ಅನುಭವವ ಬದುಕಬೇಕು*
*ಧೈರ್ಯವಾಗಿ ನವಮಾಸಗಳು ಹೊರಲು ಸಿದ್ಧವಾಗಿರುವಾಗ'* ಎನ್ನುವ ಮೂಲಕ ಅರಿವಿನ ಮಹಾಸ್ಫೋಟವನ್ನೇ ಮಾಡಿಬಿಡುತ್ತಾರೆ. ತೀರಾ ಉತ್ಕಂಠಿತ ಎನ್ನಿಸಬಹುದಾದ

ಆನಂದ್ ಋಗ್ವೇದಿ

'ಎಲೆಯುದುರುವ' ಬಹುಮುಖ್ಯ ರೂಪಕವನ್ನೇ ಮೈಪಡೆದಿರುವ ಈ ಸಂಕಲನದಲ್ಲಿ ಪ್ರತಿ ಹಂತದಲ್ಲೂ ಪ್ರತಿ ವಿನ್ಯಾಸದಲ್ಲೂ ಉದುರಿದ ಎಲೆಗಳ ಮರ್ಮರ ಸದ್ದಿದೆ. 'ಶಿಶಿರ' ಬಂದ ಹೊತ್ತಿನಲ್ಲಿ ಎಲೆ ಉದುರುವ ಪ್ರಾಕೃತಿಕ ಧರ್ಮ ಒಂದು ನೆಲೆಯಿಂದ ಅನಾವರಣಕ್ಕೆ ಸಂಬಂಧಿಸಿದ್ದು. ಪ್ರಕೃತಿ ತಾನು ಹೊದ್ದ ಹಸಿರಿನ ಛಾದರವನ್ನು ಬದಲಿಸುವ ಈ ಪರಿ ಬೆತ್ತಲಾಗುವ ಕ್ರಿಯೆ – ನಿರ್ಬಂಧದ ಮಹಾ ರೂಪವೇ ಆದುದು. ಅದರೊಂದಿಗೆ ಇನ್ನೂ ಮಾಗಿರದ, ಹಣ್ಣಾಗದ, ಸಕ್ರಿಯವಾದ ಎಲೆಗಳೂ ಉದುರುವ ಒತ್ತಡಕ್ಕೆ ಸಿಲುಕಿ, ಬೀಳುವುದು ಪ್ರಾಕೃತಿಕ ನಿಯಮಗಳನ್ನು ಮೀರಿದ ಸಂಗತಿ. ಈ ಎರಡೂ ನೆಲೆಗಳ ಎಲೆಯುದುರುವ ಪ್ರಕ್ರಿಯೆ ಈ ಸಂಕಲನದ ಎಲ್ಲಾ ಕವಿತೆಗಳಲ್ಲಿದೆ.

ಈ ಭಾವ ಭಾವುಕತೆಯಿಂದ ನಿರ್ಮಾಣವಾದುದಲ್ಲ. ಈ ಭಾವದ ಮೂಲಶಿಲ್ಪ ಅಪ್ಪಟ ವೈಚಾರಿಕತೆಯದು.

'ಮನುಷ್ಯ ಮನುಷ್ಯರ ಮಧ್ಯೆ
ನನಗೆ ಬೇಕಿರುವುದು ದೊರೆಯುತ್ತಿದೆ...
...ನನಗಿಂತ ಮುಂಚೆ ಸೌಂದರ್ಯ ಹರಡುತ್ತಾ ತಾಗಿರುತ್ತದೆ.' ಇದು ಪುರುಷನ ಸಾತತ್ಯವನ್ನು ಅರ್ಥೈಸಿಕೊಂಡೂ ಪ್ರಯತ್ನದ ಅಹಮಿಕೆಯನ್ನು ನಿರಾಕರಿಸಿದಂತಹದು.

ಮೆಹಜಬೀನ್‌ರ ಕವಿತೆಗಳ ಎರಡನೇ ಪ್ರಕಾರದ ಅನಾವರಣ ಸಾಮಾಜಿಕ ಬದುಕಿನ ಕ್ರೂರತೆಯನ್ನು, ಹೋರಾಟದ ಹಾದಿಯ ದುಸ್ತರತೆಯನ್ನು, ಆ ಎರಡೂ ಇದ್ದೂ ಪ್ರವಹಿಸುವ ಅನನ್ಯ ಜೀವನ ಪ್ರೀತಿಯನ್ನು ಪ್ರಕಟಪಡಿಸುತ್ತದೆ. ಈ ಕವಿತೆಗಳಲ್ಲಿ ಪ್ರೇಮವೆಂದರೆ ಅದು ಪ್ರೇಮವೇನಲ್ಲ. ಇಲ್ಲಿ ಬರುವ ಆ 'ಅವನು' ಸ್ನೇಹಿತ, ಪ್ರಿಯತಮ, ಪ್ರಣಯಿ, ಅಸ್ತಿತ್ವವಾದಿ, ನಿರುದ್ವಿಗ್ನ, ಅವಾಸ್ತವಿಕ ಅಂತ್ಯ ಕಂಡ ವಾಸ್ತವವಾದಿ. ಅಪಾರ ಹೋರಾಟದ ಕೆಚ್ಚಿರಿಸಿಕೊಂಡು ವ್ಯವಸ್ಥೆಯ ವಿರುದ್ಧ ನಡಿಗೆಯಲ್ಲಿ ಎಲ್ಲೋ ದಾರಿಮಧ್ಯೆ 'ಉದುರುವಿಕೆ'ಯ ಒತ್ತಡದಲ್ಲಿ ಉದುರಿಹೋದ ಎಲೆ ಅದು. ಈ ಎಲ್ಲಾ ಚಿತ್ರಣವನ್ನು ಕಟ್ಟಿಕೊಡುವಾಗ ಇಲ್ಲಿನ ಕವಿತೆಗಳ ಆರ್ದ್ರಭಾವ, ನಿರ್ದುಷ್ಟ ಅಂತರವಿರಿಸಿಕೊಂಡ ಅನನ್ಯತೆ, ಏಕೀಕೃತ ಕ್ಷಣಗಳ ತನ್ಮಯತೆ ವಿಶಿಷ್ಟ ಎನ್ನಿಸಿಬಿಡುತ್ತದೆ.

'ಒಬ್ಬನೇ ಬಾರೆಂದರೆ ವಸಂತನನ್ನು ಜೊತೆ ತರುತ್ತಾನೆ' ಎಂದೇ ಆರೋಪಿಸಲ್ಪಡುವ (!) ಆತ ಈಕೆಯ ಕವಿ ಸಮಯದಲ್ಲಿ ಮುತ್ತಿಕ್ಕಿ ಚಂಚಲಗೊಳಿಸಬಲ್ಲ.

'ಅವನ ಹೆಜ್ಜೆ ಸದ್ದಿನಲಿ
ಛಂದಸ್ಸು ಹುಡುಕುತ್ತಾ
ನಾನು ತನ್ಮಯಳಾಗಿ ಕಣ್ಮುಚ್ಚಿಕೊಳ್ಳುತ್ತೇನೆ'

ಎಂದು ಕಳೆದುಹೋಗುವ ಭಾವ, ಆ ಪರವಶತೆಯಲ್ಲಿ ಸೂರೆಗೊಂಡರೂ ಅದೊಂದು ಒಪ್ಪಿತ ಸಮಕ್ಷಮ ಎಂದೇ ಪ್ರತಿಪಾದಿಸುತ್ತದೆ. ಸ್ತ್ರೀಯೊಬ್ಬಳು ಈ ತೆರನಾದ ಪ್ರಣಯವನ್ನು, ಅದರ ಉತ್ಕಂಠತೆಯನ್ನು ಯಾವುದೇ ಶೃಂಗಾರವಿಲ್ಲದೆ ಬರೆದುಕೊಂಡ ಈ ಆಖ್ಯಾನ ಒಂದು ಕ್ಷಣ ದಂಗುಬಡಿಸುತ್ತದೆ. ಇದಕ್ಕೂ ಮಿಗಿಲಾಗಿ ಅಗ್ನಿ, ಆಕಾಶ, ಭೂಮಿ, ಸಪ್ತ ಸಮುದ್ರ, ಋತು, ಪಂಚಭೂತಗಳ ಸಾಕ್ಷಿಯಾಗಿ ಆ ಮರದ ಕೆಳಗೆ ನಾವು ಸೇರಿ ಮಲಗಿದ್ದೆವು ಎಂದು ಶ್ರುತಪಡಿಸುವ ಕಾವ್ಯ ಸಂದರ್ಭ ಸ್ತ್ರೀತನದ ಎಲ್ಲಾ ಅಂತಃಸತ್ವವನ್ನು ಒರೆಗೆ ಹಚ್ಚಿ ಬಂದಂತಹದು.

ಇದನ್ನು ರೂಢಿಗತ ಪರಿಭಾಷೆಯಲ್ಲಿ ಪ್ರಣಯ ಎನ್ನಲಾಗದು ಅಥವಾ ಒರಟಾಗಿ ಹಾದರವೆನ್ನಲಾಗದು. ಏಕೆಂದರೆ, ಕಾವ್ಯದ ನಿರ್ಲಿಪ್ತತೆಯೇ ಓದುಗನಿಂದ ಯಾವುದೇ ಪ್ರತಿಕ್ರಿಯೆಯನ್ನು ಸ್ವೀಕರಿಸಲು ನಿರಾಕರಿಸಿ ಬಿಡುತ್ತದೆ.

ಈ ಪ್ರಣಯ – 'ಕದ ತೆರೆದು ನಿನ್ನ ಹಣೆಯ ಮೇಲಿನ
ಹೋರಾಟಕ್ಕಂಟಿದ ಬೆವರ –
ಸೀರೆ ಸೆರಗಿನಿಂದೊರೆಸಿದ ನೆನಪು'ಗಳೊಂದಿಗೆ
ಸಮ್ಮಿಲಿತವಾದದ್ದು.

ಈ ಪ್ರೇಮ ಪದ್ಯಗಳಲ್ಲಿ ಪ್ರಣಯಸಂಭವ ನಿಜಕ್ಕೂ ಸ್ಫೋಟಗೊಳ್ಳುವುದು ಈ ಇಂತಹ ಸಾಲುಗಳಲ್ಲಿ.

'ನಾನು ಮಸೀದಿ ಅವನು ಮಂದಿರ
ನಮಗೊಬ್ಬ ಯೇಸು ಪ್ರಭು ಹುಟ್ಟಿದ.
ಅಯೋಧ್ಯೆ ನಮಗೆಂದೂ ಸಮಸ್ಯೆಯಾಗಲಿಲ್ಲ.
ನಮಗೆ ಸಮಸ್ಯೆಯಾಗದಿರುವುದೇ
ಅವರಿಗೆ ಸಮಸ್ಯೆ' (ಒಂದು ಹಚ್ಚಹಸಿರು ಜೀವನ)

ಮಸೀದಿ, ಮಂದಿರಗಳ ಈ ಮಿಲನವನ್ನು, ಸಮ್ಮಿಲನವನ್ನು ಸಹಜ ಪ್ರಣಯದಲ್ಲಿ ಪರಿಭಾವಿಸಲಾದೀತೇ ? ಅರ್ಥಸ್ಪಷ್ಟತೆಯ ಈ ಕವಿತೆಯ ಸಾಲುಗಳೇ ವರ್ತಮಾನಕ್ಕೆ ಈ ಪ್ರೇಮ ಒಡ್ಡಿದ ಸವಾಲನ್ನು, ಸಾಮಾಜಿಕ ಹುಂಬತನದ ವಿಡಂಬನೆಯನ್ನು ನಿರ್ಲಿಪ್ತ ವ್ಯಂಗ್ಯದಲ್ಲಿ ಸಾದರಪಡಿಸುತ್ತದೆ.

ಈ ಇಂತಹ ಸಾಧ್ಯತೆಗಳನ್ನು ಸೃಷ್ಟಿಸಿದ ಆ ಸಂಗಾತಿಯೋ ಹೋರಾಟದ ಹಾದಿಯಲ್ಲಿ ಪ್ರಭುತ್ವದ ಗಾಳಿಯ ಬಿರುಸಿಗೆ ಸಿಕ್ಕು ಉದುರಿಹೋದ ಎಲೆ

'ಗೆಳೆಯಾ
ಹಣೆಯ ಮೇಲೊಂದು
ಪ್ರೀತಿಯ ಮುತ್ತೂ ಇಲ್ಲದೇ
ಹಾಗೇ ಹೊರಟು ಹೋದೆಯಾ ?' (Elegy)

ಎಂಬ ಈ ಸಾಲುಗಳಲ್ಲಿ ಮಡುಗಟ್ಟಿದ ವಿರಹ, ವಿಷಾದ, ವಿಷಣ್ಣತೆ ಯಾವ ಬಗೆಯದು ? ಅದು ಪರಿಪೂರ್ಣ ಸ್ತ್ರೀ ಮಾತ್ರ ಪರಿಭಾಷಿಸಬಲ್ಲದಲ್ಲವೇ ? 'ಸಾವ ಕೆಡುವ ಗಂಡನ ಒಲ್ಲದೇ, ರೂಹಿಲ್ಲದ, ಕೇಡಿಲ್ಲದ ಚೆನ್ನ ಮಲ್ಲಿಕಾರ್ಜುನಗೊಲಿದ' ಅಕ್ಕನ ಪ್ರಜ್ಞೆಯ ಕನ್ನಡ ಮನಸ್ಸಿನಲ್ಲಿ ಈ ಕವಿತೆಗಳು ಮೂಡಿಸಬಹುದಾದ ಸಂಚಲನ ಎಂತಹದು ? ಇದನ್ನು ಸ್ಥಾಪಕವಾಗಿ ಹೇಳಲಾಗುವುದಿಲ್ಲ. ಆದರೆ ಸಂಚಲನವನ್ನು ಮರೆಮಾಚಲೂ ಸಾಧ್ಯವಾಗದು ಎನ್ನಬಹುದು.

ಮೆಹಜಬೀನ್ ಎಂಬ ಮುಸ್ಲಿಂ ಬರಹಗಾರ್ತಿ ಬರೆದ ಈ ಸಾಲುಗಳನ್ನು ಆಕೆ ಮುಸ್ಲಿಂ ಸಂಪ್ರದಾಯದ, ಅನುಭವ ಪರಂಪರೆಯಿಂದ ಬಂದವಳು ಎಂಬ ಹಿನ್ನೆಲೆಯಲ್ಲಿ ಮತ್ತೊಮ್ಮೆ ಗಮನಿಸಿದರೆ, ಕವಿತೆಯ ವಸ್ತು, ವಿನ್ಯಾಸ, ಭಾವಗಳಲ್ಲಿ ಇನ್ನೊಂದು ಬಗೆಯದೇ ಆದ ಗಂಭೀರತೆ ಕಂಡುಬರುತ್ತದೆ. ಅದಕ್ಕೆಂದೇ ಇದನ್ನು ಅನನ್ಯ ಕವಿತ್ವ ಎಂದು ಕರೆದದ್ದು.

ಇಂತಹ ಅನನ್ಯ ದನಿಯನ್ನು ಕನ್ನಡಕ್ಕೆ ಚಿದಾನಂದ ಸಾಲಿ ಪರಿಚಯಿಸಿದ್ದಾರೆ. ಸ್ತ್ರೀತನ, ಸ್ತ್ರೀವಾದ ಹೊಸ ವ್ಯಾಖ್ಯಾನ ಬೇಡುತ್ತಿರುವ ಈ ಹೊತ್ತಿನಲ್ಲಿ ಈ ಸಂಕಲನ ಪ್ರಕಟವಾಗಿದೆ. ಇದು ನಮ್ಮ ಕನ್ನಡ ಮನಸ್ಸಿನಲ್ಲಿ ಮೂಡಿಸುವ ವೈಚಾರಿಕ, ಭಾವುಕ ಸಂಚಲನದ ಬಗ್ಗೆ ನಾನೂ ಕುತೂಹಲ ಭರಿತನಾಗಿದ್ದೇನೆ, ಅಷ್ಟೇ ಭರವಸೆಯನ್ನು ಹೊಂದಿದ್ದೇನೆ.

ಆನಂದ್ ಋಗ್ವೇದಿ
ನಂ. ೭೮೬/೨ಬಿ, 'ದುರ್ಗಾಂಬಿಕಾ ನಿಲಯ', ಮಹಡಿ,
೧ನೇ ಮೇನ್, ೪ನೇ ಕ್ರಾಸ್, ಭಗತ್‌ಸಿಂಗ್ ನಗರ, ದಾವಣಗೆರೆ -೨

---

೨೩ನೇ ಪುಟದಿಂದ (ರಂಗ ನಿರ್ದೇಶಕ)

ಕೆಲಸ ಮಾಡುತ್ತಿದ್ದರು ಎಂದು ಸಾಮಗ ರಾಮಸ್ವಾಮಿಯವರು ಸುವರ್ಣ ಮಹೋತ್ಸವ ಸಂಚಿಕೆಯಲ್ಲಿ (೧೯೯೮) ಹೇಳುತ್ತಾರೆ.

ಎಚ್.ಜಿ. ಶ್ರೀಪತಿ, ವಿ. ಎ. ಗೋಪಾಲಕೃಷ್ಣ, ಬಿ. ಆರ್. ರಾಘವೇಂದ್ರಾಚಾರ್, ಕಲ್ಯಾಣಿ ಶ್ರೀಪಾದಾಚಾರ್, ಸೀತಾರಾಮ ಜೋಯಿಸ್, ಇವರೊಂದಿಗೆ ಎನ್. ಆರ್. ಮಾಸೂರರು ೧೯೪೮ರಲ್ಲಿ ಉದಯ ಕಲಾವಿದರು ಸಂಸ್ಥೆ ಸ್ಥಾಪಿಸಿದರು. ಪುರಪ್ರೌಢಶಾಲಾ ಮುಖ್ಯೋಪಾಧ್ಯಾಯರಾಗಿದ್ದ ಎಚ್. ವಿ. ವೆಂಕಟನಾರಣಪ್ಪನವರು ಸಂಸ್ಥೆಯ ಮೊದಲ ಅಧ್ಯಕ್ಷರಾಗಿದ್ದರು.

**ಎನ್. ಆರ್. ಮಾಸೂರರು ಅಭಿನಯಿಸಿದ ನಾಟಕಗಳು**

ಶ್ರೀರಂಗರ 'ಸಿರಿಪುರಂದರ', 'ಈಸಬೇಕು ಇದ್ದು ಜೈಸಬೇಕು', 'ಕೇಳು ಜನಮೇಜಯ', 'ಸಂಜೀವಿನಿ', 'ರಂಗಭಾರತ', 'ಸ್ವರ್ಗಕ್ಕೆ ಮೂರೇ ಬಾಗಿಲು', 'ಹುಟ್ಟಿದ್ದು ಹೊಲೆಯೂರು', 'ಯಾರಿಗೆ ಮಾಡ್ತಿ ಮ್ಯಾಂ', ಪ್ರಚಾರ ನಾಟಕಗಳಾದ 'ಸೌಭಾಗ್ಯವತೀ ಭವ', 'ಜಾಗೃತ ಭಾರತಿ', 'ನಮ್ಮೂರ ತ್ಯಾಗಿಗಳು', 'ನಮ್ಮ ಹಳ್ಳಿ,' ಬಿ.ಸಿ. ರಾಮಚಂದ್ರ ಶರ್ಮರು ಬರೆದ ನಾಟಕ 'ಬಾಳಸಂಜೆ', ಗಿರೀಶ್ ಕಾರ್ನಾಡರು ಬರೆದ ನಾಟಕ 'ಹಯವದನ', ರಚನೆ ಯಾರದ್ದೆಂದು ಗೊತ್ತಿಲ್ಲದ ನಾಟಕ 'ದಹನ ಚಿತ್ರ' ಮುಂತಾದ ನಾಟಕಗಳನ್ನು ಎನ್. ಆರ್. ಮಾಸೂರರು ನಿರ್ದೇಶಿಸಿ ನಟಿಸಿದ್ದಾರೆ. ಈ ಮೇಲಿನ ನಾಟಕಗಳಲ್ಲದೆ 'ಕತ್ತಲೆ-ಬೆಳಕು', 'ಭಾರತ ಭಾಗ್ಯ ವಿಧಾತ', 'ಶೋಕಚಕ್ರ', 'ಏನ ಬೇಡಲಿ ನಿನ್ನ ಬಳಿಗೆ ಬಂದು', 'ಪ್ರಪಂಚ ಪಾಣಿಪತ್ತು', 'ನೆನಪಿನ ನೇಣು', 'ಜೀವನ ಜೋಕಾಲಿ', ದಾಶರಥಿ ದೀಕ್ಷಿತರ 'ಅಳಿಯ ದೇವರು' (ಉದಯ ಕಲಾವಿದರು ತಂಡದ ಮೊದಲ ನಾಟಕ ಪ್ರದರ್ಶನ) ಮುಂತಾದ ನಾಟಕಗಳನ್ನು ನಿರ್ದೇಶಿಸಿದ್ದಾರೆ.

ಎನ್. ಆರ್. ಮಾಸೂರರು ಉನ್ನತ ಶಿಕ್ಷಣ ಪಡೆದವರಲ್ಲದಿದ್ದರೂ ಉನ್ನತ ಶಿಕ್ಷಣ ಪಡೆದ ನಟ ವರ್ಗವನ್ನು ಸಂಭಾಳಿಸಿದ್ದು ವಿಶೇಷವೆನಿಸುತ್ತದೆ, ನಾಟಕ ಕಲೆಯಲ್ಲಿ, ಅವರ ಸಾಮರ್ಥ್ಯವನ್ನು ತೋರುತ್ತದೆ.

ಎನ್. ಆರ್. ಮಾಸೂರರನ್ನು ನಿರ್ದೇಶಕರಾಗಿ ಬಲ್ಲವರು, ನಾಟಕದ ಮಾತಿನ ಏರಿಳಿತಗಳ ಮಹತ್ವ ಮತ್ತು ಅದರ ಕಲಿಕೆ, ಶ್ರೀರಂಗರು ಬರೆದ ನಾಟಕಗಳಲ್ಲಿ ಉತ್ತರ ಕರ್ನಾಟಕದ ಮಾತಿನ ಲಯ, ಮಾತಿನ ಸ್ಪಷ್ಟತೆ, ಖಚಿತವಾದ ರಂಗಚಲನೆ, ಬೆಳಕು, ರಂಗಪರಿಕರ, ವೇಷ ಭೂಷಣಗಳಲ್ಲಿ ಶಿಸ್ತು ಮುಂತಾದವುಗಳ ಬಗೆಗೆ ಹೇಳದೆ ಇರುವುದಿಲ್ಲ. ಅಂದು ಅವರು ನಾಟಕ ಕಲಿಸುವಾಗ ಬಯ್ಯಿಸಿಕೊಂಡವರು, ಹೊಡೆಸಿಕೊಂಡವರು ಇಂದು ಅವುಗಳನ್ನು ಆಶೀರ್ವಾದವೆಂದು ಪರಿಗಣಿಸುತ್ತಾರೆ, ಅವರ ಒಡನಾಟದ ಅನುಭವಗಳನ್ನು ಅಭಿಮಾನದಿಂದ ನೆನೆಯುತ್ತಾರೆ. ಮಾಸೂರರು ಬಯ್ಯಿದ್ದರೆ, ಹೊಡೆದಿದ್ದರೆ ಅದು ನಾಟಕ ಪ್ರದರ್ಶನದ ಶ್ರೇಷ್ಠತೆಗಾಗಿ ಮಾತ್ರ ಎಂದು ಅರಿತಿದ್ದಾರೆ. ಮಾಸೂರರಿಂದ ಪಡೆದ ರಂಗಶಿಕ್ಷಣದಿಂದ ತಾವು ಬದುಕಿನಲ್ಲಿ ಬೆಳೆಯಲು ಅನುಕೂಲವಾಯಿತೆಂದು ಅವರನ್ನು ಸ್ಮರಿಸುತ್ತಾರೆ. ರಂಗನಿರ್ದೇಶಕನೊಬ್ಬ ಏರಿದ ಎತ್ತರವನ್ನು ಇವು ಸಾರುತ್ತವೆ.

ಬಂದಗದ್ದೆ ರಾಧಾಕೃಷ್ಣ
'ಪುಸ್ತಕ ಹೊಂಬಾಳೆ', ಕೆಳದಿ - ೫೭೭ ೪೦೧
ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ




## ಮಧ್ಯಪ್ರಾಚ್ಯ : ಚಕ್ರಾಧಿಪತ್ಯ ಸ್ಥಾಪಿಸಲು ಅಮೆರಿಕಾದ ಸಂಚು

ಲೆಬನಾನಿನಲ್ಲಿ ಹಿಜ್ಬೊಲ್ಲ, ಪ್ಯಾಲಸ್ಟೈನಿನಲ್ಲಿ ಹಮಾಸ್ ಸಂಘಟನೆಯನ್ನು ನಿರ್ನಾಮಗೊಳಿಸುವುದು ಇಸ್ರೇಲಿನ ಗುರಿ. ಅಷ್ಟಾದರೆ ಆಕ್ರಮಿತ ಪ್ರದೇಶಗಳನ್ನು ಕಬಳಿಸಲು ಇಸ್ರೇಲಿಗೆ ದಾರಿ ಸುಗಮ. ಅದಕ್ಕಾಗಿಯೇ ಎರಡರ ಮೇಲೂ ಎಡೆಬಿಡದ ದಾಳಿ, ನೂರಾರು ಮಕ್ಕಳು, ಸಾವಿರಾರು ನಾಗರಿಕರ ಸಾವು, ಲಕ್ಷಾಂತರ ಜನ ನಿರಾಶ್ರಿತರು, ನಗರಗಳ ಧೂಳೀಪಟ. ಇಸ್ರೇಲಿನ ಈ ಕ್ರಮಕ್ಕೆ ಮಧ್ಯಪ್ರಾಚ್ಯರ ಮೇಲೆ ಏಕಸ್ವಾಮ್ಯ ಸ್ಥಾಪಿಸುವ ಹೆಬ್ಬಯಕೆ ಹೊಂದಿರುವ ಅಮೆರಿಕಾದ ಪೂರ್ಣ ಬೆಂಬಲ. ಇಬ್ಬರು ಮೂವರು ಇಸ್ರೇಲಿ ಸೈನಿಕರ ಬಂಧನ ಒಂದು ನೆಪ ಮಾತ್ರ. ಇಸ್ರೇಲಿನ ವಿಸ್ತರಣಾಕಾಂಕ್ಷೆಗೆ ಬಲಿಯಾಗಿ ಹತ್ತು ಸಾವಿರಕ್ಕೂ ಹೆಚ್ಚು ಮಂದಿ ಪ್ಯಾಲಸ್ತೀನಿಯನ್ನರು, ನೂರಾರು ಲೆಬನಾನಿನ ನಾಗರಿಕರು ಇಸ್ರೇಲಿ ಕಾರಾಗೃಹಗಳಲ್ಲಿ ಕೊಳೆಯುತ್ತಿದ್ದಾರೆ. ಹಿಜ್ಬೊಲ್ಲಾ ಮತ್ತು ಹಮಾಸ್ ಸಂಘಟನೆಗಳನ್ನು ನಾಶಗೊಳಿಸಿದರೆ ಪ್ಯಾಲಸ್ಟೈನ್ ಮತ್ತು ಲೆಬನಾನ್‌ಗಳ ಮೇಲೆ ನಿಯಂತ್ರಣ ಸಾಧಿಸಿದಂತೆ. ಅದಕ್ಕೇ ಪ್ಯಾಲಸ್ಟೈನಿನಲ್ಲಿ ಚುನಾಯಿತ ಹಮಾಸ್ ಸರಕಾರವನ್ನು ಕಿತ್ತುಹಾಕಲು, ಲೆಬನಾನಿನ ಸರಕಾರದ ಅಂಗಪಕ್ಷವಾಗಿರುವ ಹಿಜ್ಬೊಲ್ಲ ಸಂಘಟನೆಯನ್ನು ಮುಗಿಸಿಬಿಡಲು ಪಟ್ಟುಬಿಡದ ಪ್ರಯತ್ನ.

ಇಸ್ರೇಲಿನ ಈ ಗುರಿ ಸಾಧನೆಯಾದರೆ ಮಧ್ಯಪ್ರಾಚ್ಯದಲ್ಲಿ ಅಮೆರಿಕಾದ ತೈಲ ಸಾಮ್ರಾಜ್ಯದ ಸ್ಥಾಪನೆಯ ಉದ್ದೇಶ ಸಾಕಷ್ಟು ಪ್ರಗತಿ ಸಾಧಿಸಿದಂತೆ. ಲೆಬನಾನಿನ ಮೇಲೆ ಇಸ್ರೇಲಿ-ಅಮೆರಿಕನ್ ದಾಳಿ ಇಂದು ನಿನ್ನೆಯದಲ್ಲ, ಸುಮಾರು ಅರ್ಧ ಶತಮಾನದಷ್ಟು ಹಳೆಯದು. ೧೯೬೮ರಲ್ಲಿಯೇ ಅವು ದಾಳಿ ನಡೆಸಿದ್ದವು. ೧೯೭೮ ಮತ್ತು ೧೯೮೨ರಲ್ಲಿ ಇಸ್ರೇಲ್ ದುರಾಕ್ರಮಣ ನಡೆಸಿ ಲೆಬನಾನಿನ ಸಾಕಷ್ಟು ಭೂಭಾಗವನ್ನು ವಶಕ್ಕೆ ತೆಗೆದುಕೊಂಡಿತ್ತು. ಈ ಪ್ರದೇಶಗಳಿಂದ ಇಸ್ರೇಲಿಗಳು ಹಿಮ್ಮೆಟ್ಟುವಂತೆ ಮಾಡಿದ್ದು ಹಿಜ್ಬೊಲ್ಲ ಸಂಘಟನೆ. ಇದು ಇಸ್ಲಾಮಿಕ್ ಸಂಘಟನೆಯಾಗಿದ್ದರೂ ಇಸ್ರೇಲ್ ಪ್ರಚಾರ ಮಾಡಿರುವ ಹಾಗೆ ಭಯೋತ್ಪಾದಕರ ತಂಡವಲ್ಲ. ಲೆಬನಾನಿನ ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸಿರುವ ಇದು ಸರಕಾರದಲ್ಲೂ ಭಾಗಿ. ಅದರಿಂದಲೇ ಇಸ್ರೇಲ್ ನಡೆಸುತ್ತಿರುವ ಎಲ್ಲ ಕ್ರೂರ ಬಾಂಬು ದಾಳಿಗಳಿಗೂ ಅಮೆರಿಕಾದ ಮೌನ ಸಮ್ಮತಿ. ಅವರ ದೃಷ್ಟಿಯಲ್ಲಿ ಇಸ್ರೇಲಿನ ದೌರ್ಜನ್ಯ ಆತ್ಮರಕ್ಷಣೆಗಾಗಿ ಕೈಗೊಂಡಿರುವ ಪ್ರತೀಕಾರ ಕ್ರಮ, ಸ್ವಲ್ಪ ಮಿತಿ ಮೀರಿದೆ ಅಷ್ಟೇ. ಅದರಿಂದಲೇ ವಿಶ್ವಸಂಸ್ಥೆಯ ಕರೆಯನ್ನು ಲೆಕ್ಕಿಸದೆ ದಾಳಿ ಮುಂದುವರಿಸುತ್ತಿರುವುದಕ್ಕೆ ಮಾಫಿ. ಈ ವಿಚಾರದಲ್ಲಿ ಅಂತಾರಾಷ್ಟ್ರೀಯ ಪ್ರತಿಕ್ರಿಯೆ ಕೂಡ ಮೃದುವಾಗಿರುವುದೀಗ ವಿಷಾದಕರ. ಜನಸಾಮಾನ್ಯರ ಸಾವು ನೋವುಗಳಿಗೆ ಸ್ಪಂದಿಸದೆ ನಾಲ್ಕಾರು ಮಂದಿ ವಿಶ್ವಸಂಸ್ಥೆಯ ಸಿಬ್ಬಂದಿಯ ಸಾವಿಗೆ ರಷ್ಯಾ, ಚೀಣಾ ಮತ್ತು ಭಾರತದಂಥ ದೇಶಗಳು ಪ್ರತಿಕ್ರಿಯಿಸಿರುವುದು ಶೋಚನೀಯ. ಇದು ಇಸ್ರೇಲಿ-ಅಮೆರಿಕನ್ ಕೂಟ ಎಷ್ಟು ಪ್ರಭಾವಶಾಲಿ ಎನ್ನುವುದರ ಸೂಚಕ.

ಮಧ್ಯಪ್ರಾಚ್ಯದಲ್ಲಿ ಈ ಬೆಳವಣಿಗೆ ಆಕಸ್ಮಿಕವಾದ್ದೇನಲ್ಲ. ಅದು ಅಮೆರಿಕಾದ 'ಹೊಸ ಮಧ್ಯಪ್ರಾಚ್ಯ' ರೂಪಿಸುವ ಬೃಹತ್ ಯೋಜನೆಯ ಒಂದು ಭಾಗ. ೧೯೪೮ರಲ್ಲಿ ಇಸ್ರೇಲ್ ಅಸ್ತಿತ್ವಕ್ಕೆ ಬಂದಾಗಿನಿಂದಲೂ ವಿಸ್ತರಣಾವಾದಿ ಎರಡು ಯುದ್ಧಗಳನ್ನು ನಡೆಸಿ ಸಾಕಷ್ಟು ಅರಬ್ ಪ್ರದೇಶಗಳನ್ನು ಆಕ್ರಮಿಸಿಕೊಂಡಿತು. ಅರಬ್ ರಾಷ್ಟ್ರಗಳ ಐಕ್ಯತೆಯನ್ನು ಮುರಿಯಲು ಅಮೆರಿಕಾ ಇದನ್ನು ದಾಳವಾಗಿ ಉಪಯೋಗಿಸಿಕೊಂಡಿತು. ಈ ಭಾಗದ ಪ್ರಮುಖ ದೇಶಗಳನ್ನು ತನಗೆ ಅನುಕೂಲವಾಗಿರುವಂತೆ ಮಾಡಿಕೊಳ್ಳುವುದರಲ್ಲಿ ಅಮೆರಿಕಾ ಸಾಕಷ್ಟು ಯಶಸ್ಸು ಸಾಧಿಸಿದೆ. ಸೌದಿ ಅರೇಬಿಯಾ, ಈಜಿಪ್ಟ್, ಜೋರ್ಡಾನ್, ಲಿಬಿಯಾ ಹಾಗೂ ಇತರ ಸಣ್ಣ ಪುಟ್ಟ ದೇಶಗಳಿಗೆ ಆಮಿಷವೊಡ್ಡಿ ಅಮೆರಿಕಾ ಈ ದೇಶಗಳು ಇಸ್ರೇಲಿನ ಅಸ್ತಿತ್ವವನ್ನು ಮಾನ್ಯ ಮಾಡುವಂತೆ ಮಾಡಿದ್ದಲ್ಲದೆ, ತನಗೆ ಅನುಕೂಲವಾಗುವಂತೆ ನಡೆದುಕೊಳ್ಳುವಂತೆಯೂ ಮಾಡಿದೆ. ಇನ್ನು ಉಳಿದದ್ದು ಇರಾಕ್, ಸಿರಿಯಾ ಮತ್ತು ಇರಾನ್. ದುರಾಕ್ರಮಣ ನಡೆಸಿ ಇರಾಕನ್ನು ಮುಗಿಸಿದ್ದಾಯಿತು. ಸಿರಿಯಾ ಮತ್ತು ಇರಾನ್‌ಗಳನ್ನು ಹತೋಟಿಗೆ ತರಲು ಎಲ್ಲ ಬಗೆಯ ತಂತ್ರಗಳನ್ನು ಅಮೆರಿಕಾ ಮಾಡುತ್ತಿದೆ. ಸಿರಿಯಾ ಇರಾಕಿನ ಷಿಯಾ ಪಂಥದ ಪ್ರತಿಭಟನೆಗೆ ಕುಮ್ಮಕ್ಕು ನೀಡುತ್ತಿದೆ ಎಂದು ಅಮೆರಿಕಾ ಆಪಾದಿಸುತ್ತಿದೆಯಾದರೆ, ಇಸ್ರೇಲ್ ಸಿರಿಯಾ ಲೆಬನಾನಿನಲ್ಲಿ ಕಿತಾಪತಿ ಮಾಡುತ್ತಿದೆ ಎಂದು ಹೇಳುತ್ತಿದೆ. ಸಿರಿಯಾದ ಮೇಲೆ ದಾಳಿ ನಡೆಸಲು ಈ ಎರಡೂ ದೇಶಗಳು ಹದ್ದುಕಾದಂತೆ ಕಾಯುತ್ತಿವೆ. ಇನ್ನು ಇರಾನಿನ ಮೇಲೆ ಅಮೆರಿಕಾ ಉರುಳು ಬಿಗಿಯಾಗುತ್ತಿದೆ. ಇರಾನಿನ ನ್ಯೂಕ್ಲಿಯರ್ ಕಾರ್ಯಕ್ರಮವನ್ನೇ ದೊಡ್ಡದು ಮಾಡಿ, ಅದರ ಮೇಲೆ ಹರಿಹಾಯಲು ಅಮೆರಿಕಾ ಸಿದ್ಧತೆ ನಡೆಸಿದೆ. ರಂಗಸಜ್ಜಿಕೆಯೆಲ್ಲ ಇರಾಕಿನ ಮಾದರಿಯಲ್ಲೇ. ಅಣ್ವಸ್ತ್ರ ವಿಸ್ತರಣಾ ನಿರೋಧ ಒಪ್ಪಂದಕ್ಕೆ ಸಹಿ ಹಾಕಿರುವ ಇರಾನ್ ಅದರ ಷರತ್ತುಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದಾಗ್ಯೂ ನ್ಯೂಕ್ಲಿಯರ್ ಅಸ್ತ್ರ ತಯಾರಿಸಲು ಹೊರಟಿದೆ ಎಂಬ ಆಪಾದನೆ. ಇದು ಈಗಾಗಲೇ ಎಲ್ಲ ಹಂತಗಳನ್ನೂ ದಾಟಿ ವಿಶ್ವಸಂಸ್ಥೆಯಿಂದ ಇರಾನಿನ ಮೇಲೆ ಆರ್ಥಿಕ ದಿಗ್ಬಂಧನ ಹೊರಿಸುವ ಘಟ್ಟ ತಲುಪಿದೆ. ಮುಂದಿನ ಹೆಜ್ಜೆ ಅಧ್ಯಕ್ಷ ಜಾರ್ಜ್ ಬುಷ್‌ನ ಮತಿ ಭ್ರಮಣೆಗೆ ಬಿಟ್ಟದ್ದಾಗಿರುತ್ತದೆ. ಯೂರೋಪಿನ ರಾಷ್ಟ್ರಗಳನ್ನು ಈ ದುಶ್ಚರ್ಯೆಯಲ್ಲಿ ಭಾಗಿಯಾಗಿ ಮಾಡಿ ಅಮೆರಿಕಾ ಇರಾನಿನ ಮೇಲೆ ಎಲ್ಲ ಬಗೆಯ ಒತ್ತಡ ತರುತ್ತಿದೆ. ಭಾರತ ಸರಕಾರವೂ ಕೂಡ ಈ ದೇಶಗಳ ಜೊತೆ ಕೈಗೂಡಿಸಿರುವುದು ಖಂಡನಾರ್ಹ. ಹೆಚ್ಚು ಕಡಿಮೆ ಏಕಾಂಗಿಯಾಗಿದ್ದರೂ ಇರಾನ್ ಧೈರ್ಯದಿಂದ ತತ್ವಬದ್ಧವಾದ ನಿಲುವನ್ನು ತಳೆದು, ತನ್ನ ಹಕ್ಕನ್ನು ಕಾಪಾಡಿಕೊಳ್ಳಲು ಒತ್ತಡಗಳನ್ನು ಎದುರಿಸುತ್ತಿರುವುದು ಪ್ರಶಂಸನೀಯ. ಅದಕ್ಕೆ ಜಗತ್ತಿನ ಎಲ್ಲ ಪ್ರಜಾಪ್ರಭುತ್ವ ಜನತೆಯ ಬೆಂಬಲವಿದೆ.

## ನ್ಯೂಕ್ಲಿಯರ್ ಸಹಯೋಗ ಒಪ್ಪಂದ – ನುಂಗಲಾಗದ ತುತ್ತು

ಕಳೆದ ವರ್ಷ ಜೂನ್ ೧೮ರಂದು, ಮತ್ತೆ ಈ ವರ್ಷ ಮಾರ್ಚ್ ೨ರಂದು ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಮತ್ತು ಭಾರತದ ಪ್ರಧಾನಿ ಮನಮೋಹನ್ ಸಹಿ ಹಾಕಿದ ನ್ಯೂಕ್ಲಿಯರ್ ಸಹಯೋಗ ಒಪ್ಪಂದ ರಾಜಕೀಯ ವಲಯಗಳಲ್ಲಿ, ವಿಜ್ಞಾನಿಗಳ ಸಮೂಹದಲ್ಲಿ ಸಾಕಷ್ಟು ಧೂಳೆಬ್ಬಿಸಿತು. ನ್ಯೂಕ್ಲಿಯರ್ ಶಕ್ತಿಯ ಕ್ಷೇತ್ರದಲ್ಲಷ್ಟೇ ಅಲ್ಲದೆ ವಿದೇಶಾಂಗ ನೀತಿ ಅನುಸರಣೆಯ ಕ್ಷೇತ್ರದಲ್ಲೂ ಈ ಒಪ್ಪಂದ ಭಾರತದ ಸ್ವಾತಂತ್ರ್ಯವನ್ನು ಮೊಟಕುಗೊಳಿಸುತ್ತದೆ ಎನ್ನುವುದು ಸಾರ್ವತ್ರಿಕ ಅಭಿಪ್ರಾಯವಾಗಿತ್ತು. ಪ್ರಧಾನಿ ಮನಮೋಹನ ಸಿಂಗ್ ಏನೇ ಸಮಜಾಯಿಷಿ ನೀಡಿದರೂ ಅದನ್ನು ಅಂಗೀಕರಿಸಲು ಯಾರಿಂದಲೂ ಸಾಧ್ಯವಿರಲಿಲ್ಲ. ಎಡಪಕ್ಷಗಳೂ ಸೇರಿದಂತೆ ಎಲ್ಲ ಪ್ರಜಾಪ್ರಭುತ್ವವಾದಿಗಳು, ವಿಚಾರವಂತರು, ವಿಜ್ಞಾನಿಗಳು ಒಪ್ಪಂದವನ್ನು ತೀವ್ರವಾಗಿ ವಿರೋಧಿಸಿದರು. ಅಮೆರಿಕಾದೊಂದಿಗೆ ಇಂಥ ಒಪ್ಪಂದ ಸೆರಗಿನಲ್ಲಿ ಬೆಂಕಿ ಕಟ್ಟಿಕೊಂಡಂತೆ ಎಂದು ಎಚ್ಚರಿಕೆ ನೀಡಲಾಯಿತು. ಪಾರ್ಲಿಮೆಂಟಿನಲ್ಲಿ ಈ ವಿಷಯದಲ್ಲಿ ಕೋಲಾಹಲವೇ ಉಂಟಾಯಿತು. ಆಚರಣೆಯಲ್ಲಿ ಭಾರತದ ವಿದೇಶಾಂಗ ನೀತಿಯ ಮೇಲೆ ಈ ಒಪ್ಪಂದ ಯಾವ ಪರಿಣಾಮ ಉಂಟುಮಾಡಿದೆ ಎನ್ನುವುದನ್ನು ನೋಡಿದ್ದೇವೆ. ಅದಕ್ಕೆ ಇರಾನಿನ ನ್ಯೂಕ್ಲಿಯರ್ ಕಾರ್ಯಕ್ರಮದ ವಿಚಾರದಲ್ಲಿ ಭಾರತ ಅಂತಾರಾಷ್ಟ್ರೀಯ ಪರಮಾಣುಶಕ್ತಿ ಏಜನ್ಸಿ ಸಭೆಯಲ್ಲಿ ಅಮೆರಿಕಾದ ಪರವಾಗಿ ಮತ ನೀಡಿದ ಉದಾಹರಣೆಯೊಂದೇ ಸಾಕು. ಈ ಒಂದು ವರ್ಷದ ಕಾಲಾವಧಿಯಲ್ಲಿ ಭಾರತ ಅಂತಾರಾಷ್ಟ್ರೀಯ ಘಟನೆಗಳ ಬಗ್ಗೆ ಅಮೆರಿಕಾದ ಮರ್ಜಿಯನ್ನೇ ಅನುಸರಿಸುತ್ತಾ ಬಂದಿದೆ. ಲೆಬನಾನಿನ ಮೇಲೆ ಇಸ್ರೇಲಿ ದಾಳಿಯ ವಿರೋಧವಾಗಿ ಭಾರತ ಚಕಾರವೆತ್ತದಿರುವುದು ಸೂಕ್ತ ಉದಾಹರಣೆ. ಅಮೆರಿಕಾದ ಒಲ್ಮೈಕೆ ಭಾರತವನ್ನು ಎಂಥ ಇಕ್ಕಟ್ಟಿಗೆ ಸಿಕ್ಕಿಸಿದೆ ಎನ್ನುವುದು ವೇದ್ಯವಾಗುತ್ತದೆ.

ಈಗ ಈ ನ್ಯೂಕ್ಲಿಯರ್ ಸಹಯೋಗ ಒಪ್ಪಂದ ಭಾರತಕ್ಕೆ ನುಂಗಲಾರದ ಬಿಸಿ ತುಪ್ಪವಾಗಿ ಪರಿಣಮಿಸುತ್ತಿದೆ. ಮೊದಲೇ ಕೆಟ್ಟ ಒಪ್ಪಂದ, ತಿರಸ್ಕಾರ ಯೋಗ್ಯ, ಇದರ ಮೇಲೆ ಅಮೆರಿಕಾದ ಶಾಸಕರು ಹೊಸ ಷರತ್ತುಗಳನ್ನು ಗಂಟಲಲ್ಲಿ ತುರುಕಲು ಹೊರಟಿದ್ದಾರೆ. ಒಪ್ಪಂದ ಅನುಷ್ಠಾನವಾಗಲು ಅಮೆರಿಕಾದ ಶಾಸಕಾಂಗದ ಎರಡೂ ಸದನಗಳ ಅಂಗೀಕಾರ ಅಗತ್ಯ. ಒಪ್ಪಂದದ ಮೂಲರೂಪವನ್ನೇ ಬದಲಿಸುವ ಷರತ್ತುಗಳನ್ನು ಅಮೆರಿಕಾದ ಶಾಸಕರು ವಿಧಿಸಿರುವುದು ಮನಮೋಹನ ಸಿಂಗ್ ಸರಕಾರಕ್ಕೇ ಇರುಸು ಮುರುಸಾಗಿದೆ. ಪಾರ್ಲಿಮೆಂಟಿನಲ್ಲಿ ಈ ಕುರಿತು ಪ್ರಧಾನಿ ನೀಡಿದ ಹೇಳಿಕೆ ಔಪಚಾರಿಕವಾಗಿತ್ತೇ ಹೊರತು ವಿಶ್ವಾಸಾರ್ಹವಾಗಿರಲಿಲ್ಲ. ಪಾರ್ಲಿಮೆಂಟಿನಲ್ಲಿ ಪೂರ್ಣ ಪ್ರಮಾಣದ ಚರ್ಚೆಗೆ, ಭಾರತ ಅನುಸರಿಸಬೇಕಾದ ಕ್ರಮ ಕುರಿತ ನಿರ್ಣಯದ ಅಂಗೀಕಾರಕ್ಕೆ ಎಡಪಕ್ಷಗಳು ಆಗ್ರಹಿಸಿವೆ. ಅದೇನೇ ಇರಲಿ, ನಮ್ಮ ದೇಶದ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನೇ ಮೊಟಕುಗೊಳಿಸುವ ಬುಷ್-ಮನಮೋಹನ್ ಸಿಂಗ್ ಒಪ್ಪಂದವನ್ನು ತಿರಸ್ಕರಿಸಬೇಕೆಂದು ಸರಕಾರದ ಮೇಲೆ ಒತ್ತಾಯ ತರುವುದು, ಚಳವಳಿ ನಡೆಸುವುದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ. ಅಧ್ಯಕ್ಷ ಜಾರ್ಜ್ ಬುಷ್ ಆಗಲಿ, ಅಮೆರಿಕಾದ ಶಾಸಕರಾಗಲಿ ನಂಬಿಕೆಗೆ ಅರ್ಹರಲ್ಲ. ತಮಗೆ ಬೇಕಾದ ಹಾಗೆ ಭಾರತದ ಮೇಲೆ ಒತ್ತಡ ಹೇರಲು ನೋಡುತ್ತಾರೆ. ಅಮೆರಿಕಾದ ಈ ತಂತ್ರ ಹೊಸದೇನಲ್ಲ. ಅಮೆರಿಕಾ ಕಾಂಗ್ರೆಸ್ಸಿನ ಷರತ್ತುಗಳನ್ನೇ ಆಧಾರವಾಗಿರಿಸಿಕೊಂಡು ಭಾರತ ಸರಕಾರ ಬುಷ್ ಜೊತೆ ಆಗಿರುವ ಒಪ್ಪಂದವನ್ನು ತಿರಸ್ಕರಿಸುವ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಬೇಕೆಂದು ಒತ್ತಾಯ ತರೋಣ.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ಮೂರನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



# ನೀರಿನ ಸದ್ಬಳಕೆ

ಡಾ|| ಜಿ. ಪುರುಷೋತ್ತಮ

**ನಾ**ನಿನ್ನೂ ಪುಟ್ಟ ಹುಡುಗ ಆಗ; ಪ್ರೈಮರಿ ಸ್ಕೂಲಿನಲ್ಲಿದ್ದಿರಬೇಕು. ನಮ್ಮೂರಿನ ಒಂದು ಕೋಣನ ಗಾಡಿ ಇತರೆ ಗಾಡಿಗಳಿಗಿಂತ ಭಿನ್ನ. ಆದ್ದರಿಂದ ಆ ಕಡೆಗೆ ಗಮನ ಹರಿದಿತ್ತು. ಅದೇನು ಏಕೆಂದು ಹಿರಿಯರಲ್ಲಿ ವಿಚಾರಣೆ. ಅದು ಮುನಿಸಿಪಾಲಿಟಿಯ ಗಾಡಿ, ಕಕ್ಕಸು ಗಾಡಿ. ಒಬ್ಬಾತ ಮನೆಮನೆಯಿಂದ ಹೊಲಸನ್ನು ತಂದು ಅದಕ್ಕೆ ಸುರಿದುಕೊಂಡು ಹೋಗುತ್ತಿದ್ದ. ಗಾಡಿಯನ್ನು ಕಂಡಾಗಲೆಲ್ಲ ಹೇಸಿಗೆ ಭಾವ. ಗಾಡಿಯಾತನ ಬಗ್ಗೆ ಅಯ್ಯೋ ಅನಿಸುತ್ತಿತ್ತು. ೧೯೭೬ರಲ್ಲಿ ನಾನು ಎಮ್ಮೆಸ್ಸಿ ಓದುತ್ತಿದ್ದೆ. ದೇವರಾಜ ಅರಸರ ಕಾಲ, ತಲೆಯ ಮೇಲೆ ಮಲ ಹೊರುವುದು, ಮನುಷ್ಯ ಇನ್ನೊಬ್ಬರ ಹೊಲಸನ್ನು ದುಡಿಮೆಗಾಗಿ ಹೊರುವುದನ್ನು ನಿಷೇಧಿಸಿದರು. ಆ ಶಾಸನದ ಬಗ್ಗೆ, ಅದನ್ನು ಮಾಡಿದವರ ಬಗ್ಗೆ ಗೌರವ ಭಾವ ಮೂಡಿತು.

ಹೇಸಿಗೆ ಎಂಬುದು ಸಹಜ. ಅದರ ಬಗ್ಗೆ ಅಸಹ್ಯತೆಯೂ ಸಹಜ. ನಿಜವೆಂದರೆ, ಈ ಕಾಯಕಗಳನ್ನು ಆದಷ್ಟೂ ದೂರವಿಟ್ಟದ್ದು ಅದನ್ನು ಬಹಿರ್ದೆಶೆ ಎನ್ನುತ್ತಿದ್ದುದುಂಟು. ಆದರೆ ನಮ್ಮ ಜನಸಂಖ್ಯೆ ಜಾಸ್ತಿಯಾಗಿ ಬಹಿರ್ದೆಶೆ ಈಗ ಅಂತರ್ದೆಶೆಯಾಗಬೇಕಿದೆ. ಈ ಅಂತರ್ದೆಶೆ ನೀರಿನ ಬಳಕೆಯನ್ನು ಕೆಡಿಸಿದೆ. ಚಿಕ್ಕ ಊರುಗಳಲ್ಲಿ ಮನೆಗಳನ್ನು ಕಟ್ಟುವಾಗ ಗುಂಡಿಗಳಲ್ಲಿ ಈ ಹೊಲಸು ಸೋಂಕದಂತೆ ಮಾಡುವುದರಿಂದ ಸದ್ಯಕ್ಕೆ ನೀರಿನ ಬಳಕೆ ಚೆನ್ನಾಗಿ ಆಗುತ್ತಿದೆ ಅನ್ನಬೇಕು. ಅಡಿಗೆಮನೆಯ ನೀರು, ಬಟ್ಟೆ ಒಗೆಯುವ ನೀರು, ಸ್ನಾನದ ಮನೆಯ ನೀರು, ಚರಂಡಿ ಸೇರಿ ಊರ ಹೊರಗೆ ಹೋಗಿ ನೆಲದಲ್ಲಿ ಇಂಗುತ್ತದೆ. ಚರಂಡಿ ಸೇರುವ ಮುನ್ನವೇ ಅಥವಾ ಚರಂಡಿಗಳು ಸರಿ ಇಲ್ಲದಿದ್ದರೆ ಕಲುಷಿತ ನೀರು ಸರಿಯಾಗಿ ಹರಿಯದೆಯೇ ನೆಲದೊಳಗೆ ಸೇರುವ ಸಂದರ್ಭಗಳು ಹೆಚ್ಚು. ಅನೇಕ ಸಲ ಸ್ನಾನದ ನೀರು, ಬಟ್ಟೆ ಒಗೆಯುವ ನೀರು ನೇರವಾಗಿ ಒಳಚರಂಡಿಗಳೊಳಗೆ ಹರಿಯುವಂತೆ ಮಾಡಿರುತ್ತಾರೆ. ಹಾಗಾಗಿ ನೀರಿನ ಬಳಕೆ ಅತ್ಯುತ್ತಮ.

ಚಿಕ್ಕ ಊರುಗಳಲ್ಲಿ ಎಲ್ಲವೂ ಸರಿಯೆಂದು ಹೇಳಲು ಆಗದಿದ್ದರೂ ನೀರು ಹೆಚ್ಚು ಇಂಗುತ್ತದೆಂದು ಹೇಳಬಹುದು. ಬಹಳ ಸಲ ನೀರನ್ನು ಮನೆಯ ಹೊರಗೆ ಉಪಯೋಗಿಸಿ ಹೊರಗೇ ಬಿಡುವುದು ಒಂದು ಕಾರಣ. ಇದನ್ನು ಉತ್ತೇಜಿಸಬೇಕೆ, ಹೇಗೆಂದು ಗ್ರಾಹಕರಿಗೆ ತಿಳಿಸುವ ಅವಶ್ಯಕತೆ ಇದೆ. ಡಿಟರ್ಜೆಂಟು ಸೋಪಿನಂತೆ ಅಲ್ಲಿ ಅದರ ನೀರನ್ನೂ ಗಿಡಗಳಿಗೆ ಅದರಲ್ಲೂ ತರಕಾರಿ ಬೆಳೆಗಳಿಗೆ ಉಪಯೋಗಿಸಬಹುದೇ ? ಹತ್ತಾರು ವರ್ಷಗಳು ಅದು ಭೂಮಿಗೆ ಇಳಿದು ಸೇರಿದರೆ ಆಗುವ ತೊಂದರೆಗಳೇನು ಎಂಬುದನ್ನು ನಾವು ತಿಳಿಯಬೇಕು. ಮನೆಗಳಿಂದ ಹರಿಯುವ ನೀರು ಹೊರಗೆ ಹರಿದು ಕೊನೆಯಲ್ಲಿ ಉಪಯೋಗಿಸುವ ರೈತರಿಗೆ ಕೂಡ ಆ ನೀರಿನ ಶುದ್ಧತೆಯ ಬಗ್ಗೆ ತಿಳಿಯಪಡಿಸಬೇಕು. (ಇದನ್ನು ಮುನಿಸಿಪಾಲಿಟಿ/ಸರ್ಕಾರ ಮಾಡದೆ ಇರಲೂ ಸಾಧ್ಯ.)

ಬೆಂಗಳೂರು ಬೃಹತ್ತಾದ ನಗರ, ಅದರ ನೀರಿನ ತೊಂದರೆಯೂ ಅಷ್ಟೇ ಬೃಹದಾಕಾರದ್ದು. ಇದರಲ್ಲಿ ತೊಂದರೆ ಎರಡು ರೀತಿಯದು. ಮೊದಲನೆಯದು, ನೀರನ್ನು ಊರಿನ ಮನೆಗಳಿಗೆ ಹರಿಸುವುದು ಮತ್ತು ಕೊಳಕು ನೀರನ್ನು ಊರಿಂದ ವಾಪಸ್ಸು ಹರಿಸುವುದು. ಈಗ್ಗೆ ದಿನಕ್ಕೆ ಸುಮಾರು ೬೫೦ ಮಿಲಿಯನ್ ಗ್ಯಾಲನ್ ನೀರು ಬೆಂಗಳೂರಿಗೆ ಹರಿಯುತ್ತಿದೆ ಎಂಬ ಅಂದಾಜಿದೆ. ಈ ನೀರಿನ ಸದ್ಬಳಕೆಯ ಬಗ್ಗೆ ನಮ್ಮ ಅಮೂರ್ತ ಸರ್ಕಾರಿ ಅಂಗಗಳು ತಲೆಕೆಡಿಸಿಕೊಂಡಿವೆಯಾದರೂ ಜನ ಪೂರ್ತಿಯಾಗಿ ಮಾತು ಕೇಳರು. ನೀರನ್ನು ಕಡಿಮೆ ಬಳಕೆಮಾಡಿರಿ ಅಂದರಷ್ಟೇ ಸಾಲದು.

'ಉಪಯೋಗಿಸಿದ ನೀರನ್ನು ಮತ್ತೆ ಉಪಯೋಗಿಸುವುದು' ಸಾಧ್ಯವಾದರೆ ನೀರಿನ ಹೆಚ್ಚಿದ ಅವಶ್ಯಕತೆ ತಾನೇ ಕಡಿಮೆಯಾಗುತ್ತದೆ. ಈ ವಾಕ್ಯವೇ ನಮಗೆ ಕೊಂಚಮಟ್ಟಿಗೆ ಮುಜುಗರವನ್ನು ಉಂಟುಮಾಡುತ್ತದೆ. ಇದಕ್ಕೆ ಕಾರಣ ಸ್ಪಷ್ಟ. ಮಲಿನ ನೀರನ್ನು ವೈಯಕ್ತಿಕವಾಗಿ ಉಪಯೋಗಿಸಲು ಮನುಷ್ಯನು ಸಹಜವಾಗಿ ಒಪ್ಪುವುದಿಲ್ಲ. ಈ ವಿಷಯವನ್ನು ನಾವು ಗೌರವಿಸಬೇಕಾಗುತ್ತದೆ. ನೀರಿನ ಮಲಿನತೆಯನ್ನು ನಿವಾರಿಸಿದರೆ ಅದನ್ನು ಉಪಯೋಗಿಸಲು ಸಾಧ್ಯವಾಗುತ್ತದೆ. ಆ ನಿಟ್ಟಿನಲ್ಲಿ ಮೊದಲ ಹೆಜ್ಜೆಯೆಂದರೆ ಶೌಚಾಲಯದಿಂದ ನೀರು ಮನೆಯ ಇತರೆಡೆ ಬಳಕೆಯಾಗಿ ಹೋಗುವ ನೀರಿನ ಜೊತೆಗೆ ಬೆರೆಯದಂತೆ ಮಾಡುವುದು. ಶೌಚಾಲಯವಲ್ಲದೆ ಇತರೆ ನೀರನ್ನು ಒಂಟಿ ಮನೆಯ ಸುತ್ತ ಗಿಡಮರಗಳಿಗೆ ಹರಿಸಿದರೆ ಸಾಕು, ಅದು ಇಂಗುತ್ತದೆ. ಹತ್ತಾರು ಮನೆಗಳ ಸಂಕೀರ್ಣದಲ್ಲಿ ನೀರನ್ನು ಇಂಗಿಸಲು ಆಗದಿದ್ದಾಗ ಅಥವಾ ಹೆಚ್ಚಿನ ನೀರಿದ್ದಾಗ ಅದನ್ನು ಹತ್ತಿರದ ಪಾರ್ಕ್‌ಗಳಿಗೆ ಉಪಯೋಗಿಸಬಹುದು ಅಥವಾ ಕೆರೆಗಳಲ್ಲಿ ಶೇಖರಿಸಬಹುದು. ಈ ವಿಷಯಗಳು ಆಗಲೇ ಜನರಿಗೆ ತಿಳಿದಿವೆ. ಆದರೆ ಈಗಿನ ವ್ಯವಸ್ಥೆಯಲ್ಲಿ ಎಲ್ಲ ನೀರು ಒಟ್ಟಿಗೆ ಬೆರೆಯುವುದರಿಂದ ಇದು ಸಾಧ್ಯವಾಗದೆ ಹೋಗಿದೆ. ಈಗಾಗಲೇ ಹೇಳಿದ ಹಾಗೆ, ಶೌಚಾಲಯದ ನೀರು ಬೇರೆ ಮಲಿನ ನೀರಿನೊಂದಿಗೆ ಬೆರೆಯದಂತೆ ಚಿಕ್ಕ ಊರುಗಳಲ್ಲಿ ಮಾಡಲಾಗುತ್ತಿದೆ. ಆದ್ದರಿಂದಲೇ ಅಲ್ಲಿಯ ನೀರು ಸದುಪಯೋಗಕ್ಕೆ ಬಂದಿದೆ.

ಇದರ ಬಗ್ಗೆ ನಾನು ಮರಿ ವಾಸ್ತುಶಿಲ್ಪಿ ಅನಂತನೊಂದಿಗೆ ಮಾತನಾಡುತ್ತಿದ್ದೆ. ಶೌಚಾಲಯದ ನೀರು ಬೇರೆಯವುಗಳ ಜೊತೆ ಬೆರೆಯದಂತೆ ಬೆಂಗಳೂರಿನ ವಾಸ್ತುಶಿಲ್ಪಿ, ಚಿತ್ರ ವಿಶ್ವನಾಥ್ ಅವರು ಒಂದೆರಡು ಒಳ್ಳೆಯ ಸಲಹೆಗಳನ್ನಿತ್ತಿದ್ದಾರೆ. ಅವರ ಪ್ರಕಾರ ಮೂತ್ರವನ್ನು ಮಲವನ್ನು ಬೇರೆ ಬೇರೆಯಾಗಿ ಡಬ್ಬಗಳಲ್ಲಿ ಸೇರುವಂತೆ ಮಾಡುವುದು ಮತ್ತು ನೀರನ್ನು ಕಡಿಮೆ ಬಳಸುವುದೇ ಆಗಿದೆ. ಆದರೆ ಈ ವಿಧಾನದಿಂದ

ಪೂರ್ಣವಾಗಿ ತೊಂದರೆಯನ್ನು ನಿವಾರಿಸಲಾಗದು. ಇದರಿಂದಾಗಿ ಮೊದಲ ಪ್ಯಾರಾದಲ್ಲಿ ಹೇಳಿದಂತೆಯೇ ಆಗುತ್ತದೆ. ಯಾರಾದರೂ ಆ ಡಬ್ಬಗಳನ್ನು ಎತ್ತಿ ಎಲ್ಲಿಯಾದರೂ ಖಾಲಿಮಾಡಬೇಕಾಗುತ್ತದೆ, ಕೋಣನ ಗಾಡಿಯಲ್ಲದಿದ್ದರೆ, ಲಾರಿಯೋ ಮತ್ತೊಂದು.

ಅನುಕೂಲಗಳು ಹೆಚ್ಚಿದಂತೆಲ್ಲಾ ಸಂಬಂಧಿಸಿದ ತಂತ್ರಜ್ಞಾನ ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತಾ ಸಾಗುತ್ತಿದೆ. ಇದು ಸಹಜ. ನೀರಿನ ಸರಿಯಾದ ಬಳಕೆಯಾಗಬೇಕು, ನೀರನ್ನು ಇಂಗಿಸಿ ಮತ್ತೆ ಅದನ್ನು ಬಾವಿಗಳಿಂದ ಪಡೆಯಬೇಕು ಅಂದಾಗ ಅದನ್ನು ಈಗಿನ ಶೌಚದ ರೀತಿಯಲ್ಲಿ ಮಲಿನಮಾಡಿ ಒಟ್ಟಿಗೆ ಸೇರಿಸಬಾರದು.



## ಸೋರುತಿಹುದು ಮನೆಯ ಮಾಳಿಗೆ

ಇತ್ತೀಚಿನ ದಿನಗಳಲ್ಲಿ... ರೆಂದರೆ ಮುಗಿ -
- ಲೆತ್ತರಕ್ಕೆ ನಿಲ್ಲುವ ಮನೆ ಮಠಗಳು ಬಾಗದಾದಿನ -
ಭೂತ ಬಗ್ಗಿ ನೋಡುವಂತೆ ಹಾದಿಬೀದಿಗಳೆಂದರೆ ಎಲ್ಲೆ -
ಲ್ಲೂ ಫ್ಲೈ ಓವರ್‌ಗಳು ನೆಲವೇನೂ ಕಾಣಬೇಕಿಲ್ಲ -
ದಂತೆ ಕಾಂಕ್ರೀಟಿನ ಗೋಡೆಗಳ ಅಡಿಯಲ್ಲಿ ನೆಲವ
ನಂಬಿದ ರಾತ್ರಿಗಳನ್ನು ಕಳೆಯುತ್ತಿರುವ ಬವಣೆಯ
ಬಡ ಜೀವಿಗಳು : ಕಾಲವೆನ್ನುವದು ನೆಲದಡಿಯ
ಟನಲ್‌ಗಳಲ್ಲಿ ಓಡಾಡಲು ಪ್ಲಾನು ಮಾಡುತ್ತಿರುವ
ಲ್ಲಿ - ಮಠಾಧಿಪತಿಗಳಿಗೂ ಗಾಳಿ ಸವಾರಿಗೆ ಹೆಲಿ -
ಕಾಪ್ಟರುಗಳಿವೆ; ಸುಂದರಿಯರು ಬಿಡಿಸುವ ಸುಪ್ಪ
ತ್ತಿಗೆಗಳಿವೆ; ಮುಗಿಲ ಮಾತಾಡಬಹುದು; ಪ್ರಣ -
ಯದಲ್ಲಿ ತಲೆದೂಗುತ್ತಾ ಬತ್ತಲ ಸೇವೆಗೆ ದೇವರನು
ಬಳಸಿಕೊಳ್ಳಬಹುದು; ಸಕಾಲಕ್ಕೆ ತೆಕ್ಕೆ ಬೀಳುವ -
ಸರಕಾರದಲ್ಲಿ ಜವಾನಿಕೆಯಾದರೂ ಲಂಚದರಮನೆ
ಯಲ್ಲಿ ಕನವರಿಸಬಹುದು : ಗಾಂಧೀಜಿ ಮಾಡಿ
ದ್ದೆಲ್ಲ ತಪ್ಪೆಂದರೂ ಚಿಂತಿಲ್ಲ ಇಂದಿಗೂ ಸ್ವಾತಂತ್ರ್ಯದ
ನೋವಿನ ದಿನಗಳಲ್ಲಿ ಕುಡಿದು ಮೈಮರೆತಾಗ
ನುಡಿಯುವ ದೇವರಂತೆ ನಮ್ಮ ನಿಮ್ಮೆಲ್ಲರಲ್ಲೂ -
ಸಹ ಗಾಂಧಿ ಕರೆಯುತ್ತಾನೆ ನಗುವಿಲ್ಲದ ಬಚ್ಚಬಾಯಿ
ತೆರೆಯುತ್ತಾನೆ - ಮರೆಯುವಂತಿಲ್ಲ ಈ ನೆಲದ ಅಬ್ಬೇ
ಪಾರಿಗಳ ಜೊತೆ ನಕ್ಸಲೀಯ ಹೃದಯಕ್ಕೂ ಮುಟ್ಟುವಂತೆ.

ಕೆ. ವಿ. ರಾಜಗೋಪಾಲ
೧೭೦, ಎಸ್.ಜಿ. ಬ್ಲಾಕ್, ೧೬ನೇ ಕ್ರಾಸ್, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

ಶೌಚಾಲಯವನ್ನು 'ಫ್ಲಶ್' ಮಾಡಿದರೆ ಅದು ತೊಂದರೆಗಳ ಆಗರವೇ ಹೊರತು ಕೊನೆಯಲ್ಲ.

ಮೂತ್ರವನ್ನು ಶೇಖರಿಸಿದರೆ ಅದಕ್ಕೆ ಬೆಲೆ ಇದೆ ಎಂಬುದು ಜನರಿಗೆ/ರೈತರಿಗೆ ಈಗೀಗ ತಿಳಿದುಬರುತ್ತಿದೆ. ಅದಕ್ಕೆ ಮಾರುಕಟ್ಟೆ ಸಿಗುತ್ತದೆ. ಮಲದ ಸಾಗಾಣಿಕೆ ಮತ್ತು ಉಪಯೋಗ ದಲ್ಲಿಯೇ ಹೆಚ್ಚಿನ ತೊಂದರೆ, ಮುಜುಗರ; ಅಪಾಯವೂ ಕೂಡ. ಇದಕ್ಕೆ ಒಂದು ಸರಳ ಹಾಗೂ ನೇರ ಉತ್ತರವೆಂದರೆ, ಮಲವನ್ನು ಶೇಖರಿಸುವ ಕಾರ್ಯರೂಪದಲ್ಲೇ ಅದನ್ನು ಇದ್ದಲಿನಂತೆ 'ಕೇಕ್'ಗಳನ್ನಾಗಿ ಮಾರ್ಪಡಿಸಬೇಕು. ಸದ್ಯಕ್ಕೆ ಇದೊಂದು ಸುಲಭ ಪರಿಕಲ್ಪನೆ ಅಷ್ಟೆ. ಆದರೆ ಅದನ್ನು ಆಗುಮಾಡುವ ಆ ತಂತ್ರ ಇನ್ನೂ ಪೂರ್ಣವಾಗಿ ಪಕ್ವಗೊಳ್ಳಬೇಕಿದೆ. ಸದ್ಯಕ್ಕೆ ಇರುವ ಹೊಳಹುಗಳೆಂದರೆ, ಮಲವನ್ನು ಒಣಗಿಸುವ ಹಾಗೂ ಬಂಧಿಸುವ ವಸ್ತುಗಳಾದ ಮರದ ಪುಡಿ, ಎರೆಮಣ್ಣಿನ ಪುಡಿ, ಬೂದಿ, ಪುಡಿಯಾಗಿಸಿದ ಎಲೆ ಮತ್ತಿತರ ಮರದ ಕಸ; ಪೇಪರಿನ ಪುಡಿ ಇವುಗಳ ಬಳಕೆ. ಒಣಗಿರುವ ಸಾವಯುವ ವಸ್ತುವಿನ ಪುಡಿ ಮತ್ತು ಮಣ್ಣು ಮಲವನ್ನು ಹೆಚ್ಚು ಘನೀಕರಿಸುತ್ತವೆ ಮತ್ತು ಬಳಸಿದ ಅಲ್ಪ ನೀರನ್ನಾದರೂ ಹೀರಿಕೊಳ್ಳುತ್ತವೆ. ಇನ್ನು ಸರಿಯಾದ ಪ್ರಮಾಣದಲ್ಲಿ ಬೆರೆಸಿ ಒಣಗಿಸುವ ತಂತ್ರವನ್ನು ರೂಢಿಸಬೇಕಾಗಿದೆ. ಈ ತ್ಯಾಜ್ಯ ಕೇಕ್‌ಗಳ ರೂಪದಲ್ಲಿ ಬಂದರೆ ಅದಕ್ಕೆ ಬೆಲೆ ಮತ್ತು ನಿಭಾಯಿಸುವ ರೀತಿಯಲ್ಲಿ ವೆಚ್ಚವನ್ನು ಭರಿಸಲು ಸಾಧ್ಯವಿದೆ. ಈ ಕೇಕ್‌ಗಳು ಒಳ್ಳೆಯ ಗೊಬ್ಬರವಾದ್ದರಿಂದ ಅವನ್ನು ನೇರವಾಗಿ ತೋಟಗಾರಿಕೆಯಲ್ಲಿ ಮಣ್ಣಲ್ಲಿಟ್ಟು ಮುಚ್ಚಿಬಿಡಬಹುದು, ಎರೆಗೊಬ್ಬರಕ್ಕೆ ಮೂಲವಾಗಿಸಬಹುದು. ಅದಕ್ಕೆ ಸಿಗುವ ಬೆಲೆಯಲ್ಲಿ, ಅದನ್ನು ಮಾಡುವ ಕಾಯಕದಲ್ಲಿ ಬೇಕಾದ ಕಚ್ಚಾವಸ್ತುಗಳನ್ನು ಸರಬರಾಜು ಆಗುವಂತೆ ಮಾಡಬಹುದು. ಈಗಿರುವ ಟಾಯಿಲೆಟ್ ಗಳಂತಲ್ಲದೆ ಈ ರೀತಿಯ ಉಪಯೋಗಕ್ಕೆ ವಿಶೇಷವಾದ ತಂತ್ರ ಬಳಸಲಾಗುತ್ತದೆ. ಗಾಜು ಮತ್ತು ಅಲ್ಯುಮಿನಿಯಂ ಬಳಸಿ ಮಲ ಸುರಿಯುವ ಮೊದಲು ಮತ್ತು ನಂತರ ಕಚ್ಚಾವಸ್ತುಗಳ ಪುಡಿ ಸುರಿವಂತೆ, ಒತ್ತುವಂತೆ ಮಾಡಬೇಕು. ಆ ನಂತರ ಅವು ಒಣಗಲು ಗಾಳಿಗೆ ತೆರೆದಿರುವಂತೆ ಆಗಬೇಕು. ಕಡಿಮೆಯೆಂದರೆ ಒಂದು ತಿಂಗಳ ಹೊಲಸಾದರೂ ಒಣಗಿ ಶೇಖರವಾಗುವಂತೆ ಸ್ಥಳದ ಹರವು ಬೇಕಾಗುತ್ತದೆ. ಮುಖ್ಯವಾಗಿ ಇವಾವುದಕ್ಕೂ ಕೈಯನ್ನು ಬಳಸುವುದು ಕನಿಷ್ಠವಿರುವಂತೆ ನೋಡಿಕೊಂಡರೆ ಜನ ಇದನ್ನು ಉಪಯೋಗಿಸಲು ಮನಸ್ಸು ಮಾಡಲು ಸಾಧ್ಯ. ಇದರಿಂದಾಗುವ ಅನುಕೂಲಗಳ ಪಟ್ಟಿಯನ್ನು ನೋಡಿದರೆ ಇದನ್ನು ಸಾಧ್ಯವಾಗಿಸುವುದು ಒಳ್ಳೆಯದು ಅನ್ನಿಸುತ್ತದೆ.

* ಮನೆಯಲ್ಲಿ ಬಳಕೆಯಾದ ನೀರನ್ನು ಮನೆಯ ಸುತ್ತಲೂ ಬಳಸಬಹುದು/ಹೆಚ್ಚಿನ ನೀರನ್ನು ಪಾರ್ಕುಗಳಿಗೆ ಬಳಸಬಹುದು, ಕೆರೆಗಳಲ್ಲಿ ಶೇಖರಿಸಬಹುದು.
  (ಗಿಡಗಳು, ಮೀನು ಮತ್ತಿತರ ಪ್ರಾಣಿಗಳು ಎಷ್ಟರಮಟ್ಟಿಗೆ ಡಿಟರ್ಜೆಂಟನ್ನು ಸಹಿಸುತ್ತವೆಂದು ಖಚಿತವಾಗಿ ತಿಳಿದುಕೊಳ್ಳಬೇಕು ಮತ್ತು ಅದನ್ನು ನಿಭಾಯಿಸುವ ರೀತಿಯನ್ನು ಕಲಿಯಬೇಕು.)
* ಮನೆಗಳ ಸುತ್ತ ದಿನವೂ ನೀರು ಇಂಗುತ್ತಿದ್ದರೆ ಬೀದಿಗೊಂದು ಬಾವಿಯಾದರೂ ಯಾವಾಗಲೂ ಜೀವಂತವಾಗಿರಲು ಶಕ್ತವಾಗುತ್ತದೆ.
* ಈಗಿನ ಸುಸಜ್ಜಿತ ಮನೆಗಳಿಂದ ಪ್ರತಿಯೊಬ್ಬ ವ್ಯಕ್ತಿಯಿಂದಲೂ ಬಳಸಿ ಪೋಲಾಗುವ ೨೦ ಲೀಟರು ನೀರನ್ನು ಪ್ರತಿದಿನವೂ ಉಳಿಸಬಹುದು. ಅಂದರೆ ಪ್ರತಿಮನೆಯಿಂದ ಕಡಿಮೆಯೆಂದರೆ ೧೦೦ ಲೀಟರು ನೀರು ಉಳಿಸಲು ಸಾಧ್ಯ.
* ನೀರಿನ ಸದುಪಯೋಗ ಆಗುತ್ತಿದ್ದಂತೆಯೇ ನೀರು ಸರಬರಾಜಿನ ಪ್ರಮಾಣದ ಮೇಲಿನ ಒತ್ತಡ ಕಡಿಮೆಯಾಗಿ ಅವರು ಶುದ್ಧ ನೀರನ್ನು ಹೆಚ್ಚು ವ್ಯವಸ್ಥಿತವಾಗಿ ಎಲ್ಲರಿಗೂ ಹರಿಸಲು ಸಾಧ್ಯ.
* ಮಲ ವಿಸರ್ಜನೆಯಾದ ಕೂಡಲೆ ಒಣಗಲು ಆರಂಭಿಸುವುದರಿಂದ ದುರ್ವಾಸನೆಯ ಸಂಭವವಿಲ್ಲದಂತಾಗುತ್ತದೆ. ನೀರಿನ ಬಳಕೆ ಏನಿದ್ದರೂ ದೇಹ ಸ್ವಚ್ಛತೆಗೆ ಮಾತ್ರ.
* ನೀರಿನ ಬಳಕೆ ಸರಿಯಾಗುತ್ತಿದ್ದಂತೆ ನೀರಿನ ತೊಟ್ಟಿಯಲ್ಲಿ ಮಲಗಿ ಸ್ನಾನಮಾಡುವ ಅನುಕೂಲತೆಯೂ ಸಿಗಲು ಸಾಧ್ಯ !

ಡಾ|| ಜಿ. ಪುರುಷೋತ್ತಮ
ನಂ. ೧೦೩೦/೧೩, ೩೯ನೇ ಕ್ರಾಸ್, ೨೫ನೇ ಮುಖ್ಯರಸ್ತೆ
ಜಯನಗರ, ಬೆಂಗಳೂರು - ೫೬೦ ೦೪೧

# ಶೋಷಣೆಯ ವಿರುದ್ಧ ಹೋರಾಟದ ಸ್ಥಿತಿ

ಇಂದು ಶೋಷಣೆಯು ತನ್ನ ರೂಪವನ್ನು ಬದಲಿಸಿಕೊಂಡು ಬೇರೆ ಬೇರೆ ಆಯಾಮಗಳಲ್ಲಿ ಇನ್ನಷ್ಟು ಚುರುಕಾಗುತ್ತಿರುವುದನ್ನು ಯಾರೂ ಅಲ್ಲಗಳೆಯಲಾಗದು. ಇಂತಹ ಅಮಾನವೀಯ ಅವ್ಯವಸ್ಥೆಯ ವಿರುದ್ಧ ತಿರುಗಿಬಿದ್ದು ಹೋರಾಡುತ್ತ ಬಂದ ಪ್ರಗತಿಪರ ಸಂಘಟನೆಗಳ ಹೋರಾಟದ ಶ್ರಮವೂ ಕೂಡ ಬದಲಾಗಬೇಕೊ ಅಥವಾ ಹೇಗೆ ಎಂಬುವುದು ಈಗ ಚರ್ಚೆಗೆ ಗ್ರಾಸವಾಗಿರುವ ವಿಷಯ. ಅಲ್ಲದೆ ಅವುಗಳ ಸ್ಥಿತಿ-ಗತಿಗಳ ಕುರಿತು ಆತ್ಮಾವಲೋಕನ ಮಾಡಿಕೊಳ್ಳುವುದಕ್ಕೆ ಇದು ಸಂಕ್ರಮಣ ಕಾಲ.

೧೯೮೦-೧೯೯೦ರ ದಶಕದಲ್ಲಿದ್ದ ಪ್ರಗತಿಪರ ಸಂಘಟನೆಗಳ ಕ್ರಿಯಾಶೀಲತೆ, ಸೃಜನಶೀಲತೆಯು ಇಂದೇಕಿಲ್ಲವೆಂಬುದು ಯಾರಿಗೂ ತಿಳಿಯದ ವಿಷಯವೇನಲ್ಲ. ಇನ್ನೇನು ವಿಧಾನಸೌಧದ ಮೇಲೆ ಹಸಿರು ಪತಾಕೆ ಹಾರಾಡಿ, ಆಡಳಿತದ ಚುಕ್ಕಾಣಿ ಹಿಡಿದುಕೊಂಡು ರೈತ ಜನಸಾಮಾನ್ಯರಿಗೆ ನ್ಯಾಯ ದೊರಕಿಸಿಕೊಡುತ್ತದೇನೋ ಎಂಬ ಹಂತದ ತುತ್ತತುದಿಗೆ ತಲುಪಿ, ದಿಢೀರನೆ ಅಲ್ಲಿಂದ ಕೆಳಗುರುಳಿಬಿದ್ದ ಬಗ್ಗೆ ಸಮಾಲೋಚಿಸಿ ಒಂದು ಗಟ್ಟಿ ನಿರ್ಧಾರಕ್ಕೆ ಬರಬೇಕಾಗಿದೆ. ಇಂದು ಕೋಮು ದಳ್ಳುರಿಯಲ್ಲಿ ನಾಡು ಹೊತ್ತಿ ಉರಿಯುತ್ತಿದೆ, ಸ್ತ್ರೀ ಶೋಷಣೆಯು ಮಗ್ಗಲು ಬದಲಿಸಿಕೊಂಡು ಇನ್ನಷ್ಟು ಗಟ್ಟಿಗೊಳ್ಳುತ್ತಿದೆ. ಜಾತಿ ರಾಜಕಾರಣದಿಂದ ಅರಾಜಕತೆ ತಾಂಡವವಾಡುತ್ತಿದೆ. ಸಾಹಿತ್ಯ ಕ್ಷೇತ್ರದಲ್ಲೂ ಗುಂಪುಗಾರಿಕೆ, ಜಾತಿಪ್ರಭಾವ, ಪ್ರತಿಷ್ಠೆಗಳು ಸೇರಿಕೊಂಡು ಉದ್ದೇಶ ಈಡೇರದಂತಾಗಿದೆ, ಸಿನಿಮಾದಂತಹ ಪ್ರಭಾವಿ ಮಾಧ್ಯಮಗಳು ಉಳ್ಳವರ ಕೈಗೊಂಬೆಗಳಾಗಿವೆ. ಧರ್ಮ ಧರ್ಮಗಳ ಮಧ್ಯೆ ಸಂಘರ್ಷ ಏರ್ಪಟ್ಟಿದೆ. ವರ್ಗಶೋಷಣೆಯು ಮಿತಿ ಮೀರಿದೆ. ದಲಿತ, ಹಿಂದುಳಿದ, ಅಲ್ಪಸಂಖ್ಯಾತರ ಶೋಷಣೆ ಇನ್ನಷ್ಟು ಬಿರುಸುಗೊಂಡಿದೆ. ಇಲ್ಲಿ ಐ.ಟಿ., ಬಿ.ಟಿ.ಗಳೇ ಸರ್ವಶ್ರೇಷ್ಠವೆಂದು ಬಿಂಬಿಸಲಾಗುತ್ತಿದೆ. ಇಂತಹ ಸಂದರ್ಭದಲ್ಲಿ ಪ್ರಗತಿಪರ ಸಂಘಟನೆಗಳ ಕೊರತೆ ಎದ್ದುಕಾಣುತ್ತದೆ. ಅವು ಯಾವ ಉದ್ದೇಶಕ್ಕಾಗಿ ತಲೆಎತ್ತಿಕೊಂಡಿದ್ದವೋ, ಅದಕ್ಕಾಗಿ ಪರಿಣಾಮಕಾರಿಯಾದ ಹೋರಾಟ ಮಾಡದೇ ಇರುವುದಕ್ಕೆ ಬೇಸರ ಎನಿಸುತ್ತದೆ. ಸಂಘಟನೆಗಳು ಏನು ಮಾಡುತ್ತಿವೆ? ಹೀಗೇಕೆ ಆಯಿತು? ಎಂದು ಏನೆಲ್ಲ ವಿಚಾರಗಳು ಬಂದು ತಲೆ ಚಚ್ಚಿಕೊಳ್ಳುವಂತಾಗಿದೆ. ಒಂದಂತೂ ಸತ್ಯ, ಪ್ರಗತಿಪರರು ನಾನಾ ಕಾರಣಗಳಿಂದ ಹರಿದುಹಂಚಿಹೋಗಿದ್ದಾರೆ. ಆದ್ದರಿಂದಲೇ ಇಂತಹ ಅವ್ಯವಸ್ಥೆ ತಲೆ ಎತ್ತಿದೆ ಎಂಬುವುದು ಸಾರ್ವತ್ರಿಕ ಸತ್ಯ.

**ರೈತ ಸಂಘ**

ಹಿಂದಿನ ದಿನಮಾನಗಳನ್ನೆಲ್ಲವನ್ನು ಒಂದು ಬಾರಿ ಮೆಲುಕುಹಾಕಿಕೊಂಡು, ಮುಂದಿನ ಚಿತ್ರಣ ಕಂಡುಕೊಳ್ಳುವುದು ಗಟ್ಟಿ ಹಾಗೂ ಸೂಕ್ತ ಎನಿಸುತ್ತದೆ. ವ್ಯವಸ್ಥೆಯ ಒಳಗಿದ್ದುಕೊಂಡೇ ವ್ಯವಸ್ಥೆಯನ್ನು ಸುಧಾರಣೆಗೆ ತರಬೇಕೆಂದು ಹೋರಾಡುತ್ತ ಬಂದ ಬಹುತೇಕ ಪ್ರಗತಿಪರ ಸಂಘಟನೆಗಳು ಇಂದು ಸ್ಥಗಿತಗೊಂಡು ಸ್ಮಶಾನಮೌನ ತಾಳಿರುವುದು ಶೋಷಿತ ವರ್ಗಗಳನ್ನು ಕಂಗಾಲುಗೊಳಿಸಿದೆ.

ರೈತ ಸಂಘವು ೧೯೮೦ರ ದಶಕದಲ್ಲಿ ರಾಜ್ಯದ ಪ್ರತಿ ಗ್ರಾಮದಲ್ಲೂ ತನ್ನ ಶಾಖೆಗಳನ್ನು ತೆರೆದು ರೈತರ ಸಮಸ್ಯೆಗಳಿಗೆ ಸ್ಪಂದಿಸಿ ರೈತರ ಧ್ವನಿಯಾಗಿತ್ತು. ಗ್ರಾಮದ ದ್ವಾರದಲ್ಲಿ ಸಂಘದ ಫಲಕವೊಂದು ರಾರಾಜಿಸುತ್ತಿತ್ತು. 'ಭ್ರಷ್ಟರಿಗೆ ಗ್ರಾಮದಲ್ಲಿ ಪ್ರವೇಶವಿಲ್ಲ' ಎಂಬ ಎಚ್ಚರಿಕೆಯ ಬರಹ ಸಂಘದ ಸಿಂಹಗರ್ಜನೆಯನ್ನು ಪ್ರತಿಬಿಂಬಿಸುತ್ತಿತ್ತು. (ಇಂದಿಗೂ ಪ್ರತಿ ಗ್ರಾಮದಲ್ಲೂ ಎಚ್ಚರಿಕೆಯ ಫಲಕಗಳಿವೆ, ಆದರೆ ಅವುಗಳಿಗೆ ಅರ್ಥ ಕಲ್ಪಿಸಿಕೊಡಬೇಕಾಗಿದೆ.) ಅಂದು ಭ್ರಷ್ಟ ಅಧಿಕಾರಿಗಳು, ರಾಜಕಾರಣಿಗಳು ಆ ಗ್ರಾಮಗಳಿಗೆ ಬರಲು ಹಿಂಜರಿಯುತ್ತಿದ್ದರು. ಹಸಿರು ವಸ್ತ್ರಧಾರಿಗಳ ಕಂಡರೆ ಬೆದರಿಕೊಳ್ಳುತ್ತಿದ್ದರು. ಸರ್ಕಾರಿ ಕಛೇರಿಗಳು ರೈತರ ಪರ ಕೆಲಸ ಮಾಡುತ್ತಿದ್ದವು. 'ರೈತ ದೇಶದ ಬೆನ್ನೆಲುಬು' ಎಂಬ ಘೋಷಣೆಗೆ ಅರ್ಥ ಕಲ್ಪಿಸಲಾಗಿತ್ತು. 'ರೈತರ ಬೆಳೆಗೆ ವೈಜ್ಞಾನಿಕ ಬೆಲೆ' ಕಲ್ಪಿತವಾಗುವ ಹಂತ ತಲುಪಲಾಗಿತ್ತು. ರೈತರ ಬಾಳಿಗೆ ಸಂಘವು ಬಾಳಬುತ್ತಿಯಾಗಿತ್ತು. ಆದರೆ ಅರ್ಜೆಂಟಾಗಿ ವಿಧಾನಸೌಧದ ಮೇಲೆ ಹಸಿರು ನಿಶಾನೆ ಹಾರಿಸಬೇಕೆಂಬ ನಿರ್ಧಾರದಿಂದ ಸಂಘದ ದಿಕ್ಕು ಬದಲಾಯಿತು. ನಾಯಕರ ಅಧಿಕಾರದಾಹ ಹೆಚ್ಚಾಯಿತು, ಭಿನ್ನಾಭಿಪ್ರಾಯಗಳು ಬೆಳೆಯತೊಡಗಿದವು. ಇಂತಹ ಅವಕಾಶವನ್ನೇ ಕಾಯುತ್ತಿದ್ದ ಅಧಿಕಾರಿಗಳು, ರಾಜಕಾರಣಿಗಳು ಇನ್ನಷ್ಟು ಬಿರುಕು ಸೃಷ್ಟಿಸಿ ಸಂಘದ ಬಲವನ್ನು ಉಡುಗುವಂತೆ ಮಾಡಿದರು. ಯಾವ ಹಸಿರು ವಸ್ತ್ರಧಾರಿಯನ್ನು ಕಂಡರೆ ಗಡಗಡ ನಡುಗುತ್ತಿದ್ದರೋ ಅದೇ ವಸ್ತ್ರಧಾರಿಯನ್ನು ಸತಾಯಿಸಿ ಅವರಿಂದಲೇ ರಾಜಾರೋಷವಾಗಿ ಲಂಚ ಸ್ವೀಕರಿಸತೊಡಗಿದರು. ಸಂಘದ ಸಿಂಹಗರ್ಜನೆಗೆ ಬೆದರಿ ಬೆಂಡಾಗಿದ್ದ ರಾಜಕಾರಣಿಗಳು ಭಿನ್ನಮತ ಹೊಂದಿದ ಸಂಘದ ನಾಯಕರನ್ನು ತಮ್ಮ ಕೈಗೊಂಬೆಗಳನ್ನಾಗಿ ಮಾಡಿಕೊಂಡರು. ಹಣದ ಕೊರತೆಗಳಂತಹ ಕಾರಣಗಳಿಂದ ಸಂಘವು ಚುನಾವಣೆಯಲ್ಲಿ ಹೇಳಿಕೊಳ್ಳುವಂತಹ ಸಾಧನೆ ಮಾಡಲಾಗಲಿಲ್ಲ. ಸಂಘದ ಇಂತಹ ಸ್ಥಿತಿಗೆ ಅದರ ದಿಢೀರ್ ಬೆಳವಣಿಗೆಯೇ ಕಾರಣವೆಂದು ವಿಶ್ಲೇಷಣೆ ಮಾಡಲಾಗುತ್ತಿದೆ. ಕೆಲವರು ಅದು ಚುನಾವಣೆಗೆ ಸ್ಪರ್ಧಿಸಿದ್ದೇ ತಪ್ಪು ಎಂದು ಹೇಳುತ್ತಾರೆ, ಮತ್ತೆ ಕೆಲವರು ಅದೊಂದು ಕಾಲಘಟ್ಟವೆಂದು ಹೇಳಿ ಕೈತೊಳೆದುಕೊಳ್ಳುತ್ತಾರೆ, ಅಂತೂ ಈ ಸ್ಥಿತಿಗೆ ಬಂದು ತಲುಪಿರುವುದಂತು ನಿಜ.

**ದಲಿತ ಸಂಘರ್ಷ ಸಮಿತಿ**

ಶತಶತಮಾನಗಳಿಂದ ಶೋಷಣೆಗೆ ಬಲಿಯಾಗುತ್ತ ಬಂದ ದಲಿತರಿಗೆ ಧ್ವನಿಯಾಗಿ ದಲಿತ ಸಂಘರ್ಷ ಸಮಿತಿ ತಲೆಎತ್ತಿ ನಿಂತುಕೊಂಡಿದ್ದು ಈ ದೇಶದ ಇತಿಹಾಸದಲ್ಲಿ ಮಹತ್ವದ ಘಟ್ಟವಾಗಿದೆ. ನಂತರ ಇದು ಕೂಡ ನಾನಾ ಕಾರಣಗಳಿಂದ ಛಿದ್ರಛಿದ್ರಗೊಂಡು ದಲಿತರ ಬದುಕಿನ ಭರವಸೆಗಳನ್ನು ಹೊಸಕಿಹಾಕಿತು. ಇಲ್ಲಿಯೂ ಸಹ ನಾಯಕರ ಭಿನ್ನಾಭಿಪ್ರಾಯ, ಅಧಿಕಾರದ ದಾಹವೇ ಇಡೀ ಸಾಂಘಿಕ ಶಕ್ತಿಯನ್ನು ಉಡುಗುವಂತೆ ಮಾಡಿತು. ಅಟ್ರಾಸಿಟಿ ಕಾನೂನು ಮಾತ್ರ ಇಂದು ಅಸ್ಪೃಶ್ಯ



ಶಾಂತಕುಮಾರ್ ಪೂಜಾರ್

ದಲಿತರಿಗೆ ಬೆಂಗಾವಲಾಗಿ ನಿಂತಿದೆ. ಇದರಲ್ಲಿಯೂ ರಾಜಕಾರಣ ಹೊಕ್ಕು ಈ ಕಾನೂನಿನ ದುರುಪಯೋಗ ಮಾಡಿಕೊಂಡ ಬಗ್ಗೆಯೂ ಕೇಳಿಬರುತ್ತಿದೆ. ಉಳ್ಳವರ ಕೆಂಗಣ್ಣಿಗೆ ಗುರಿಯಾಗಿರುವ 'ಮೀಸಲಾತಿ'ಯಿಂದ ಕೆಲವೇ ಕೆಲವು ಕುಟುಂಬಗಳು ಮುಂದೆ ಬಂದಿದ್ದರೂ, ಬಹುತೇಕ ಕುಟುಂಬಗಳು ಇನ್ನೂ ಗುಡಿಸಲಿನಿಂದ ಹೊರಬಂದಿಲ್ಲ. ವಸ್ತುಸ್ಥಿತಿಯು ಹೀಗಿದ್ದಾಗಲೂ ಆಗಿನ ಬಿಜೆಪಿ ನೇತೃತ್ವದ ಎನ್.ಡಿ.ಎ. ಕೇಂದ್ರ ಸರ್ಕಾರ 'ಮೀಸಲಾತಿ' ಪರಿಶೀಲಿಸುವ ಪ್ರಸ್ತಾವನೆ ಮುಂದಿರಿಸಿತ್ತು. ತನ್ನ ರಾಜಕೀಯ ಭವಿಷ್ಯದ ದೃಷ್ಟಿಯಿಂದ ಮತ್ತೆ ೧೦ ವರ್ಷಕ್ಕಾಗಿ ಮುಂದುವರಿಸಿತು. ಒಂದು ವೇಳೆ ರದ್ದುಪಡಿಸಿದ್ದರೆ ನಾವು ಅಲ್ಲಲ್ಲಿ ಕೂಗಾಡಿ, ರೇಗಾಡಿ, ಹೋರಾಟ ಮಾಡಿ ಸುಸ್ತಾಗಿ ಮತ್ತೆ ಮಲಗಿ ಬಿಡುತ್ತಿದ್ದೆವೇನೊ ಎನಿಸುತ್ತದೆ. ಇದೇ ಹೊತ್ತಿಗೆ ಕರ್ನಾಟಕದಲ್ಲೂ ಬಿ.ಜೆ.ಪಿ. ಶಾಸಕರ ಸಂಖ್ಯೆ ಹೆಚ್ಚಾಗಿತ್ತು. ನಂತರ ಈ ಬೆಳವಣಿಗೆಯು ಅಪಾಯಕಾರಿ ಎಂಬುದನ್ನು ಎಲ್ಲರೂ ಮನಗಂಡರು. ಇಂದು ನೆಲಮಟ್ಟದ ಅತ್ಯಂತ ಕಟ್ಟುನಿಟ್ಟಿನ ಬದಲಾವಣೆ ತಂದುಕೊಂಡು ಇತಿಹಾಸ ಬರೆಯುವ ಮಾನವೀಯತೆಯ ಅಗತ್ಯವಿದೆ.

**ಬಂಡಾಯ ಸಾಹಿತ್ಯ ಸಂಘಟನೆ**

'ಖಡ್ಗವಾಗಲಿ ಕಾವ್ಯ' ಎಂಬ ತತ್ವದಡಿಯಲ್ಲಿ ಶೋಷಿತರ ಪರವಾದ ಸಾಹಿತ್ಯ ರಚಿಸಿ ಜನರಲ್ಲಿ ಜಾಗೃತಿ ಮೂಡಿಸುತ್ತ ಬಂದಿದ್ದ ಬಂಡಾಯ ಸಾಹಿತ್ಯ ಸಂಘಟನೆಯೂ ಸಹ ನ್ಯಾಯ ದೊರಕಿಸಿಕೊಡುವಷ್ಟು ಇಡಿಯಾಗಿಲ್ಲ. ಇಲ್ಲಿಯೂ ನಾಯಕರ ಭಿನ್ನಾಭಿಪ್ರಾಯ ಮತ್ತು ಕೆಲವರ ಅಧಿಕಾರದ ಆಸೆಯಿಂದ ಸಂಘಟನೆ ಕ್ರಿಯಾಶೀಲವಾಗಿಲ್ಲ. ಸಂಘಟನೆಯ ಬೆಳವಣಿಗೆಯ ಜೊತೆಗೆ ಪೂರಕ ಸಂಘಸಂಸ್ಥೆಗಳು ಕೂಡ ರಾಜ್ಯದ ತುಂಬಾ ಸ್ಥಾಪನೆಗೊಂಡು ಶೋಷಿತರ ಪರವಾಗಿ ಹೋರಾಡುತ್ತ ಬಂದಿದ್ದಾವೆ. ವಿಶೇಷವಾಗಿ ಮಹಿಳಾ ಸಂಘಟನೆ, ವಿದ್ಯಾರ್ಥಿ ಸಂಘಟನೆಗಳು ಅತ್ಯಂತ ಚುರುಕಿನಿಂದ

> **ಇಂದು ಶೋಷಣೆಯು ತನ್ನ ರೂಪವನ್ನು ಬದಲಿಸಿಕೊಂಡು ಬೇರೆ ಬೇರೆ ಆಯಾಮಗಳಲ್ಲಿ ಇನ್ನಷ್ಟು ಚುರುಕಾಗುತ್ತಿರುವುದನ್ನು ಯಾರೂ ಅಲ್ಲಗಳೆಯಲಾಗದು. ಇಂತಹ ಅಮಾನವೀಯ ಅವ್ಯವಸ್ಥೆಯ ವಿರುದ್ಧ ತಿರುಗಿಬಿದ್ದು ಹೋರಾಡುತ್ತ ಬಂದ ಪ್ರಗತಿಪರ ಸಂಘಟನೆಗಳ ಹೋರಾಟದ ಶ್ರಮವೂ ಕೂಡ ಬದಲಾಗಬೇಕೊ ಅಥವಾ ಹೇಗೆ ಎಂಬುವುದು ಈಗ ಚರ್ಚೆಗೆ ಗ್ರಾಸವಾಗಿರುವ ವಿಷಯ. ಅಲ್ಲದೆ ಅವುಗಳ ಸ್ಥಿತಿ-ಗತಿಗಳ ಕುರಿತು ಆತ್ಮಾವಲೋಕನ ಮಾಡಿಕೊಳ್ಳುವುದಕ್ಕೆ ಇದು ಸಂಕ್ರಮಣ ಕಾಲ.**

ಕಾರ್ಯನಿರ್ವಹಿಸುತ್ತ ಬಂದವು. ನನ್ನಂತಹ ಯುವ ಬರಹಗಾರರ ಪಡೆಯನ್ನೇ ಸೃಷ್ಟಿಸಿದ ಕೀರ್ತಿ ಬಂಡಾಯ ಸಾಹಿತ್ಯ ಸಂಘಟನೆಗಿದೆ. ಪೂರಕ ಸಂಘಗಳು ಇಂದು ಮಾರ್ಗದರ್ಶನದ ಕೊರತೆಯನ್ನು ಅನುಭವಿಸುತ್ತಿವೆ. ಯುವ ಬರಹಗಾರರು ವೇದಿಕೆಯಿಲ್ಲದೆ ವಂಚಿತರಾಗುತ್ತಿದ್ದಾರೆ. ಶೋಷಿತರು ಧ್ವನಿಗಾಗಿ ಪರದಾಡುತ್ತಿದ್ದಾರೆ; ಸಾಕ್ಷರರಾಗಲು ಹಂಬಲಿಸುತ್ತಿದ್ದಾರೆ; ಸ್ವಾಭಿಮಾನಿಗಳಾಗಿ ಹಸನಾದ ಬದುಕಿಗಾಗಿ ಕಾತುರರಾಗಿದ್ದಾರೆ.

ರೈತಸಂಘ, ದಲಿತ ಸಂಘ, ಬಂಡಾಯ ಸಾಹಿತ್ಯ ಸಂಘಟನೆಗಳು ಬೇರೆ ಬೇರೆ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದರೂ, ಅವುಗಳ ಉದ್ದೇಶ ಒಂದೇ ಆಗಿದೆ. ಇವುಗಳೆಲ್ಲವೂ ಇಂದು ಮೌನ ತಾಳಿರುವ ಕಾರಣವೂ ಒಂದೇ. ಅದಕ್ಕಾಗಿ ಇವುಗಳೆಲ್ಲ ಮತ್ತೆ ಕ್ರಿಯಾಶೀಲವಾಗುವ ಕಾಲ ಈಗ ಬಂದಿದೆ. ಅದೇ ಸಂಕ್ರಮಣ ಕಾಲ. ಈ ಮೂರು ಸಂಘಟನೆಗಳ ಎದುರಿರುವ ವೈರಿ ಒಬ್ಬನೇ. ಅವನೇ ಶೋಷಕ. ಎಲ್ಲಾ ಕ್ಷೇತ್ರಗಳಲ್ಲಿರುವ ಶೋಷಕರ ಹುಟ್ಟಡಗಿಸುವ ಕಾರ್ಯವೊಂದೇ ಬಾಕಿ ಇರುವುದು.

**ನಕ್ಸಲ್ ಯೋಧರು**

ಇನ್ನು ವ್ಯವಸ್ಥೆಯ ಹೊರಗಿದ್ದುಕೊಂಡು ಅನ್ಯಾಯಕ್ಕೀಡಾದವರಿಗೆ ತನ್ನದೇ ಆದ ವಿವಾದಾತ್ಮಕ ರೀತಿಯಲ್ಲಿ ನ್ಯಾಯ ದೊರಕಿಸಿಕೊಡಲು ಹೋರಾಡುತ್ತಿರುವ ನಕ್ಸಲ್ ಯೋಧರು ದಂಡಕಾರಣ್ಯದಲ್ಲಿದ್ದುಕೊಂಡು ನಾಡಿನ ಜನತೆಯನ್ನು ಪ್ರೀತಿಸುವ ನಿಜವಾದ ದೇಶಪ್ರೇಮಿಗಳು. ಆದರೆ ವ್ಯವಸ್ಥೆಯು ಇವರನ್ನೇ ದೇಶದ್ರೋಹಿಗಳೆಂದು ಕರೆಯುತ್ತಿದೆ. ಅದೇ, ನಾಡಲ್ಲಿದ್ದುಕೊಂಡು ನಾಡಿನ ಸಂಪತ್ತು ಹಾಗೂ ಕಾಡಿನ ಸಂಪತ್ತನ್ನು ಲೂಟಿ ಮಾಡುತ್ತಿರುವವರನ್ನು ದೇಶ ಪ್ರೇಮಿಗಳು ಎಂದು ಬಣ್ಣಿಸಿ ಸನ್ಮಾನಿಸಲಾಗುತ್ತಿದೆ. ಪ್ರಾಣದ ಹಂಗುತೊರೆದು ಶೋಷಿತರ ಪರವಾಗಿ ಹೋರಾಡುವ ನಕ್ಸಲ್ ಯೋಧರು ಸೆರೆ ಸಿಕ್ಕರೆ ಶಿಕ್ಷಿಸಲಾಗುತ್ತಿದೆ, ಕಾದಾಡಿದರೆ ಗುಂಡು ಹಿಡಿಸಿ ಸಾಯಿಸಲಾಗುತ್ತಿದೆ, ಅದೇ ಜಾತಿ ರಾಜಕಾರಣದಿಂದ ಲಂಚದ ಸಾಮ್ರಾಜ್ಯ ಸೃಷ್ಟಿಸಿ ಹಗಲು ದರೋಡೆ ಮಾಡಿ ಅನ್ಯ ಮಾರ್ಗದಿಂದ ಹಣ ಸಂಪಾದಿಸಿ ಹೊರದೇಶಗಳಲ್ಲಿ ಗುಪ್ತವಾಗಿ ಇರುವವರನ್ನು ಗೌರವಿಸಲಾಗುತ್ತಿದೆ. ಇವರಿಗೆ ಕಾನೂನು ರಕ್ಷಣೆ ಬೇರೆ ! ಹೇಗಿದೆ ನೋಡಿ ಈ ಅವ್ಯವಸ್ಥೆ! ದೇಶಪ್ರೇಮಿಗಳು ಕಾಡಿನಲ್ಲಿದ್ದರೆ, ದೇಶದ್ರೋಹಿಗಳನ್ನು ನಾಡಲ್ಲಿ ಬಿಟ್ಟುಕೊಂಡಿದ್ದೇವೆ. ಪ್ರಾಮಾಣಿಕರು, ನ್ಯಾಯವಾದಿಗಳನ್ನು ಇಲ್ಲಿ ತುಳಿದು ಗೂಂಡ ಸಂಸ್ಕೃತಿ ಮೆರೆಯುತ್ತಿದೆ. ಇಂತಹ ಸಂಕ್ರಮಣ ಕಾಲದಲ್ಲಿ ಜನತೆ ಜಾಗೃತಗೊಂಡು ಎಲ್ಲ ಅವಘಡಗಳನ್ನು ಸರಿಪಡಿಸಿಕೊಂಡು 'ಸಮಬಾಳು' ಬಾಳಬೇಕಾಗಿದೆ. ಎಡವಿದ ತಪ್ಪನ್ನು ತಿದ್ದಿಕೊಳ್ಳಲು ಮುಂದಾಗಬೇಕಾಗಿದೆ.

**ಶಾಂತಕುಮಾರ್ ಪೂಜಾರ್ ('ಶಾಂಪೂ')**
ಅಧ್ಯಾಪಕ, ಮಾಡಲ್ ಇಂಗ್ಲಿಷ್ ಹೈಸ್ಕೂಲ್, ಕುಮಾರ ಪಾರ್ಕ ಪಶ್ಚಿಮ ೬ನೇ ಅಡ್ಡರಸ್ತೆ, ಶೇಷಾದ್ರಿಪುರಂ, ಬೆಂಗಳೂರು - ೫೬೦ ೦೨೦

**ಸುದ್ದಿಚಿತ್ರ**



ದಿನಾಂಕ ೩೦.೭.೨೦೦೬ರಂದು 'ನವಕರ್ನಾಟಕ ಸಾಹಿತ್ಯ ಸಂಪದ ಮಾಲಿಕೆ'ಯ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕು-ಬರೆಹ ಕುರಿತ ಮೂರನೇ ಕಂತಿನ ಹನ್ನೆರಡು ಪುಸ್ತಕಗಳ ಲೋಕಾರ್ಪಣೆ ನಡೆಯಿತು.

ಡಾ॥ ಬಿ. ಎ. ವಿವೇಕ ರೈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಡಾ॥ ಜಿ. ಎಸ್. ಶಿವರುದ್ರಪ್ಪನವರು ಪುಸ್ತಕ ಅನಾವರಣ ಮಾಡಿದರು. ಶ್ರೀ ಓ. ಎಲ್. ನಾಗಭೂಷಣ ಸ್ವಾಮಿ ಪುಸ್ತಕ ಪರಿಚಯ ಮಾಡಿಕೊಟ್ಟರು. ಪ್ರೊ॥ ಎಲ್. ಎಸ್. ಶೇಷಗಿರಿರಾವ್ (ಪುರಸ್ಕೃತರಲ್ಲೊಬ್ಬರು) ಮುಖ್ಯ ಅತಿಥಿಯಾಗಿದ್ದರು. ಪುಸ್ತಕ ರಚಿಸಿದ ಹನ್ನೆರಡು ಮಂದಿ ಲೇಖಕರು, ಮಾಲೆಯ ಸಂಪಾದಕರಾದ ಡಾ॥ ಪ್ರಧಾನ್ ಗುರುದತ್ತ ಹಾಗೂ ಭಾರಿ ಸಂಖ್ಯೆಯ ಸಾಹಿತ್ಯಾಸಕ್ತರು ಭಾಗವಹಿಸಿದ್ದರು.



# ಧುತ್ತರಗಿ ಕಂಡ ದಿಕ್ಕೆಟ್ಟ ದೇಶ

ಈರಪ್ಪ ಎಂ. ಕಂಬಳಿ

**ಹೆ**ತ್ತ ಅವ್ವನನ್ನೂ ಹುಟ್ಟಿದ ಊರನ್ನೂ ಅಲ್ಲೇ ಬಿಟ್ಟು, ಅನ್ನ ಹುಡುಕಿಕೊಂಡು ಬಂದು ಐನೂರು ಕಿಲೋಮೀಟರು ದೂರದ ಈ ಬೆಂಗಳೂರಿನ ತೆಕ್ಕೆಗೆ ಬಿದ್ದಿರುವ ನನ್ನಂಥ ತಿರುಬೋಕಿಗಳಿಗೆ ಆಗೀಗ ಊರ ಕಡೆ ಮುಖಮಾಡುವುದು ಅನಿವಾರ್ಯ. ಯಾಕೆಂದರೆ, ನಮ್ಮ ಖಾಸಾ ಬೇರುಗಳನ್ನು ಪೂರ್ತಾ ಅಲ್ಲಿಂದ ಕಿತ್ತುಕೊಂಡು ಬಂದಿಲ್ಲವಾದುದರಿಂದಾಗಿ ಅಷ್ಟೆ. ಹೋದವಾರ ಹಾಗೆ ಊರಿಗೆ ಫೋನಾಯಿಸಿದಾಗ ಅಣ್ಣ, ''ಇಲ್ಲಿ ಕವಿಗಳದಾರ ನೋಡು'' ಎಂದು ರಿಸೀವರ್ ಅವರ ಕೈಗೆ ಕೊಟ್ಟರು. ಅದೇ ಆಪ್ತ ಧಾಟಿಯಲ್ಲಿ ತುಸು ತಗ್ಗಿದ ದನಿಯಲ್ಲಿ ಕವಿ ಪಿ.ಬಿ. ಧುತ್ತರಗಿ ಅತ್ತಲಿಂದ ಮಾತನಾಡುತ್ತಿದ್ದರು. ''ಹೊಸ ನಾಟಕ ಮಾಡೀನಿ. ನಿಮ್ಮ ಊರಿಗೆ ಬಂದು ಕುಂದರಸೇನಿ. ನೀನೂ ಬಂದು ನೋಡಬೇಕಲ್ಲ...'' ಎಂದು ಆಹ್ವಾನಿಸಿದ್ದರು.

ಕಂಪನಿ ನಾಟಕಗಳ ಪರಿಭಾಷೆಯಲ್ಲಿ ಉತ್ತರಕರ್ನಾಟಕದಲ್ಲಿ ನಾಟಕ ರಚನಕಾರರನ್ನು ಬಾಯ್ತುಂಬ 'ಕವಿ' ಎಂದೇ ಕರೆಯುವುದು ವಾಡಿಕೆ. ಹಾಗೇ ನಾಟಕ ಹಚ್ಚುವುದು, ನಾಟಕ ಕೂಡ್ರಿಸುವುದು ಅಂದರೆ ನಾಟಕ 'ಕಲಿಯುವುದು', 'ನಿರ್ದೇಶಿಸುವುದು'. ಅಷ್ಟೇ ಅಲ್ಲ ವೃತ್ತಿ ನಾಟಕ ಕಂಪನಿಗಳನ್ನು 'ನಾಟ್ಯ ಸಂಘ' ಎಂದೆಲ್ಲ ಹೇಳುವುದುಂಟು. ಶಾಸ್ತ್ರದ ಪ್ರಕಾರ ನಾಟ್ಯ - ನಾಟಕ ಎರಡೂ ಒಂದೇ. ಇರಲಿ. ಎಂಭತ್ತರ ವಯೋಮಾನದತ್ತ ದಾಪುಗಾಲು ಹಾಕುತ್ತಿರುವ ಪಿ.ಬಿ. ಧುತ್ತರಗಿಯವರು ಉತ್ಸಾಹದಿಂದ ಹೊಸ ನಾಟಕ ರಚಿಸಿದ್ದೇನೆಂದು ಈಗ ಹೇಳುವಾಗ – ಆ ಸೃಜನಶೀಲತೆಗೆ ವಯಸ್ಸಿನ ಬಾಧಕವಿಲ್ಲವೆ ? ಕ್ರಿಯಾಶೀಲ ಪ್ರತಿಭೆಗೆ ವಿಶ್ರಾಂತಿ ಅನ್ನುವುದೇ ಇಲ್ಲವೆ ? ಎಂದೆಲ್ಲ ಪ್ರಶ್ನೆಗಳು ನನ್ನ ಮನಸ್ಸಿನಲ್ಲಿ ಎದ್ದವು.

ಬೀಸ್ ಸಾಲ್ ಪೀಛೆ! ಸ್ವತಃ ಕಲಾವಿದೆ ಪತ್ನಿ ಸರೋಜಮ್ಮನನ್ನೂ ಜೊತೆಮಾಡಿಕೊಂಡು ವೃತ್ತಿರಂಗ ಭೂಮಿಯಲ್ಲಿ ಸಾಕಷ್ಟು ಹೆಣಗಿದ್ದು ಕಣ್ಣೆದುರಿಗಿದೆ. ೧೯೮೫ರಲ್ಲಿ ನನ್ನೂರು ಯಲಬುರ್ಗಿಯಲ್ಲಿ ಬೀಡುಬಿಟ್ಟಿದ್ದ ಅವರದೇ ಕಂಪನಿ (ಶ್ರೀ ಸಿದ್ಧಶಕ್ತಿ ಕೃಪಾಪೋಷಿತ ನಾಟ್ಯ ಸಂಘ, ಸೂಳೆಬಾವಿ) ತನ್ನ ಕೊನೆಯ ದಿನಗಳನ್ನು ಎಣಿಸುತ್ತಿದ್ದುದನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ದಿನಗೂಲಿಯ ಮೇಲೆ ಗದುಗಿನಿಂದ ಕರೆತರುತ್ತಿದ್ದ ಕಲಾವಿದೆಯರನ್ನು ಸರೋಜಮ್ಮ ತಲೆ ನೇವರಿಸಿ, ''ಇವತ್ತೊಂದು ದಿನ ಇರು, ರೊಕ್ಕಾ ಹುಟ್ಟಿಸಿ, ನಿನಗೆ ಕೊಡಬೇಕಾಗಿದ್ದನ್ನ ಕೊಟ್ಟು ನಾಳೆ ಬೆಳಿಗ್ಗೆ ನಿನ್ನ ಗದುಗಿನ ಬಸ್ಸು ಹತ್ತಿಸತೀನಿ'' ಎಂದು ತಾಯಿಯಂತೆ ರಮಿಸುತ್ತಿದ್ದುದನ್ನು ನೋಡಿದ್ದೇನೆ.

ಯಾಕೆಂದರೆ, ಹಿಂದಿನ ರಾತ್ರಿಯಷ್ಟೇ ರಂಗದ ಮೇಲೆ ಸದರಿ ಕಲಾವಿದೆ, ''ತದಿಗಿನ್ನ ತಿಟಕಿಟ ತಾ ತದಿಗಿನ್ನ ತಿಟಕಿಟ ತಾ'' ಎಂದು ನರ್ತಿಸುತ್ತಿರುವಾಗ, ಪಕ್ಕದಲ್ಲಿ ಹಾಸ್ಯ ನಟನೊಬ್ಬ 'ಗಿದುಗಿನ ತಿಕೀಟು ತಾ, ಗದಿಗಿನ ತಿಕೀಟು ತಾ' ಎಂದು ಆಕೆಯನ್ನು ಅನುಕರಿಸಿದಂತೆ ಅಣಕಿಸುತ್ತಿದ್ದದ್ದೂ, ಗದುಗಿನಿಂದಲೇ ಕರೆಸಲಾಗಿದ್ದ ಆಕೆಯ ಮೊಗದಲ್ಲಿ ನಸುನಗೆ ಸುಳಿದುಹೋದದ್ದು ಮುಂದಿನ ಸಾಲಿನಲ್ಲಿ ಕೂತು ನಾಟಕ ನೋಡುತ್ತಿದ್ದ ನನ್ನ ಬಗೆಗಣ್ಣಿಗೆ ಬಾರದಿರಲಿಲ್ಲ. ಮುಂದೊಂದು ದಿನ ಅದನ್ನೇ ವಸ್ತುವಾಗಿಸಿಕೊಂಡು ಗದುಗನ್ನು ಕುರಿತೇ ಒಂದು ಲಲಿತ ಪ್ರಬಂಧ ಬರೆಯಲು ಅಂದಿನ ಅನುಭವ ನನಗೆ ಪ್ರೇರಣೆ ನೀಡಿತ್ತು. ಜಗಮಗಿಸುವ ರಂಗದ ಹಿಂದೆ ನೇಪಥ್ಯದಲ್ಲಿ ಕಲಾವಿದರು ಅನುಭವಿಸುವ ಎಂತೆಂಥಾ ತರಲೆ-ತಾಪತ್ರಯಗಳಿರುತ್ತವೆ ಗೊತ್ತೆ ?

ಮರುದಿನ ಬೆಂಗಳೂರಿಗೆ ಹಿಂದಿರುಗಲು ಬಸ್ಸಿಗಾಗಿ ಕಾದು ನಿಂತಿದ್ದೆ. ಸಾಹಿತಿ-ಕಲಾವಿದರೆಂದರೆ ಬಿದ್ದು ಸಾಯುವ ಹಿರಿಯರೂ ನನ್ನ ಹಿತೈಷಿಗಳೂ ಆಗಿದ್ದ ಮುನಿಯಪ್ಪ, ರಾಜಶೇಖರಪ್ಪರ ಒಡಗೂಡಿ ಧುತ್ತರಗಿಯವರೂ ಅತ್ತಕಡೆಯಿಂದ ಬಂದರು. ನನ್ನ ಮದುವೆ ನಿಷ್ಕರ್ಷೆಯಾಗುತ್ತಿರುವ ಸುದ್ದಿ ಕೇಳಿ ರಾಜಶೇಖರಪ್ಪ, ''ಸಂಸಾರ ಅನ್ನೂ ಬೋನಿನೊಳಗೆ ಹೊರಗಿನ ಇಲಿಗಳು ಒಳಗೆ ಹೋಗಾಕ ಅವಸರಾ ಮಾಡತಿರತಾವ, ಆಗಲೇ ಒಳಗೆ ಸಿಕ್ಕಬಿದ್ದ ಇಲಿಗೊಳು ಹೊರಗ ಬರಾಕ ಪರಿತಪಿಸತಿರತಾವ'' ಎಂದದ್ದಕ್ಕೆ ಎಲ್ಲಾ ಸಣ್ಣಗೆ ನಕ್ಕರು. ಜೊತೆಗಿದ್ದ ಧುತ್ತರಗಿಯವರು ಅನ್ಯ ಮನಸ್ಕರಾಗಿದ್ದವರಂತೆಯೇ, ಏನನ್ನೋ ನೆನಪಿಸಿಕೊಂಡವರಂತೆ, ಎಡಗೈಯಲ್ಲಿ ಧೋತರದ ಚುಂಗು, ಬಲಗೈಯಲ್ಲಿ ಉರಿಯುತ್ತಿದ್ದ ದೊಡ್ಡ ಚುಟ್ಟ ಕೊಡವುತ್ತಲೇ ನನ್ನ ಬಳಿ ಸಾರಿ, ''ಬಣ್ಣಕೆಟ್ಟ ಮೆತ್ತನೆಯ ಒಂದರ ನೋಟಿನಂತಿರುವ ತುಟಿಯು ಸವರಿಕೊಳ್ಳುತ್ತಲೇ ಸಾಗುತ್ತಾಳೆ ಮುಂದೆ... ಆ ಕಡೀ ಸಾಲು ಐತೆಲ್ಲ, ಭಾಳಾ ಚಲೋ ಬಂದೈತಿ, ಕಣ್ಣಿಗೆ ಕಟ್ಟತೈತಿ'' ಎಂದು ಪ್ರತಿಕ್ರಿಯಿಸಿದ್ದರು. ಮುಟ್ಟುವುದಕ್ಕೂ ಹೇಸುವಂತಿದ್ದ ಒಂದರ ನೋಟಿನ ಚಲಾವಣೆಯ ದಿನಗಳವು. ವಾರದ ಹಿಂದಷ್ಟೇ 'ಕನ್ನಡ ಪ್ರಭ'ದಲ್ಲಿ ಅಚ್ಚಾಗಿದ್ದ ಮೆಜೆಸ್ಟಿಕ್ ಬೀದಿ ವೇಶ್ಯೆಯನ್ನು ಕುರಿತು ಬರೆದ ನನ್ನ ಪದ್ಯವನ್ನು ನೆನಪಿಸಿಕೊಂಡು ಕವಿ ಹಾಗೆ ಪ್ರತಿಕ್ರಿಯಿಸಿದ್ದರು. ನನಗೆ ಇದಕ್ಕಿಂತ ಪ್ರಮಾಣಪತ್ರ ಬೇಕೇ ಅಂದುಕೊಂಡೆ. ಎಷ್ಟೇ ಆದರೂ ನಾವೆಲ್ಲ ಎಳೆಯದರಲ್ಲಿ ಅವರ ನಾಟಕ ನೋಡಿಕೊಂಡೇ ಬೆಳೆದವರೆಂಬ ಕಾರಣಕ್ಕೆ.

ನಾಟಕ ಕಂಪನಿಗಾಗಿ ಮಾಡಿದ್ದ ಸಾಲ ತೀರಿಸಲು ಧುತ್ತರಗಿಯವರು ಪರದಾಡಿದ್ದು; ಅದೇ ಸುಮಾರಿಗೆ ಪ್ರತಿಷ್ಠಿತ ಗುಬ್ಬಿ ಪ್ರಶಸ್ತಿ ಬಂದು ಸರ್ಕಾರ ನೀಡಿದ ಆ ಲಕ್ಷ ರುಪಾಯಿ ತುಸು ನೆರವಾದದ್ದು; ಕಂಪನಿ ಮುಚ್ಚಿ ಅಮೀನಗಡದಲ್ಲಿ ನಿರುಮ್ಮಳಾಗಿ ಬದುಕಲು ವ್ಯವಸ್ಥೆಯೇನೋ ಆಗಿತ್ತು. ಸುದೀರ್ಘ ಅವಧಿಯ ವಿರಾಮದ ನಂತರ ಈಗ ಹೊಸ ನಾಟಕ ಬರೆದಿದ್ದೇನೆಂದು ಹೇಳುವದಾದರೆ ಕವಿಚೇತನ ಸುಮ್ಮನಿರಲಿಲ್ಲ. ಪ್ರಯೋಗಶೀಲ ಮನಸ್ಸು ಸುಮ್ಮನೇ ಕೂರಲು ಬಿಡಬೇಕಲ್ಲ!

ಒಂದು ಅರ್ಥದಲ್ಲಿ ನಾಟಕಕಾರರು ಕವಿಗಳೇ ಸೈ. ಶೇಕ್ಸ್‌ಪಿಯರ್‌ನಿಂದ ಹಿಡಿದು ಇಂದಿನ ಆಧುನಿಕ ನಾಟಕಕಾರರ ರಚನೆಗಳೇ ಅದನ್ನು ಸಾಬೀತುಪಡಿಸಬಲ್ಲವು. ಎಷ್ಟೇ ಆದರೂ ನಾಟಕ ಸಮಾಜಮುಖಿ. ಆದುದರಿಂದಾಗಿಯೇ ಬೇರೆಲ್ಲ ಸಾಹಿತ್ಯ ಪ್ರಕಾರಗಳಿಗಿಂತ ನಾಟಕ ಅದರದೇ ಆದ ಮಹತ್ವದ ಹೊಣೆಗಾರಿಕೆ ಪಡೆದಿದೆ. ಅರವತ್ತು, ಎಪ್ಪತ್ತರ

ಮನುಷ್ಯ – ಮನುಷ್ಯರ ನಡುವಿನ ಅಸಮಾನತೆ, ಕೆಲವೇ ಜನರ ಕೈಯಲ್ಲಿ ಸಂಪತ್ತಿನ ಶೇಖರಣೆ, ಸಾಲಕ್ಕೆ ತತ್ತರಿಸಿ ರೈತ ಆತ್ಮಹತ್ಯೆಗೆ ಎಳಸುತ್ತಿರುವ ದೃಶ್ಯಗಳು ಮನಕಲಕುತ್ತವೆ. ಪ್ರಖರ ಸಾಮಾಜಿಕ ಕಳಕಳಿಯಿರಿಸಿಕೊಂಡೂ ಮನೋಜ್ಞ ಕೌಟುಂಬಿಕ ನಾಟಕಗಳನ್ನು ಬರೆಯುವಲ್ಲಿ ಎತ್ತಿದ ಕೈ ಆದ ಧುತ್ತರಗಿಯವರು ೧೯೬೩ರಲ್ಲಿ 'ದೇವಿ ಮಹಾತ್ಮೆ' ಎಂಬ ಪೌರಾಣಿಕ ನಾಟಕ ಬರೆದು ವೃತ್ತಿರಂಗಭೂಮಿಯನ್ನು ಹಚ್ಚಹಸಿರಾಗಿಡಲು ಕಾರಣವಾದರು. ವೃತ್ತಿರಂಗಭೂಮಿ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಹೆಣಗುತ್ತ ಅಸಭ್ಯ ಹಾಡು – ಕುಣಿತಕ್ಕೆ ಮಾರುಹೋದ ಈ ದಿನಗಳಲ್ಲಿ ಶುದ್ಧ ಮನಸ್ಸಿನಿಂದ, ಪುರಾಣ ಬೆರೆಸಿದ ಈ ಸಾಮಾಜಿಕ ನಾಟಕವನ್ನು ಧುತ್ತರಗಿ ರೂಪಿಸಿದ್ದಾರೆ. 'ದಿಕ್ಕೆಟ್ಟ ದೇಶಕ್ಕೆ ದೇವರೇ ಗತಿ' ಅನ್ನುವಲ್ಲಿ ಹತಾಶ ಮನೋವೃತ್ತಿಯಿಲ್ಲ. ಅವರ ಪರಿಭಾಷೆಯಲ್ಲಿ ಅದು ದೇವರು ದಾರಿ ತೋರುತ್ತಾನೆಂದು ನಂಬಿರುವ ಕವಿಯ ಕನಸಿನ ಸ್ಥಿತಿ.

ದಶಕಗಳಲ್ಲಿ ನಾವೆಲ್ಲ ಎಳೆಯರಾಗಿದ್ದಾಗ ಧುತ್ತರಗಿಯವರ 'ಮಲಮಗಳು', 'ತಾಯಿ ಕರುಳು' ನಾಟಕಗಳನ್ನು ನೋಡುತ್ತಲೇ ಬೆಳೆದವರು. ನಮ್ಮ ಪಾಲಿಗೆ ಆಗ ಅನನ್ಯ ಸಾಂಸ್ಕೃತಿಕ ವೇದಿಕೆಯೆಂದರೆ ವೃತ್ತಿರಂಗಭೂಮಿಯಲ್ಲಿ ಆಡುತ್ತಿದ್ದ ನಾಟಕಗಳೇ ಆಗಿದ್ದವು. ನಾಟಕದ ಸನ್ನಿವೇಶಗಳು, ಸಂಭಾಷಣೆ – ಹಾಡುಗಳು ನಮ್ಮ ನಾಲಿಗೆಯ ಮೇಲೆ ಸರಾಗವಾಗಿ ಹರಿದಾಡುವ ದಿನಗಳವು. ಅದಕ್ಕೇ ನಾಟಕಕಾರರೆಂದರೆ ಅಪ್ರತಿಮ ಕವಿಗಳು ಅನ್ನುವುದು. 'ಕಾವ್ಯೇಷು ನಾಟಕಂ ರಮ್ಯಂ' – ಎಂದು ಪ್ರಾಚೀನ ಲಾಕ್ಷಣಿಕರು ಗುರುತಿಸಿದ್ದರಲ್ಲಿ ಅರ್ಥವಿದೆ.

'ಮಲಮಗಳು' ಅರ್ಥಾತ್ 'ಮುದುಕನ ಮದುವೆ' (ಲಕ್ಷಕ್ಕೂ ಮೀರಿದ ಪ್ರಯೋಗ ಕಂಡ ನಾಟಕ), 'ತಾಯಿಕರುಳು' (ಮನೋಜ್ಞ ಕೌಟುಂಬಿಕ ವಸ್ತುವನ್ನೊಳಗೊಂಡ ಧುತ್ತರಗಿಯವರ ಮಾಸ್ಟರ್‌ಪೀಸ್), 'ಸಂಪತ್ತಿಗೆ ಸವಾಲು' (ವರ್ಗ ಸಂಘರ್ಷದ ವಸ್ತುವಿನಿಂದಾಗಿ ಗಮನ ಸೆಳೆದ, ರಾಜಕುಮಾರ್ ನಾಯಕ ಪಾತ್ರದಲ್ಲಿ ಅಭಿನಯಿಸಿದ ಸಿನಿಮಾ ಆಗಿಯೂ ಅಪಾರ ಯಶಸ್ಸು ಕಂಡ ನಾಟಕ) ಬರೆದಿದ್ದವರು ಹತ್ತು ವರ್ಷದ ಕೆಳಗೆ 'ದೇವಿ ಮಹಾತ್ಮೆ' ಎಂಬ ಪೌರಾಣಿಕ ನಾಟಕ ಬರೆದು ಧುತ್ತರಗಿಯವರು ಅಚ್ಚರಿಯಾಗುವಂತೆ ಪ್ರಚಂಡ ಯಶಸ್ಸು ಗಳಿಸಿದ್ದರು. ಅದಕ್ಕೆ ಲಕ್ಷ ರೂಪಾಯಿ ಸಂಭಾವನೆ ಪಡೆದ ನಾಟಕ ಕಾರರಾಗಿ ದಾಖಲೆ ಮಾಡಿದ್ದರು. ಸಾಲಾಗಿ ಅಂಥ ಕೃತಿಗಳನ್ನು ನೀಡಿದ ಧುತ್ತರಗಿಯವರು ತಮ್ಮ ಪ್ರತಿಯೊಂದು ನಾಟಕವನ್ನೂ ಸತ್ವಪರೀಕ್ಷೆಗೊಡ್ಡಿಯೇ ಜಯಶೀಲರಾದವರು.

ಇದೇ ಡಿಸೆಂಬರ್ ೨ರಂದು ಧುತ್ತರಗಿಯವರು ಬರೆದ ಆ ಹೊಸ ನಾಟಕದ ಪ್ರಯೋಗ ಸಣ್ಣ ತಾಲ್ಲೂಕು ಕೇಂದ್ರವೊಂದರಲ್ಲಿ ಐವತ್ತಕ್ಕೆ ಮುಟ್ಟಿತ್ತು. ಸಂಘದೊಡೆಯರು ಕವಿಗೆ ಶಾಲು ಹೊದಿಸಿ ಸನ್ಮಾನಿಸುವ ಸರಳ ಸಮಾರಂಭವನ್ನೂ ಏರ್ಪಡಿಸಿದ್ದರು. ಏನೇ ಆಗಲಿ, ಆ ಹಿರಿಯ ಜೀವ ಕಕ್ಕುಲಾತಿ ಬೆರೆಸಿದ ದನಿಯಲ್ಲಿ ತನ್ನ ಹೊಸ ನಾಟಕ ನೋಡಬೇಕೆಂದು ಕರೆದಾಗ ತಪ್ಪಿಸಿಕೊಳ್ಳಲಿಲ್ಲ. ನಾಟಕ ನೋಡಿ ಬಂದಾದ ಮೇಲೆ, ವೃತ್ತಿರಂಗಭೂಮಿಯನ್ನು ಕಡೆಗಣಿಸಬಾರದೆಂಬ ಕಾರಣಕ್ಕೆ ಹೀಗೆ ಒಂದು ಟಿಪ್ಪಣಿ ಬರೆಯುವ ಒತ್ತಡಕ್ಕೆ ಬಿದ್ದೆ. ಅವರ ಹೊಸ ನಾಟಕದ ಶೀರ್ಷಿಕೆಯೋ – 'ಮಾತೃಶಕ್ತಿ ಮಹಿಮೆ' ಅರ್ಥಾತ್ 'ದಿಕ್ಕೆಟ್ಟ ದೇಶಕ್ಕೆ ದೇವರೇ ಗತಿ'. ಇದು ಕೂಡ ವೃತ್ತಿರಂಗ ಭೂಮಿಯ ನಾಟಕ ಪರಂಪರೆಯನ್ನು ಮುಂದುವರಿಸಿದಂತೆ ತೋರುತ್ತದೆ, ನಿಜ.

ಕಣ್ಣಿಗೆ ಕಾಣದ ದೈವೀಶಕ್ತಿಯೊಂದು ಮಾತೃಸ್ವರೂಪದಲ್ಲಿ ಸದಾ ಜಾಗೃತವಾಗಿದ್ದು ಈ ಪ್ರಪಂಚವನ್ನು ಕಾಪಾಡುತ್ತಿರುತ್ತದೆಂದು ಬಲವಾಗಿ ನಂಬಿರುವ ಧುತ್ತರಗಿಯವರ ಅನಿಸಿಕೆಯ ಸ್ತರದ ಮೇಲೆ ಈ ನಾಟಕ ಸೃಷ್ಟಿಯಾಗಿದೆ. ಹಾಗೆಂದ ತಕ್ಷಣ, ಅವರು ಇಲ್ಲದ ದೇವರನ್ನು ತಂದು ಇಲ್ಲಿ ಆರೋಪಿಸಹೋಗುವುದೂ ಇಲ್ಲ. ಬಹುದೊಡ್ಡ ಸಮುದಾಯದ ನಂಬಿಕೆಯ ವಸ್ತುವಾದ ಪ್ರಪಂಚವನ್ನು ಮುನ್ನಡೆಸುವ ಅಗೋಚರ ಶಕ್ತಿಯನ್ನೇ ಸಾಂಕೇತಿಕವಾಗಿ ಶ್ರೀದೇವಿಯೆಂದು ಕರೆಯುವ ಮೂಲಕ, ಇಲ್ಲಿ ಪುರಾಣದ ಕಣ್ಣಿನಲ್ಲಿ ವರ್ತಮಾನವನ್ನು ಕಾಣುವ ಪ್ರಯತ್ನ ಮಾಡಿದ್ದಾರೆ.

ಪುರಾಣ ಪ್ರಸಂಗಗಳನ್ನು ದೇಶದ ಪ್ರಸ್ತುತ ವಿದ್ಯಮಾನಗಳೊಂದಿಗೆ ತಳುಕು ಹಾಕಿದಂತೆ ನಾಟಕ ಬೆಳೆಸುತ್ತಾರೆ. ಪೌರಾಣಿಕ ಪಾತ್ರಗಳ ಬಾಯಿಂದ ದೇಶದ ಅರಾಜಕತೆಯನ್ನು ಜರಿಯುತ್ತಾರೆ. ಇದು ಮೇಲುನೋಟಕ್ಕೆ ವಿಚಿತ್ರವಾಗಿ ತೋರಿದರೂ ತುಸು ಸಹೃದಯತೆಯಿಂದ, ಸಹಾನುಭೂತಿಯಿಂದ, ಅದೂ ವೃತ್ತಿರಂಗಭೂಮಿಯ ನೆಲೆಗಟ್ಟಿನಲ್ಲಿ ನಿರುಕಿಸಿದ್ದಾದರೆ, ಆಗ ನಾಟಕಕಾರನ ಆಶಯ ಅರ್ಥಪೂರ್ಣವಾಗಿ ತೋರುತ್ತ ಹೋಗುತ್ತದೆ. ಗಿರೀಶ್ ಕಾರ್ನಾಡರು ತಮ್ಮ 'ಹಯವದನ', 'ಹಿಟ್ಟಿನ ಹುಂಜ', 'ನಾಗಮಂಡಲ' ನಾಟಕಗಳಿಗೆ ಪುರಾಣ-ಜಾನಪದ ಪ್ರಸಂಗಗಳನ್ನೇ ಎತ್ತಿಕೊಂಡರು. ಆ ನಾಟಕಗಳಲ್ಲಿ ಬರುವ ಪುರಾಣ ಪ್ರಸಂಗಗಳ ಅವಾಸ್ತವಗಳನ್ನು ಸಾಂಕೇತಿಕವೆಂದು ಬಗೆಯಲಾಗುತ್ತದೆ. ಹವ್ಯಾಸಿ ರಂಗಭೂಮಿಯಲ್ಲಿ ಅವ್ಯಾವುವೂ ನಮಗೆ ಅವಾಸ್ತವ, ಅಸಂಬದ್ಧ ಅನ್ನಿಸುವುದಿಲ್ಲ. ಆದರೆ, ಪ್ರೇಕ್ಷಕರಲ್ಲಿ ಯಾವುದೇ ರೀತಿಯ ವರ್ಗೀಕರಣ ಮಾಡದೆ, ಒಂದೇ ಆಯಾಮದಲ್ಲಿ ಬೃಹತ್ ಸಮುದಾಯ ತಣಿಸುವ ಜವಾಬ್ದಾರಿ ಹೊತ್ತ ವೃತ್ತಿರಂಗಭೂಮಿಗೆ ಯಾಕೆ ಈ ತಾರತಮ್ಯ ? ಎಂಬ ಪ್ರಶ್ನೆಯನ್ನು ನಿವಾರಿಸಿಕೊಂಡೂ ಧುತ್ತರಗಿಯವರ ಈ ನಾಟಕವನ್ನು ಪರಾಂಬರಿಸಬೇಕಾಗಿದೆ.

ಆಧುನಿಕ ಕಂಪ್ಯೂಟರ್ ಯುಗದಲ್ಲೂ ಆ ಮಹಿಮೆ ಈ ಮಹಿಮೆ ಎಂದು ಅವೈಜ್ಞಾನಿಕ ಪವಾಡಗಳನ್ನು ಹೊಸ ಗ್ರಾಫಿಕ್ ತಂತ್ರಜ್ಞಾನದ ನೆರವಿನಿಂದ ಮೌಢ್ಯಗಳನ್ನು ಪ್ರತಿಪಾದಿಸಿದಂತೆ ಸಿನಿಮಾ ಮಾಡುವ ಅಪ್ರಬುದ್ಧತೆಯ ನಡುವೆಯೂ, ಧುತ್ತರಗಿಯವರ ಈ ನಾಟಕ ತನ್ನದೇ ಆದ ಕಾರಣಕ್ಕೆ ಗಮನ ಸೆಳೆಯುತ್ತದೆ. ಯಾವುದೇ ಅಶ್ಲೀಲ – ದ್ವಂದ್ವಾರ್ಥದ ಸಂಭಾಷಣೆಯಿಲ್ಲದೆ, ಅಸಭ್ಯ ಹಾಡು-ಕುಣಿತಗಳಿಲ್ಲದೆ, ಪೌರಾಣಿಕ ಕತೆಯ ಹಂದರದ ನಡುವೆಯೇ ಸಾಮುದಾಯಿಕ ಪ್ರಜ್ಞೆಯ ಸಾಮಾಜಿಕ ಸನ್ನಿವೇಶ ಸೃಷ್ಟಿಸಿ, ಇಂದು ನಾಡು-ದೇಶ, ಆ ಮೂಲಕ ಪ್ರಪಂಚ ಎದುರಿಸುತ್ತಿರುವ ಸಮಸ್ಯೆಗಳತ್ತ ಜನ-ಮನ ಸೆಳೆಯುತ್ತಾರೆ.

ಈ ಭೂಮಿಯ ಮೇಲೆ ಇಷ್ಟೊಂದು ಅರಾಜಕತೆ ಉಂಟಾಗಿರುವಾಗ ಹರಿ-ಹರ-ಬ್ರಹ್ಮಾದಿಗಳು ಸುಖಲೋಲುಪತೆಯಲ್ಲಿ ಮೈಮರೆಯುವುದು ತರವೆ ? ಎಂದು ಅವರನ್ನೇ ವಿಚಾರಣೆಗೆ ಒಳಪಡಿಸುವ ಪಾರ್ವತಿ ಇಲ್ಲಿ ಜಾಗೃತ ಸ್ತ್ರೀಶಕ್ತಿಯ ಧ್ವನಿಯಾಗಿ ಕಾಡುತ್ತಾಳೆ. ಒಂದು ಕಡೆಯಿಂದ ಮೈಗಳ್ಳರನ್ನು ರಿಪೇರಿ ಮಾಡಿಕೊಂಡು ಬರುವ ಪಣ ತೊಟ್ಟು ಭೂಮಿಗಿಳಿಯುತ್ತಾಳೆ. ಪಂಚಾಯಿತಿಯಿಂದ ಪಾರ್ಲಿಮೆಂಟಿನವರೆಗೆ ನಡೆಯುವ ಅವ್ಯವಹಾರ, ಭ್ರಷ್ಟಾಚಾರಗಳನ್ನು ಕಂಡು ಕ್ರುದ್ಧಳಾಗಿ ನಿಲ್ಲುತ್ತಾಳೆ. ಅರಣ್ಯ ನಾಶ, ಗಣಿಗಾರಿಕೆ, ಬತ್ತಿದ ಅಂತರ್ಜಲ, ವಾಯುಮಾಲಿನ್ಯ, ಜಲಮಾಲಿನ್ಯಗಳಿಂದ ಜೀವಿ ಸಂಕುಲ ತತ್ತರಿಸಿ ಹೋಗುತ್ತಿರುವುದಕ್ಕೆ ದೇವಿ ಆಕ್ರೋಶಗೊಂಡಿದ್ದಾಳೆ. ಮನುಷ್ಯನ ನೀಚತನಕ್ಕೆ, ನಿರಂತರ ಅತ್ಯಾಚಾರಕ್ಕೆ ನೊಂದ ಭೂಮಿ ಒಂದೇ ಒಂದು ಬಾರಿ ಮೈ ಕೊಡವಿದ್ದಕ್ಕೇ ಸುನಾಮಿಯಿಂದ ಅದೆಷ್ಟು ಸಾವು ನೋವು ಸಂಭವಿಸಿದ್ದನ್ನು ನೆನಪಿಸುತ್ತಾಳೆ.

ಮನುಷ್ಯ-ಮನುಷ್ಯರ ನಡುವಿನ ಅಸಮಾನತೆ, ಕೆಲವೇ ಜನರ ಕೈಯಲ್ಲಿ ಸಂಪತ್ತಿನ ಶೇಖರಣೆ, ಸಾಲಕ್ಕೆ ತತ್ತರಿಸಿ ರೈತ ಆತ್ಮಹತ್ಯೆಗೆ ಎಳಸುತ್ತಿರುವ ದೃಶ್ಯಗಳು ಮನ ಕಲಕುತ್ತವೆ. ಪ್ರಖರ ಸಾಮಾಜಿಕ ಕಳಕಳಿಯಿರಿಸಿಕೊಂಡೂ ಮನೋಜ್ಞ ಕೌಟುಂಬಿಕ ನಾಟಕಗಳನ್ನು ಬರೆಯುವಲ್ಲಿ ಎತ್ತಿದ ಕೈ ಆದ ಧುತ್ತರಗಿಯವರು ೧೯೯೬ರಲ್ಲಿ 'ದೇವಿ ಮಹಾತ್ಮೆ' ಎಂಬ ಪೌರಾಣಿಕ ನಾಟಕ ಬರೆದು ವೃತ್ತಿರಂಗಭೂಮಿಯನ್ನು ಹಚ್ಚಹಸಿರಾಗಿಡಲು ಕಾರಣವಾದರು. ವೃತ್ತಿರಂಗಭೂಮಿ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಹೆಣಗುತ್ತ ಅಸಭ್ಯ ಹಾಡು-ಕುಣಿತಕ್ಕೆ ಮಾರುಹೋದ ಈ ದಿನಗಳಲ್ಲಿ ಶುದ್ಧ ಮನಸ್ಸಿನಿಂದ, ಪುರಾಣ ಬೆರೆಸಿದ ಈ ಸಾಮಾಜಿಕ ನಾಟಕವನ್ನು ಧುತ್ತರಗಿ ರೂಪಿಸಿದ್ದಾರೆ. 'ದಿಕ್ಕೆಟ್ಟ ದೇಶಕ್ಕೆ ದೇವರೇ ಗತಿ' ಅನ್ನುವಲ್ಲಿ ಹತಾಶ ಮನೋವೃತ್ತಿಯಿಲ್ಲ. ಅವರ ಪರಿಭಾಷೆಯಲ್ಲಿ ಅದು ದೇವರು ದಾರಿ ತೋರುತ್ತಾನೆಂದು ನಂಬಿರುವ ಕವಿಯ ಕನಸಿನ ಸ್ಥಿತಿ.

ಧುತ್ತರಗಿಯವರ ಸತತ ಅಧ್ಯಯನ-ಚಿಂತನೆಗಳಿಂದ ತಮ್ಮದೇ ಆದ ನಂಬಿಕೆಯ ಹಂದರದಲ್ಲಿ ಸಾಮಾಜಿಕ ಕಾಳಜಿಯ ಹೂರಣ ತುಂಬಿದ ಕತೆ ಕಟ್ಟಿದ್ದಾರೆ. ಅದು ಬರೀ ಮನರಂಜನೆಯೊಂದನ್ನೇ ನೆಚ್ಚಿಲ್ಲ. ವಿಚಾರಪ್ರಚೋದಕ ಸಾಮಾಜಿಕ ಜವಾಬ್ದಾರಿ ಹೊಂದಿರುವ ಒಬ್ಬ ಸಾಹಿತಿ ತನ್ನ ಕೃತಿಯ ಮೂಲಕ ಏನನ್ನು ಹೇಳಬಲ್ಲನೋ ಅದನ್ನೇ ಒಬ್ಬ ಪ್ರಜ್ಞಾವಂತ ನಾಟಕಕಾರನಾಗಿ ಇಲ್ಲಿ ಧುತ್ತರಗಿ ತಮ್ಮ ಸಾಮಾಜಿಕ ಬದ್ಧತೆ ಮೆರೆದಿದ್ದಾರೆ.

ತಾಲೂಕು ಕೇಂದ್ರವೊಂದರಲ್ಲಿ ಅಂಥ ನಾಟಕ ಯಶಸ್ವಿಯಾಗಿ ಐವತ್ತೊಂದು ಪ್ರಯೋಗಗಳನ್ನು ಕಂಡಿತೆಂದರೆ, ಖಂಡಿತ ನಮ್ಮ ಜನರ ಅಭಿರುಚಿ ಕೆಟ್ಟಿಲ್ಲ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಕಂಪನಿ ನಾಟಕಗಳು ಕೀಳು ಅಭಿರುಚಿ ಪ್ರದರ್ಶಿಸುತ್ತವೆಂದು ಬೊಬ್ಬೆ ಹೊಡೆಯುವವರು ಧುತ್ತರಗಿಯವರ ಈ ಹೊಸ ನಾಟಕವನ್ನು ಖಂಡಿತಾ ನೋಡಬೇಕು: ಮನೆ ಮಂದಿಯೆಲ್ಲ ಒಟ್ಟಿಗೇ ಕೂತು ನೋಡಿ ಆನಂದಿಸಬೇಕಾದ ಒಂದು ಸುಂದರ ನಾಟಕ.

ಹಲವು ಹತ್ತು ದುರವಸ್ಥೆಗಳಲ್ಲಿ ನರಳುತ್ತಿರುವ ಇವತ್ತಿನ ವೃತ್ತಿರಂಗಭೂಮಿಗೆ ಕಾಯಕಲ್ಪದಂತೆ ಧುತ್ತರಗಿಯವರ ಈ ನಾಟಕ ಸದಭಿರುಚಿಯನ್ನು ಎತ್ತಿಹಿಡಿದಿದೆ. ರಾಷ್ಟ್ರಪತಿಗೆ ಶ್ರೀದೇವಿ ಸ್ವಪ್ನದರ್ಶನ ನೀಡುವುದು, ತನ್ನ ಪೈಶಾಚಿಕ ಬಲವನ್ನು ಛೂ ಬಿಟ್ಟು ಭ್ರಷ್ಟರನ್ನು ಸದೆಬಡಿಯುವಂತಹ ಸನ್ನಿವೇಶಗಳು ಅವಾಸ್ತವವೆಂದರೂ ಕವಿಯ ಕಲ್ಪನೆಯಲ್ಲಿ ಮೈದಳೆದ ಕನಸಿನ ರೂಪವಾಗಿವೆ. ಹಿಮಾಚ್ಛಾದಿತ ಪ್ರದೇಶದಲ್ಲಿ ಕುಳಿತ ಶಿವ-ಪಾರ್ವತಿ ಬಳಗ, ದೇವೇಂದ್ರನ ಅಮರಾವತಿ, ಶ್ರೀದೇವಿ ಭೂಗರ್ಭದಿಂದ ಎದ್ದುಬರುವ ದೃಶ್ಯಗಳು; ಜಗಮಗಿಸುವ ವೇಷಭೂಷಣಗಳು, ಪ್ರೇಕ್ಷಕರನ್ನು ಮತ್ತೆ ನಾಟಕದತ್ತ ಮುಖ ಮಾಡುವಂತೆ ಆಕರ್ಷಿಸುತ್ತವೆ.

ಈ ನಾಟಕಕ್ಕಾಗಿಯೇ ಭಾರಿ ಖರ್ಚು ಮಾಡಿ ವಿಶೇಷವಾಗಿ ಬರೆಸಿದ ಸೀನರಿಗಳು, ಹೊಸ ಕಾಸ್ಟ್ಯೂಮ್‌ಗಳು ನಾಟಕದ ಪಾತ್ರ-ಸನ್ನಿವೇಶಗಳಿಗೆ ಮೆರುಗು ನೀಡುವುದರೊಂದಿಗೆ, ಗತಕಾಲದ ರಂಗಭೂಮಿಯ ವೈಭವವನ್ನು ನೆನಪಿಸುವಂತೆ, ಚರಿತ್ರೆ ಮರುಕಳಿಸಿತೇನೋ ಎಂದು ಭಾಸವಾಗುತ್ತದೆ. ಮಂಡಲಗಿರಿಯ ಶ್ರೀ ಗುರು ತೋಂಟದಾರ್ಯ ನಾಟ್ಯ ಸಂಘದೊಡೆಯರ (ಎಚ್. ವೀರಯ್ಯ ಹಾಗೂ ಎ. ಶಂಕರ್) ಸಾಹಸವನ್ನೂ ಕಲಾಪ್ರೇಮವನ್ನೂ ಮೆಚ್ಚಬೇಕು.

ನಾಡಿನ ಗಣ್ಯ ಸಾಹಿತಿಗಳನ್ನು ಚೆನ್ನಾಗಿ ಓದಿಕೊಂಡ ಧುತ್ತರಗಿಯವರ ಸಂಭಾಷಣೆಯಲ್ಲಿ ವೈಚಾರಿಕ ನಿಲುವು, ಕಾವ್ಯಾತ್ಮಕ ನಡಿಗೆಯಿದೆ. ಆ ಓಘದಿಂದಾಗಿ ವೃತ್ತಿರಂಗ ನಾಟಕವೀಗ ಮತ್ತೆ ಜನರನ್ನು ಹೇಗೆ ಸೆಳೆಯಬಲ್ಲುದೆಂಬುದರ ಸುಳುಹೂ ಇಲ್ಲಿದೆ. ಈ ಕಾರಣಕ್ಕಾಗಿ, ಧುತ್ತರಗಿಯವರು ಕಂಡರಿಸಿದ 'ದಿಕ್ಕೆಟ್ಟ ದೇಶ' ಕಂಪನಿ ನಾಟಕಗಳಿಗೆ ಪುನಶ್ಚೇತನ ನೀಡಬಲ್ಲ, ಹೊಸ ಪ್ರಯೋಗವಾಗಬಲ್ಲ ನಿರೀಕ್ಷೆ ಹುಟ್ಟಿಸುತ್ತದೆ ಕೂಡ.

ಈರಪ್ಪ ಎಂ. ಕಂಬಳಿ
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಕಾವೇರಿ ಭವನ, 'ಎಫ್' ಬ್ಲಾಕ್, ಬೆಂಗಳೂರು - ೯

# ಶಿಕ್ಷಣದ ಖಾಸಗೀಕರಣ ಒಂದು ಚಿಂತನೆ

ಪ್ರಾಚೀನ ಕಾಲದಿಂದಲೂ ಮಾನವನ ಪ್ರಗತಿಯ ನೆಲೆಯನ್ನು ರೂಪಿಸುತ್ತಿದ್ದ ಶಿಕ್ಷಣ ಇತ್ತೀಚಿನ ವರ್ಷಗಳಲ್ಲಿ ಒಂದು ವ್ಯಾಪಾರವಾಗಿ ಪರಿವರ್ತಿತಗೊಳ್ಳುತ್ತಿರುವುದು ವಿಷಾದನೀಯ ಸಂಗತಿ. ಮಾನವನ ಬದುಕನ್ನೇ ಒಟ್ಟಾಗಿ ವ್ಯಾಪಾರೀ ದೃಷ್ಟಿಯಿಂದ ಕಾಣುವ ಜಾಗತೀಕರಣ ಶಿಕ್ಷಣವನ್ನೂ ಸಹ ವ್ಯಾಪಾರೀ ದೃಷ್ಟಿಕೋನದಿಂದಲೇ ಕಾಣುತ್ತಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಶಿಕ್ಷಣ ಕ್ಷೇತ್ರದ ವ್ಯಾಪಾರೀಕರಣದಿಂದ ಭಾರತದಂತಹ ಬಹು ಸಂಸ್ಕೃತಿಯ ಸಂಕೀರ್ಣ ಸ್ವರೂಪದ ಸಮಾಜಕ್ಕೆ ಹೆಚ್ಚು ಹಾನಿಯುಂಟಾಗುತ್ತದೆ.

**ಬಿ.ಆರ್. ಶಶಿಧರ**



**ಜಾ**ಗತೀಕರಣದ ಕರಾಳ ಹಸ್ತಗಳು ಶಿಕ್ಷಣ ಕ್ಷೇತ್ರವನ್ನು ನಿಧಾನಕ್ಕೆ ಆವರಿಸುತ್ತಿವೆ. ಮಾನವನ ಮೂಲಭೂತ ಆವಶ್ಯಕತೆಗಳಲ್ಲಿ ಶಿಕ್ಷಣವೂ ಒಂದು. ಶಿಕ್ಷಣ ಇಲ್ಲದಿದ್ದರೆ ಆತ ಪಶುವಿಗೆ ಸಮಾನ. ಹಾಗೆ ನೋಡಿದರೆ ಹುಟ್ಟಿದ ಮಗುವಿನ ತೊದಲುನುಡಿಯನ್ನು ತಿದ್ದುವ ಅಮ್ಮನಿಂದ ಶಿಕ್ಷಣ ಆರಂಭವಾಗುತ್ತದೆ. ನಂತರ ಬದುಕಿನ ಬಗ್ಗೆ ಹಲವು ಪಾಠಗಳನ್ನು ಕಲಿಯುತ್ತಾ ಸಾಗುವ ಮಗು ಬೆಳೆಯುತ್ತಾ ಸಾಗಿದಂತೆ ಸಮಾಜ, ದೇಶ ವಿದೇಶಗಳ ರೀತಿ-ನೀತಿಗಳ ಬಗ್ಗೆ ತಿಳುವಳಿಕೆ ಪ್ರಜ್ಞೆ ಇತ್ಯಾದಿಗಳನ್ನು ಮೂಡಿಸಿಕೊಳ್ಳಬೇಕಾಗುತ್ತದೆ. ಆಧುನಿಕ ಕಾಲದಲ್ಲಿ ಮಾನವನ ಬದುಕು ಹಲವು ಸಂಕೀರ್ಣತೆಗಳಿಂದ ಕೂಡಿದೆ. ಸಮಾಜ ವಿಜ್ಞಾನಿಗಳಾಗಲಿ, ಶುದ್ಧ ವಿಜ್ಞಾನಿಗಳಾಗಲಿ ಈ ಜಗತ್ತಿನಲ್ಲಿ ಮಾನವನ ಬದುಕಿನ ಗುರಿಯ ಬಗ್ಗೆ ಸ್ಪಷ್ಟವಾಗಿ ಏನನ್ನೂ ಹೇಳಲಿಲ್ಲ. ಕಾಲಕಾಲದಲ್ಲಿ ಬದಲಾಗುವ ಮೌಲ್ಯಗಳ ಆಧಾರದ ಮೇಲೆ ಬದುಕಿನ ಗುರಿಯೂ ಬದಲಾಗುವುದು ಸಹಜ. ಉದಾಹರಣೆಗೆ, ಶಿಲಾಯುಗದಲ್ಲಿ ಬೇಟೆಯಾಡಿ ಆಹಾರ ಸೇವಿಸುವುದನ್ನೇ ಬದುಕಿನ ಏಕೈಕ ಗುರಿಯಾಗಿಟ್ಟುಕೊಂಡಿದ್ದ ಮಾನವ ಆಧುನೀಕರಣಗೊಳ್ಳುತ್ತಾ ಸಾಗಿದಂತೆ ಹಲವು ಹತ್ತು ಕ್ಷೇತ್ರಗಳಲ್ಲಿ ಆಸಕ್ತಿ ಬೆಳೆಸಿಕೊಳ್ಳುತ್ತಾ ತನ್ನ ಬದುಕನ್ನು ಜಟಿಲಗೊಳಿಸಿಕೊಂಡಿದ್ದಾನೆ. ವಿಜ್ಞಾನ ತಂತ್ರಜ್ಞಾನಗಳ ಅಗಾಧ ಪ್ರಗತಿ ಮಾನವನ ಬದುಕಿನ ದಿಕ್ಕನ್ನೇ ಬದಲಾಯಿಸಿಬಿಟ್ಟಿದೆ.

ಇವೆಲ್ಲದರ ಒಟ್ಟು ಪರಿಣಾಮವಾಗಿ ಸಾಮಾಜಿಕ ಮೌಲ್ಯಗಳು ತೀವ್ರ ಬದಲಾವಣೆಗೆ ಒಳಗಾಗಿವೆ. ಧರ್ಮ, ವಿಜ್ಞಾನಗಳ ನಡುವೆ ತಾತ್ವಿಕ ಸಂಘರ್ಷಗಳು ಕಂಡುಬಂದಿವೆ. ಮಾನವನ ಅನಿಯಂತ್ರಿತ ಮನಸ್ಸು ಮತ್ತು ವರ್ತನೆಗಳಿಗೆ ಕಡಿವಾಣ ಹಾಕಲು ಸೃಷ್ಟಿಸಲಾದ ಧರ್ಮಗಳು ಗೊಂದಲದ ಗೂಡುಗಳಾಗಿ ಅವೇ ಘರ್ಷಣೆಯ ಮೂಲ ಕಾರಣಗಳಾಗಿವೆ. ಜಾತಿ, ಮತ, ಪಂಥಗಳೆಂಬ ಕಗ್ಗಂಟುಗಳಿಂದ ಉದ್ಭವಿಸಿರುವ ಸಮಸ್ಯೆಗಳಿಂದ ಧರ್ಮ ಎಂದರೆ ಮಾನವ ಬೆಚ್ಚಿಬೀಳುವಂತಾಗಿದೆ.

ಇದೆಲ್ಲಾ ಏನೇ ಇರಲಿ, ಪ್ರಾಚೀನ ಕಾಲದಿಂದಲೂ ಮಾನವನ ಪ್ರಗತಿಯ ನೆಲೆಯನ್ನು ರೂಪಿಸುತ್ತಿದ್ದ ಶಿಕ್ಷಣ ಇತ್ತೀಚಿನ ವರ್ಷಗಳಲ್ಲಿ ಒಂದು ವ್ಯಾಪಾರವಾಗಿ ಪರಿವರ್ತಿತಗೊಳ್ಳುತ್ತಿರುವುದು ವಿಷಾದನೀಯ ಸಂಗತಿ. ಮಾನವನ ಬದುಕನ್ನೇ ಒಟ್ಟಾಗಿ ವ್ಯಾಪಾರೀ ದೃಷ್ಟಿಯಿಂದ ಕಾಣುವ ಜಾಗತೀಕರಣ ಶಿಕ್ಷಣವನ್ನೂ ಸಹ ವ್ಯಾಪಾರೀ ದೃಷ್ಟಿಕೋನದಿಂದಲೇ ಕಾಣುತ್ತಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಶಿಕ್ಷಣ ಕ್ಷೇತ್ರದ ವ್ಯಾಪಾರೀಕರಣದಿಂದ ಭಾರತದಂತಹ ಬಹು ಸಂಸ್ಕೃತಿಯ ಸಂಕೀರ್ಣ ಸ್ವರೂಪದ ಸಮಾಜಕ್ಕೆ ಹೆಚ್ಚು ಹಾನಿಯುಂಟಾಗುತ್ತದೆ. ಏಕೆಂದರೆ, ಈ ದೇಶದಲ್ಲಿ ಶತಮಾನಗಳಿಂದ ಶಿಕ್ಷಣವು ಕೆಲವೇ ಮೇಲ್ವರ್ಗಗಳ ವಶದಲ್ಲಿದ್ದು ಅಸಂಖ್ಯಾತ ಬಡ ಹಾಗೂ ಹಿಂದುಳಿದ ವರ್ಗ ಶಿಕ್ಷಣವಂಚಿತವಾಗಿತ್ತು. ಹೀಗಾಗಿ ಅಂತಹ ವರ್ಗದ ಬದುಕು ಅಸಹನೀಯವಾಗಿತ್ತು. ರಾಜಕಾರಣ ಹಾಗೂ ಧರ್ಮಗಳು ನಮ್ಮ ದೇಶದಲ್ಲಿ ಈ ಕೆಳವರ್ಗದವರನ್ನು ಶತಮಾನಗಳ ಕಾಲ ಶಿಕ್ಷಣದಂತಹ ಅತ್ಯಗತ್ಯ ಸವಲತ್ತಿನಿಂದ ವಂಚಿತಗೊಳಿಸಿದ್ದು ಅಕ್ಷಮ್ಯ ಅಪರಾಧವೇ ಸರಿ! ಇಂದಿಗೂ ಸಹ ಹಿಂದುಳಿದ, ಅನಕ್ಷರಸ್ಥ ವರ್ಗವನ್ನು ನಮ್ಮ ರಾಜಕೀಯ ಕ್ಷೇತ್ರ ಮತ ಬ್ಯಾಂಕ್ ಆಗಿಯೇ ಕಾಣುತ್ತಿರುವುದು ಆ ಕ್ಷೇತ್ರದ ಅವಕಾಶವಾದಿ ಚಿಂತನೆ ಹಾಗೂ ಯಜಮಾನ ಸಂಸ್ಕೃತಿಯ ಉಳಿಕೆಗೆ ಸರ್ವಯತ್ನ ಮಾಡುತ್ತಿರುವುದರ ಸ್ಪಷ್ಟ ಸಂಕೇತವೇ ಆಗಿದೆ. ಏಕೆಂದರೆ, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದೇಶದ ಸಮಸ್ತ ಅಭಿವೃದ್ಧಿ ನೀತಿಗಳು ರೂಪುಗೊಳ್ಳುವುದೇ ರಾಜಕೀಯ ನಿರ್ಧಾರಗಳಿಂದ. ನಮ್ಮನ್ನಾಳುವ ನಾಯಕರು ದಕ್ಷರೂ ದೂರದೃಷ್ಟಿ ಉಳ್ಳವರೂ ಪ್ರಗತಿಪರ ಚಿಂತಕರೂ ಇತಿಹಾಸ ಪ್ರಜ್ಞೆ ಉಳ್ಳವರೂ ಆಗಿರಬೇಕಾದದ್ದು ಅತ್ಯಂತ ಅಪೇಕ್ಷಣೀಯ. ಇವೆಲ್ಲಾ ಸಾಧ್ಯವಾಗಬೇಕಾದರೆ ರಾಜಕಾರಣಿಗಳಿಗೆ ಉತ್ತಮ ಶಿಕ್ಷಣ ನೀಡುವುದು ಅನಿವಾರ್ಯ.

ಭಾರತದಲ್ಲಂತೂ ಬ್ರಿಟಿಷರ ಆಗಮನದವರೆಗೂ ಶಿಕ್ಷಣ ಮುಚ್ಚಿದ ಸಂಪತ್ತಾಗಿತ್ತು. ಅಂದರೆ ಶಿಕ್ಷಣ ಸಾರ್ವತ್ರಿಕವಾಗಿರಲಿಲ್ಲವಾದ್ದರಿಂದ ಈ ದೇಶದ ಬಹುಸಂಖ್ಯಾತ ದುರ್ಬಲವರ್ಗದವರು ಅಕ್ಷರವಂಚಿತರಾಗಿದ್ದರು. ಸಮಾಜದ ಕೆಳವರ್ಗ ಹಾಗೂ ಮಹಿಳಾ ವರ್ಗವೂ ಸಹ ದುಡಿಮೆಯೊಂದನ್ನೇ ತನ್ನ ಕಾಯಕವನ್ನಾಗಿ ಮಾಡಿಕೊಂಡು ಮೂಕ ಸಂಕಟ ಅನುಭವಿಸುತ್ತಿದ್ದವು. ಕರ್ಮಫಲ, ಪಾಪ ಪುಣ್ಯದಂತಹ ಸಿದ್ಧಾಂತಗಳು ಅವರ ಹತಾಶೆಗೊಂಡ ನಿಟ್ಟುಸಿರಿಗೆ ಅಲ್ಪ ಸಾಂತ್ವನಗಳಾಗಿದ್ದವು. ಯಾವನೇ ಒಬ್ಬ ವ್ಯಕ್ತಿಯ ಸ್ಥಾನಮಾನವನ್ನು ಹುಟ್ಟಿನಿಂದಲೇ ನಿರ್ಧರಿಸುತ್ತಿದ್ದ ಜಾತಿಪದ್ಧತಿ ಮನುಷ್ಯ ಮನುಷ್ಯರ ನಡುವೆ ಅಸಹನೆಯ ಗೋಡೆಯನ್ನು ಎಬ್ಬಿಸಿತ್ತು. ಇದನ್ನೆಲ್ಲಾ ಪ್ರಶ್ನಿಸುವ ಧೈರ್ಯ ಅನಕ್ಷರಸ್ಥರಲ್ಲಿ ಇರಲಿಲ್ಲವಾದ್ದರಿಂದ ಮೇಲ್ವರ್ಗ ಎಲ್ಲಾ

ಸವಲತ್ತುಗಳನ್ನೂ ಲಜ್ಜೆಯಿಲ್ಲದೆ ಅನುಭವಿಸಿಕೊಂಡು ತನ್ನೆಲ್ಲಾ ದುಷ್ಟತನಗಳಿಂದ ಸಾಮಾಜಿಕ ಬದುಕನ್ನು ನಿಯಂತ್ರಿಸುತ್ತಿತ್ತು. ಇದಕ್ಕೆ ಅಧಿಕಾರಿಶಾಹಿಗಳ ಬೆಂಬಲವೂ ಇದ್ದುದರಿಂದ ಆ ವರ್ಗ ನಿಶ್ಚಿಂತವಾಗಿತ್ತು. ತಾವು ಶೋಷಣೆ ಮಾಡುವುದಕ್ಕೇ ಹುಟ್ಟಿದವರೆಂದು ಮೇಲ್ವರ್ಗ ಭಾವಿಸಿದರೆ, ಕೆಳವರ್ಗವು ತಾವು ಶೋಷಣೆಗೆ ಬಲಿಯಾಗುವುದಕ್ಕೇ ಜನಿಸಿದವರೆಂಬ ಮುಗ್ಧ ಭಾವನೆಗಳಿಂದ ಪ್ರತಿಭಟನೆಯ ಸೊಲ್ಲೆತ್ತದೆ ಮುದುಡಿ ಕುಳಿತಿತ್ತು. ೧೮ ಮತ್ತು ೧೯ನೇ ಶತಮಾನಗಳಲ್ಲಿ ಬ್ರಿಟಿಷರು ಭಾರತದಲ್ಲಿ ಜಾರಿಗೆ ತಂದ ಆಧುನಿಕ ಶಿಕ್ಷಣ ವ್ಯವಸ್ಥೆ ಇಂತಹ ಪರಿಸ್ಥಿತಿಗಳಲ್ಲಿ ಸಾಕಷ್ಟು ಸುಧಾರಣೆಗಳನ್ನು ತಂದಿತು. ಜನ ವಿದ್ಯಾವಂತರಾದಂತೆ ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಟಕ್ಕಿಳಿದರು. ಅದುವರೆಗೆ ಭೀಕರ ಕೀಳರಿಮೆಯಿಂದ ಕುಗ್ಗಿಹೋಗಿದ್ದ ಕೆಳವರ್ಗ ತಲೆಎತ್ತಿ ನಿಲ್ಲಲಾರಂಭಿಸಿತು. ಆದರೆ, ಮೇಲ್ವರ್ಗ ತನ್ನ ಜಾತಿ ಪ್ರಣೀತ ಕುಕೃತ್ಯಗಳಿಗಾಗಿ ಪಶ್ಚಾತ್ತಾಪಪಟ್ಟಿತೋ ಇಲ್ಲವೋ ತಿಳಿಯದು. ಏಕೆಂದರೆ, ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಗಾಂಧೀಜಿಯವರಂತಹ ಮಾನವತಾವಾದಿಯೂ ಕೂಡ ಹರಿಜನರಿಗೆ ರಾಜಕೀಯ ಮೀಸಲಾತಿಯನ್ನು ಕೆಲ ಕಾಲದವರೆಗಾದರೂ ವಿರೋಧಿಸಿದ್ದ ರೆಂಬುದು ವಿಪರ್ಯಾಸವೇ ಸರಿ. ಆದರೆ ಕೆಳವರ್ಗದವರ ಉನ್ನತಿಗಾಗಿ ಶ್ರಮಿಸಿದ ದಿಟ್ಟ ಹೋರಾಟಗಾರ ಡಾ|| ಬಿ. ಆರ್. ಅಂಬೇಡ್ಕರ್ ಹರಿಜನರೇ ಮುಂತಾದ ದಲಿತ ವರ್ಗಗಳ ಉದ್ಧಾರಕ್ಕೆ ಶಿಕ್ಷಣದ ಅಗತ್ಯವನ್ನೂ, ಅದಕ್ಕಾಗಿ ರಾಜಕೀಯ ಪಾಲುದಾರಿಕೆಯ ಆವಶ್ಯಕತೆ ಯನ್ನೂ ಒತ್ತಿಹೇಳಿದರು. ಬ್ರಿಟಿಷ್ ಸರ್ಕಾರವೂ ಇದಕ್ಕೆ ಸೂಕ್ತವಾಗಿ ಸ್ಪಂದಿಸಿ ಸಾರ್ವತ್ರಿಕ ಶಿಕ್ಷಣವನ್ನು ಭಾರತದಲ್ಲಿ ಜಾರಿಗೊಳಿಸಿತು. ಸಾಂಪ್ರದಾಯಿಕ ಶಿಕ್ಷಣಕ್ಕೆ ಬದಲಾಗಿ ವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳ ಬೋಧನೆಗೆ ಹೆಚ್ಚಿನ ಆದ್ಯತೆ ನೀಡಲಾಯಿತು. ಇಷ್ಟಾದರೂ ಮೆಕಾಲೆ ಪ್ರಣೀತ ಬ್ರಿಟಿಷ್ ಶಿಕ್ಷಣ ವ್ಯವಸ್ಥೆಯು ಕೇವಲ ಗುಮಾಸ್ತರನ್ನು ಸೃಷ್ಟಿಸುವ ಉದ್ದೇಶ ಹೊಂದಿತ್ತೆಂಬ ಅಪವಾದ ಹೊತ್ತಿದೆ. ಇದರಲ್ಲಿ ದುರಭಿಮಾನ ಹಾಗೂ ದ್ವೇಷದ ಅಂಶಗಳು ಇರಬಹುದಾದರೂ ಬಹುಸಂಖ್ಯಾತ ಭಾರತೀಯರು ಆಧುನಿಕ ಜಗತ್ತಿನ ಆಗುಹೋಗುಗಳ ಬಗ್ಗೆ ಸ್ವಲ್ಪಮಟ್ಟಿಗಾದರೂ ತಿಳುವಳಿಕೆ ಹೊಂದಲು ಬ್ರಿಟಿಷ್ ಶಿಕ್ಷಣ ವ್ಯವಸ್ಥೆಯು ಸಹಾಯಕ ವಾಗಿದ್ದನ್ನು ನಿರಾಕರಿಸುವಂತಿಲ್ಲ. ಅಲ್ಲದೆ ಇದು ಭಾರತೀಯರ ಆತ್ಮವಿಮರ್ಶೆ ಹಾಗೂ ಸ್ವಾಭಿಮಾನದ ಬದುಕಿಗೆ ತನ್ನದೇ ಆದ ಕೊಡುಗೆಗಳನ್ನು ನೀಡಿತು. ಹೀಗಾಗಿ ಬ್ರಿಟಿಷರು ನಮ್ಮ ದೇಶದಿಂದ ತೊಲಗಿ ೫೯ ವರ್ಷಗಳು ಕಳೆದರೂ, ಅವರು ಜಾರಿಗೆ ತಂದ ಶಿಕ್ಷಣ ಪದ್ಧತಿ, ಸಣ್ಣಪುಟ್ಟ ಬದಲಾವಣೆಗಳಿಗೆ ಒಳಗಾದರೂ ಈಗಲೂ ಜನಪ್ರಿಯವಾಗಿದೆ. ಅದರ ಒಳಿತು ಕೆಡುಕುಗಳು ಬಹು ಚರ್ಚಾಸ್ಪದ ವಿಚಾರವಾದ್ದರಿಂದ ಆ ಬಗ್ಗೆ ನಮ್ಮ ನಾಡಿನ ಬುದ್ಧಿ ಜೀವಿಗಳೂ ಶಿಕ್ಷಣ ತಜ್ಞರೂ ರಾಜಕೀಯ ನೇತಾರರೂ ಒಂದೆಡೆ ಕಲೆತು ವಿಮರ್ಶಿಸ ಬೇಕಾದ್ದು ಇಂದಿನ ಅಗತ್ಯವಾಗಿದೆ. ಇಷ್ಟಾದರೂ ಈ ಲೇಖನದ ಮುಖ್ಯ ಉದ್ದೇಶ ಪ್ರಸ್ತುತ ಶಿಕ್ಷಣ ವ್ಯವಸ್ಥೆ ಎತ್ತ ಸಾಗಿದೆ ಎಂಬುದರ ಬಗ್ಗೆ ಒಂದು ಕಿರುಚಿತ್ರಣವನ್ನು ನೀಡುವ ಪ್ರಯತ್ನದ ಭಾಗವಾದ್ದರಿಂದ ಜಾಗತೀಕರಣದ ಈ ದಶಕಗಳಲ್ಲಿ ಉಳಿದೆಲ್ಲಾ ಕ್ಷೇತ್ರಗಳಂತೆ ಶಿಕ್ಷಣಕ್ಷೇತ್ರವೂ ಪೂರ್ಣವಾಗಿ ಹಂತಹಂತವಾಗಿ ಖಾಸಗೀಕರಣಗೊಳ್ಳುತ್ತಿರುವ ಆತಂಕಕಾರಿ ಅಂಶವನ್ನು ಗಮನಿಸಲೇಬೇಕಾಗಿದೆ. ಏಕೆಂದರೆ, ಖಾಸಗೀರಂಗ ಲಾಭದ ದೃಷ್ಟಿಯನ್ನೇ ಪ್ರಧಾನ ಗುರಿಯನ್ನಾಗಿ ಇಟ್ಟುಕೊಳ್ಳುತ್ತದೆ. ಉಳಿದೆಲ್ಲಾ ಕ್ಷೇತ್ರಗಳಂತೆ ಶಿಕ್ಷಣವೂ ಖಾಸಗಿ ಯವರ ದೃಷ್ಟಿಯಲ್ಲಿ ಒಂದು ವ್ಯಾಪಾರಿ ಸರಕಾಗುತ್ತದೆ. ಇದರಿಂದ ಮೂಲಭೂತ ಸೌಕರ್ಯ ಗಳಿಂದ ವಂಚಿತವಾಗಿರುವ ಈ ನಾಡಿನ ಅಸಂಖ್ಯಾತ ಬಡವರ್ಗಗಳಿಗೆ ಶಿಕ್ಷಣ ಎನ್ನುವುದು ಗಗನಕುಸುಮವಾಗುತ್ತದೆ. ಎರಡು ಹೊತ್ತಿನ ಊಟಕ್ಕೆ ಪರದಾಡುತ್ತಿರುವ ನಮ್ಮ ನಾಡಿನಲ್ಲಿ ಶಿಕ್ಷಣಕ್ಷೇತ್ರವೂ ವಿದೇಶೀ ಶಿಕ್ಷಣಕ್ಷೇತ್ರದೊಂದಿಗೆ ಸ್ಪರ್ಧೆಗೆ ಇಳಿಯಬೇಕೆಂಬ ವಿಚಾರರಹಿತ ಭಾಷಣ ಬಿಗಿಯುವ ಬುದ್ಧಿಜೀವಿಗಳಿಗೆ ನಮ್ಮ ನಾಡಿನಲ್ಲೇನೂ ಕೊರತೆ ಇಲ್ಲ. ಬದಲಿ ವ್ಯವಸ್ಥೆಯ ಬಗ್ಗೆ ಕಿಂಚಿತ್ತೂ ಚಿಂತಿಸದ ಇಂತಹ ಸ್ವಯಂಘೋಷಿತ ಬುದ್ಧಿಜೀವಿಗಳ ಬೆಂಬಲವೇ ಶಿಕ್ಷಣಕ್ಷೇತ್ರದ ಖಾಸಗೀ ವ್ಯಾಪಾರೀ ಬುದ್ಧಿಯ ತಿಮಿಂಗಿಲಗಳಿಗೆ ವಿಶೇಷ ಬಲವನ್ನು ಒದಗಿಸುತ್ತಿದ್ದು ಬಹುಸಂಖ್ಯೆಯಲ್ಲಿ ಸಾಂಪ್ರದಾಯಿಕ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿ ಬಳಗ ಭೀಕರ ಗೊಂದಲದಲ್ಲಿ ಮುಳುಗಿದೆ. ಆತ್ಮವಿಶ್ವಾಸ ತುಂಬಬೇಕಿದ್ದ ಶಿಕ್ಷಣ ಅವರನ್ನು ವಿಪರೀತ ಕೀಳರಿಮೆಯಿಂದ ಬಳಲುವಂತೆ ಮಾಡಿದೆ. ಶಿಕ್ಷಣದ ಆಮೂಲಾಗ್ರ ಬದಲಾವಣೆಯ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರಿಸುತ್ತಿರುವ ಶಿಕ್ಷಣ ತಜ್ಞರೂ, ರಾಜಕೀಯ ಮುಖಂಡರೂ ವಿದ್ಯಾರ್ಥಿವರ್ಗದ ಇಂದಿನ ದಿಕ್ಕೆಟ್ಟ ಪರಿಸ್ಥಿತಿಗೆ ಮೂಲ ಕಾರಣರಾಗಿದ್ದಾರೆ. ದೇಶೀ ಸಂಪತ್ತು, ಸಂಸ್ಕೃತಿಯನ್ನು ಬೆಳೆಸುವುದರ ಜೊತೆಗೆ ಪರಿಣಾಮಕಾರಿ ದೇಶೀ ಶಿಕ್ಷಣದ ಕಡೆಗೆ ಗಂಭೀರ ಚಿಂತನೆ ಮಾಡುವ ಸಣ್ಣ ಪ್ರಯತ್ನವೂ ಸಾಗದಿರುವುದು ನಮ್ಮ ದೇಶದ ಶಿಕ್ಷಣ ಕ್ಷೇತ್ರದ ಬಹುದೊಡ್ಡ ವೈಫಲ್ಯವಾಗಿದೆ. ಇಲ್ಲಿ ದೇಶೀ ಶಿಕ್ಷಣ ಎಂದರೆ ಈ ನೆಲದ ಸಂಸ್ಕೃತಿಯನ್ನು ಅರ್ಥೈಸಿಕೊಂಡು ಸಂಪತ್ತು ಸೃಷ್ಟಿಸುವ, ಆ ಮೂಲಕ ಉದ್ಯೋಗ ಸೃಷ್ಟಿ ಯಂತಹ ಆರ್ಥಿಕ ಚಟುವಟಿಕೆಗಳನ್ನು ರೂಪಿಸಲು ಪೂರಕವಾಗುವ ಶಿಕ್ಷಣ ಎಂದರ್ಥ. ಭಾರತದಂತಹ ವಿಶಾಲ, ಬಹು ಸಂಸ್ಕೃತಿಯ ಮತ್ತು ಬಹುಸಂಖ್ಯಾತ ಬಡಜನರಿಂದ ಕೂಡಿರುವ ದೇಶಕ್ಕೆ ವಿದೇಶೀ ಮಾದರಿಯ ಶಿಕ್ಷಣ ಇಂದು ಅಗತ್ಯವೇ ಎಂದು ಪ್ರಶ್ನಿಸಿ ಕೊಳ್ಳುತ್ತಲೇ ಬದಲಿ ಶಿಕ್ಷಣ ವ್ಯವಸ್ಥೆಯ ಬಗ್ಗೆ ವ್ಯವಸ್ಥಿತ ಅಧ್ಯಯನ ನಡೆಸಲೇಬೇಕಾಗಿದೆ. ಶಿಕ್ಷಣ ಮತ್ತು ನಿರುದ್ಯೋಗ ನಿವಾರಣೆಯ ನಡುವೆ ನೇರ ಸಂಬಂಧವಿರುವುದನ್ನು ಅಲ್ಲಗಳೆಯುವಂತಿಲ್ಲ. ಶಿಕ್ಷಣದ ಖಾಸಗೀಕರಣ ನಡೆಯುತ್ತಿರುವ ಈ ಹೊತ್ತಿನಲ್ಲಿ ಮೇಲ್ಕಂಡ ಎಲ್ಲಾ ಸಮಸ್ಯೆಗಳಿಗೆ ಖಾಸಗಿಯವರಿಂದ ಪರಿಹಾರ ದೊರೆತೀತು ಎಂದು ಭಾವಿಸುವುದು ಮೂರ್ಖತನವಾದೀತು. ಶಿಕ್ಷಣ ಮತ್ತು ಉದ್ಯೋಗವನ್ನು ಮೂಲಭೂತ ಹಕ್ಕನ್ನಾಗಿ ಪರಿಗಣಿಸಿರುವ ನಮ್ಮ ಸಂವಿಧಾನದ ಆಶಯಗಳಿಗೆ ಸರ್ಕಾರ ಮಾತ್ರ ಸ್ಪಂದಿಸಿ ಕಾರ್ಯ ಪ್ರವೃತ್ತವಾಗಲು ಸಾಧ್ಯ. ಆದ್ದರಿಂದ ಶಿಕ್ಷಣದ ಖಾಸಗೀಕರಣವನ್ನು ತಡೆಯುವುದು ಸದ್ಯಕ್ಕೆ ನಾಡಿನ ಹಿತಚಿಂತಕರ ಆದ್ಯ ಕರ್ತವ್ಯವಾಗಿದೆ.

ಬಿ.ಆರ್. ಶಶಿಧರ
ಇತಿಹಾಸ ಉಪನ್ಯಾಸಕ, ಸರ್ಕಾರಿ ಕಾಲೇಜು, ಆಲೂರು, ಹಾಸನ ಜಿಲ್ಲೆ

# ಧರ್ಮ ವಿಜ್ಞಾನ ಮತ್ತು ಸಮಾಜ

**ಜಿ. ಟಿ. ನಾರಾಯಣರಾವ್**

''ಧರ್ಮ ಮತ್ತು ವಿಜ್ಞಾನ ಇವೆರಡರಲ್ಲಿ ಯಾವುದು ಶ್ರೇಷ್ಠ ?'' ಇಂಥ ಶುಷ್ಕ ಪ್ರಶ್ನೆ ಮತ್ತು ತತ್ಸಂಬಂಧವಾದ ಉದ್ರಿಕ್ತ ಚರ್ಚೆ ಈಚಿನ ದಿನಗಳಲ್ಲಿ ಅತಿರೇಕ ಸ್ಥಿತಿ ತಲಪಿರುವುದು ಆರೋಗ್ಯದ ಲಕ್ಷಣವಲ್ಲ. ಶಾಲಾ ದಿವಸಗಳಲ್ಲಿ ನಾವೆಲ್ಲರೂ 'ಏಳು ಕುರುಡರು ಮತ್ತು ಒಂಟಿ ಆನೆ' ಕಥೆ ಕೇಳಿದ್ದೇವೆ.

ಆನೆಯನ್ನು ಸ್ಪರ್ಶಿಸಿ ತಿಳಿದ ಒಬ್ಬ ಹೇಳುತ್ತಾನೆ, ''ಆನೆಯೊಂದು ಭಾರೀ ಮರ.'' ಇನ್ನೊಬ್ಬ ನುಡಿಯುತ್ತಾನೆ, ''ಅಲ್ಲಲ್ಲ, ಅದೊಂದು ಭರ್ಜರಿ ಹಗ್ಗ'' ಮಗದೊಬ್ಬ ನಡುವೆ ಬಾಯಿ ಹಾಕಿ ಅರಚುತ್ತಾನೆ, ''ನೀವಿಬ್ಬರೂ ಮೂರ್ಖರು. ನಿಜಕ್ಕೂ ಆನೆಯೊಂದು ಅಕ್ಕಿ ಕೇರುವ ಮೊರ !'' ಕಣ್ಣಿರುವ ನಾವು ಈ ಕಥೆ ಕೇಳಿ ಹೊಟ್ಟೆ ಹುಣ್ಣಾಗುವಂತೆ ನಗುತ್ತೇವೆ. ಧರ್ಮ ಮತ್ತು ವಿಜ್ಞಾನ ಕುರಿತಂತೆ ಕೂಡ ನಾವು ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ತಳೆಯುವ ದೃಷ್ಟಿ ಹಾಗೂ ವರ್ತಿಸುವ ಶೈಲಿ ಕುರುಡರದ್ದಕ್ಕಿಂತ ವಿಭಿನ್ನವಾದುದಲ್ಲ.

''ವಿಜ್ಞಾನದ ಆವಿಷ್ಕಾರಗಳು ಪ್ರಪಂಚವನ್ನು ವಿನಾಶದ ಅಂಚಿಗೆ ಕೊಂಡೊಯ್ದಿವೆ. ವಿಜ್ಞಾನಕ್ಕೆ ಧರ್ಮದ ಕಡಿವಾಣ ತೊಡಿಸುವುದೊಂದೇ ಸಮರ್ಪಕ ಪರಿಹಾರ,'' ಎಂದು ಧಾರ್ಮಿಕ ಮುಖಂಡರು ಆರ್ಭಟಿಸುತ್ತಾರೆ. ಇದಕ್ಕೆ ಪ್ರತಿಯಾಗಿ, ''ಧರ್ಮ ನಮ್ಮನ್ನು ಮಧ್ಯಯುಗೀನ ಅಂಧಕಾರದ ಕೂಪಕ್ಕೆ ತಳ್ಳುವ ಸಾಧನ, ಕಣ್ಣುಗಳಿಗೆ ಕಟ್ಟಿದ ಕಪ್ಪಡಿ. ಇದರ ಉಚ್ಚಾಟನೆಯಾದ ಹೊರತು ಸಾಮಾಜಿಕ ಸ್ವಾಸ್ಥ್ಯ ನೆಲಸದು,'' ಎಂಬುದಾಗಿ ವಿಜ್ಞಾನಿಗಳು ಘೋಷಿಸುತ್ತಾರೆ.

ನಾಗರಿಕತೆ ಅಭಿವರ್ಧಿಸಿ ಬಂದಿರುವ ಪರಿಯನ್ನು ಚಿಕಿತ್ಸಕವಾಗಿ ಪರಾಂಬರಿಸಿದರೆ ತಿಳಿಯುವುದೇನು ?

*ಇರುವುದೊಂದೇ ಆನೆ, ಎಲ್ಲರೂ ಕುರುಡರೇ !*
*ಪರಿಪರಿಯ ಭಾಷೆಯಲ್ಲಿ ಬಣ್ಣಿಪರು, ಯಾವುದೂ*
*ಪರಿಪೂರ್ಣವೆನ್ನಿಸದು : ಭಾಗವೆಂದಾದರೂ*
*ಅರಿವುದೇ ಪೂರ್ಣತೆಯ ಚಿತ್ರವನು ? ಅತ್ರಿಸೂನು*

ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಮೂಲಭೂತ ಚಿಂತನೆಗೆ ಶರಣಾಗುವುದೊಂದೇ ಸರಿಯಾದ ಕ್ರಮ.

**ಮಾನವನ ವೈಶಿಷ್ಟ್ಯ**

ನಿಸರ್ಗ ತನ್ನ ಶಿಶುವಾದ ಮಾನವನಲ್ಲಿ ನಾಲ್ಕು ವಿಶಿಷ್ಟ ಸೌಕರ್ಯಗಳನ್ನು ಗರ್ಭಿಸಿಟ್ಟಿದೆ : ಸ್ಮರಣೆ, ಚಿಂತನೆ, ಮಾತು ಮತ್ತು ಕೃತಿ. ನಾಗರಿಕತೆಯ ಮುನ್ನಡೆಯಲ್ಲಿ ಇವು ವಹಿಸಿರುವ ಮತ್ತು ವಹಿಸುತ್ತಿರುವ ಪಾತ್ರ ಸರ್ವವೇದ್ಯ. ಪ್ರಾಣಿಗಳಿಗೆ ಈ ಸೌಕರ್ಯಗಳಿಲ್ಲ. ಅವುಗಳಲ್ಲಿ ಆಯಾ ಪ್ರಾಣಿಯ ಸ್ವಭಾವ ಅದರ ವರ್ತನೆಯನ್ನು ನಿಯಂತ್ರಿಸುತ್ತದೆ, ಯಾವುದೇ ಸ್ಮರಣೆ ಅಥವಾ ಚಿಂತನೆ ಅಲ್ಲ. ಆದಿಮಾನವನಿಂದ ತೊಡಗಿ ಆಧುನಿಕ ಮಾನವನವರೆಗೆ ಆತನ ಚಿಂತನೆಗೆ ಸದಾ ಪ್ರೇರಣೆ ಊಡುವ ಏಕೈಕ ಸೆಲೆ ನಿಸರ್ಗ ಅಥವಾ ವ್ಯಾಪಕವಾಗಿ ವಿಶ್ವ. ಇದನ್ನು ಎರಡು ವಿಭಾಗಗಳಾಗಿ ಪರಿಗಣಿಸುವುದು ರೂಢಿ. ಇದು ಅಧ್ಯಯನದ ಸೌಕರ್ಯಕ್ಕಾಗಿ ಮಾನವ ಮಾಡಿಕೊಂಡಿರುವ ಏರ್ಪಾಡು ಮಾತ್ರ. ಒಂದನೆಯದು ನಮ್ಮ ಸುತ್ತಮುತ್ತಲಿನ ಭೌತ ಜಗತ್ತು : ನೆಲ, ಜಲ, ವಾಯು, ಬೆಳಕು, ಶಾಖ, ಸೂರ್ಯ, ಚಂದ್ರ, ನಕ್ಷತ್ರ, ಜೀವಿ, ಅಜೀವಿ ಎಲ್ಲವನ್ನೂ ಒಳಗೊಂಡಿರುವ ಬೃಹದ್ವ್ಯವಸ್ಥೆ; ನಮ್ಮ ಇಂದ್ರಿಯಗಳಿಂದ ಇದರ ಗುಣ ಲಕ್ಷಣಗಳನ್ನು ಅರಿತು ಅಭ್ಯಸಿಸಬಹುದು. ಎರಡನೆಯದು ಈ ಭೌತ ಜಗತ್ತಿನ ಆಚೆಗಿದೆಯೆಂದು ನಮಗೆ ಭಾಸವಾಗುವ ಆದರೆ ಎಂದೂ ಇಂದ್ರಿಯಗಮ್ಯವಾಗದ ಅಮೂರ್ತ ಜಗತ್ತು: ಚಂದ್ರರಹಿತ ನಿರ್ಮೇಘ ರಾತ್ರಿವೇಳೆ ಒಂಟಿಯಾಗಿ ಬೆಟ್ಟದ ಕೊಡಿಯಲ್ಲಿ ನಿಂತು ಆಕಾಶವನ್ನು ಏಕಾಗ್ರಚಿತ್ತನಾಗಿ ದಿಟ್ಟಿಸುವಾಗ ಮನದೊಳಗೆ ಮೂಡುವ ಹೊಳಹು ಇದರ ಮೂಲ.

ಮೊದಲನೆಯದು ವಿಜ್ಞಾನದ ಒರತೆಗೆ ಕಾರಣ, ಎರಡನೆಯದು ಧರ್ಮದ ಉಗಮಕ್ಕೆ ಪ್ರೇರಣೆ. ಇನ್ನಷ್ಟು ನಿಖರವಾಗಿ ಹೇಳುವುದಾದರೆ, ''ಭೌತಜಗತ್ತಿನೊಂದಿಗೆ ಮಾನವನ ತಾರ್ಕಿಕ ಮತಿ ಕಾರ್ಯ-ಕಾರಣ ಪಾತಳಿಯಲ್ಲಿ ವರ್ತಿಸಿದಾಗ ಆತನ ಮನದೊಳಗೆ ಮಿನುಗುವ ಅರಿವೇ ವಿಜ್ಞಾನ. ಮಾನವನ ಕುತೂಹಲದೀಪ್ತ ಮತಿ ಅಮೂರ್ತ ಜಗತ್ತಿನೊಂದಿಗೆ ಅಂತರ್ಬೋಧಾತ್ಮಕವಾಗಿ ವರ್ತಿಸಿದಾಗ ಸ್ಫುರಿಸುವ ಭಾವವೇ ಧರ್ಮ.'' ಆದ್ದರಿಂದ ವಿಜ್ಞಾನ ಮತ್ತು ಧರ್ಮ ಎರಡೂ ಮಾನವಕೃತ ಜ್ಞಾನ ಪ್ರಕಾರಗಳು, ನಿಸರ್ಗದತ್ತ ವರಗಳಲ್ಲ. ಇವು ಉಪಜ್ಞೆಗಳು, ಆವಿಷ್ಕಾರಗಳು ಅಲ್ಲ. ಈ ಮಾನವ ಸೃಷ್ಟಿಗಳ ನಡುವೆ ಶ್ರೇಷ್ಠ, ನಿಕೃಷ್ಟ ಎಂಬ ತಾರತಮ್ಯ ಎಣಿಸುವವರು ಗಾವಿಲರು, ಉಭಯ ಪ್ರಕಾರಗಳ ಬಗೆಗೂ ಸಮಾನ ಅಜ್ಞರು.

**ಧರ್ಮದ ಮೂಲ**

ಹಿಂದೆ ಸೂಚಿಸಿದಂತೆ ಬೆಟ್ಟದ ಕೊಡಿಯಲ್ಲಿ ಏಕಾಕಿ ಮತ್ತು ಏಕಾಂಗಿಯಾಗಿ (ಒಂಟಿಯಾಗಿ ಮತ್ತು ಅಂತರ್ಮುಖಿಯಾಗಿ) ನಿಂತು ವಿಶ್ವಪ್ರಜ್ಞೆಯೊಂದಿಗೆ ಲೀನನಾದಾಗ ಮನದೊಳಗೆ ಮಿಡಿಯುವ ಭಾವವೇನು ? ಋಗ್ವೇದದ ಉದ್ಗಾರ, ''ದೇವಸ್ಯ ಪಶ್ಯ ಕಾವ್ಯಂ ನ ಮಮಾರ ನ ಜೀರ್ಯತಿ'' (ದೇವನ ಕಾವ್ಯ ನೋಡು ! ಅದಕ್ಕೆ ಕ್ಷಯವಿಲ್ಲ, ಮರಣವೂ ಇಲ್ಲ.)

ಡಿವಿಜಿಯವರ ಮೂರು ಪದ್ಯಗಳನ್ನು ಗಮನಿಸಬಹುದು :

*ಮೇಲೆ ನೋಡೆ ಕಣ್ಣ ತಣಿಪ ನೀಲಪಟದಿ ವಿವಿಧ ರೂಪ*
*ಜಾಲಗಳನು ಬಣ್ಣಿಸಿರ್ಪ ಚಿತ್ರಚತುರನಾರ್*
*ಕಾಲದಿಂದೆ ಮಾಸದಾ ವಿಚಿತ್ರವೆಸಪನಾರ್॥*

*ಅವನ ಕೃತಿಯ ನೋಡಿ ಮಣಿವೆವವನ ದನಿಯ ಕೇಳೆ ನಲಿವೆ –*
*ವವನ ಭಿಕ್ಷೆಯುಂಡು ಬೆಳೆವೆವವನನರಿಯೆವು*
*ಅವನ ಲೀಲೆಗಳನು ಕಾಣ್ಬೆವವನ ಕಾಣೆವು ॥*

*ಬಾನಾಚೆಯಿಂ ವಿಶ್ವಸತ್ತ್ವ ತಾನಿಳಿದಿಳೆಗೆ*
*ನಾನೆನುವ ಚೇತನದಿ ರೂಪಗೊಂಡಿಹುದೋ ?*
*ನಾನೆನುವ ಕೇಂದ್ರದಿನೆ ಹೊರಟ ಸತ್ತ್ವದ ಪರಿಧಿ*
*ಬಾನಾಚೆ ಹಬ್ಬಿಹುದೊ ? ಮಂಕುತಿಮ್ಮ ॥*

ಇಲ್ಲಿಯ 'ಅವನು' ಯಾರು ? ಮಾನವನ ಕಲ್ಪನೆಯಲ್ಲಿ ಅವನು 'ದೇವರು' ಅಥವಾ 'ಭಗವಂತ'. ಇದೇ ಧರ್ಮದ ಆಕರ. ಧರ್ಮವನ್ನು ನಿತ್ಯಪ್ರವಾಹೀ ಗಂಗಾನದಿಯೆಂದು ಭಾವಿಸಿದರೆ ದೇವರು ಇದರ ಗಂಗೋತ್ರಿ. ವಿಶ್ವದ ಅಖಂಡತೆ ಮತ್ತು ನೂತನತೆಗಳನ್ನು ಧರ್ಮ ಪ್ರತೀಕಿಸುತ್ತದೆ. ಇದೊಂದು ಆಧ್ಯಾತ್ಮಿಕ, ಅಂದರೆ ಭೌತಾತೀತ ಚಿಂತನೆ. ಇದು ಭಗವಂತ, ನೀತಿ, ಸತ್ಯ, ಸದಾಚಾರ ಮುಂತಾದ ಜೀವನೋತ್ಕರ್ಷಕ ಮತ್ತು ಉದ್ದೀಪಕ ಭಾವಗಳ ಸೆಲೆ. ಆಯಾ ವ್ಯಕ್ತಿಯ ನಂಬಿಕೆಯನ್ನು ಪ್ರಭಾವಿಸುವ ಆಂತರಿಕ ಪ್ರೇರಣೆ. ನಂಬಿಕೆ ಎನ್ನುವುದೊಂದು ವೈಯಕ್ತಿಕ ಭಾವನೆ. ಅದರ ಪರಿಣಾಮವಾಗಿ ಆ ವ್ಯಕ್ತಿ ಸಮಾಜದಲ್ಲೊಬ್ಬ ಸಭ್ಯ ಸುಸಂಸ್ಕೃತ ವ್ಯಕ್ತಿಯಾಗಿ ಬಾಳುತ್ತಿದ್ದಾಗ ಮಾತ್ರ ಅದಕ್ಕೆ ಬೆಲೆ. ಅಂದ ಮಾತ್ರಕ್ಕೆ ಅದು ಇನ್ನೊಬ್ಬನ ನಂಬಿಕೆ ಆಗಬೇಕಾಗಿಲ್ಲ. ಜನಗಳೆಷ್ಟೋ ನಂಬಿಕೆಗಳಷ್ಟು. ಮುಪ್ಪಿನ ಷಡಕ್ಷರಿಯ ನುಡಿ ಗಮನಿಸಿ :

*ಅವರವರ ದರುಶನಕೆ ಅವರವರ ವೇಷದಲಿ*
*ಅವರವರಿಗೆಲ್ಲ ಗುರು ನೀನೊಬ್ಬನೆ ।*
*ಅವರವರ ಭಾವಕ್ಕೆ ಅವರವರ ಪೂಜೆಗಂ*
*ಅವರವರಿಗೆಲ್ಲ ಶಿವ ನೀನೊಬ್ಬನೆ ॥*

ಹೀಗೆ ವೈಯಕ್ತಿಕ ನಂಬಿಕೆಯನ್ನು ಆಧರಿಸಿ ದೇವರು, ಧರ್ಮ, ನಡವಳಿಕೆ ಮುಂತಾದ ಪರಿಕಲ್ಪನೆಗಳು ಕ್ರಮೇಣ ರೂಪುಗೊಂಡಿವೆ. ಸಮಾಜದಲ್ಲಿ ನಮ್ಮ ನಡತೆಯನ್ನು ನಿಯಂತ್ರಿಸುವ ಆಚಾರಸಂಹಿತೆಯೇ ಧರ್ಮ. ಬಸವಣ್ಣ ವಿಧಿಸಿದ್ದಾರೆ, ''ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯ

ಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ – ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮ ದೇವರನೊಲಿಸುವ ಪರಿ.'' ಅವರದೇ ಇನ್ನೊಂದು ನುಡಿ ಗಮನಿಸಬೇಕು, ''ದಯವಿಲ್ಲದ ಧರ್ಮವ್ಯಾವುದಯ್ಯ, ದಯವೇ ಬೇಕು ಸರ್ವ ಪ್ರಾಣಿಗಳೆಲ್ಲದರಲ್ಲಿ! ದಯವೇ ಧರ್ಮದ ಮೂಲವಯ್ಯ. ಕೂಡಲಸಂಗಯ್ಯನಂತಲ್ಲದೊಲ್ಲ ಕಂಡಯ್ಯ.''

ಇಲ್ಲಿಯ ವಿವರಣೆಯಿಂದ ಒಂದಂಶ ಸ್ಪಷ್ಟ: ಧರ್ಮವೆಂಬುದೊಂದು ಜ್ಞಾತೃನಿಷ್ಠಬಲ (ಅಥವಾ ವ್ಯಕ್ತಿ ನಿಷ್ಠಬಲ); ನಿಸರ್ಗದಲ್ಲಿ ಇದನ್ನು ಸಾಧಿಸಲಾಗುವುದಿಲ್ಲ. ಧರ್ಮ ತಾನೇ ವಿಶ್ವನಾಯಕ ಎಂಬ ನಿರಂಕುಶ ಮನೋಭಾವ ತಳೆಯದಂತೆ ಅದಕ್ಕೆ ಕಡಿವಾಣ ತೊಡಿಸುವುದು ಅಗತ್ಯವೆಂಬುದು ಕ್ರಮೇಣ ಅನುಗತವಾಯಿತು. ಯಾರು ಈ ಹೊಣೆ ಹೊರಬೇಕು ?

**ವಿಜ್ಞಾನದ ಮೂಲ**

ಆದಿಮಾನವನ ಕುತೂಹಲಾವಿಷ್ಟ ಮತಿ ಬಿದಿರ ಮೆಳೆಯಲ್ಲಿಯ ಗಳುಗಳಲ್ಲಿ ಪರಸ್ಪರ ತಿಕ್ಕಾಟದಿಂದ ಬೆಂಕಿ ಹೊಗೆದದ್ದನ್ನು ನೋಡಿ ಅಚ್ಚರಿಪಟ್ಟಿರಬಹುದು, ಕಲ್ಲು ತುಂಡುಗಳ ಆಕಸ್ಮಾತ್ ಚಕಮಕಿಯಲ್ಲಿ ಬೆಂಕಿಯ ಕಿಡಿ ರಟ್ಟಿದುದನ್ನು ಕಂಡು ಹೆದರಿರಬಹುದು, ದಟ್ಟ ಕಾಡೊಂದು ಪೂರ್ತಿ ಅಗ್ನಿಗೆ ಆಹುತಿ ಆದುದನ್ನು ಗಮನಿಸಿ ಭಯಗ್ರಸ್ತವಾಗಿರಬಹುದು, ಇತ್ಯಾದಿ. ಇವೆಲ್ಲ ಅನುಭವಗಳೂ ಹೆಪ್ಪುಗಟ್ಟಿ ''ಘರ್ಷಣೆಯಿಂದ ಶಾಖ, ಶಾಖದಿಂದ ಬೆಂಕಿ, ಬೆಂಕಿಯಿಂದ ಜೀವನ ಸೌಲಭ್ಯ'' ಎಂಬ ಸರಳ ಸೂತ್ರವನ್ನು ಶೋಧಿಸಿರಬಹುದು. ವಿಜ್ಞಾನದ ಮೂಲವನ್ನು ಇಂಥ ಕಾರ್ಯ-ಕಾರಣ ಸಂಬಂಧದಲ್ಲಿ ಕಾಣುತ್ತೇವೆ.

ಬೆಂಕಿಯ ಬಳಕೆಯಿಂದ ಜೀವನೋಪಯುಕ್ತ ಸಲಕರಣೆಗಳನ್ನು ತಯಾರಿಸುವ ಕಲೆ ಕ್ರಮೇಣ ಅವನಿಗೆ ಸಿದ್ಧಿಸಿತು. ಈ ಹೊಸ ಅರಿವಿಗೆ ತಂತ್ರವಿದ್ಯೆ ಎಂದು ಹೆಸರು. ವಿಜ್ಞಾನದ ಅನ್ವಿತ ಮುಖ ತಂತ್ರವಿದ್ಯೆ, ತಂತ್ರವಿದ್ಯೆಯ ಸೈದ್ಧಾಂತಿಕ ಆಧಾರ ವಿಜ್ಞಾನ. ಸಾಧಾರಣವಾಗಿ ಜನ ಈ ಸೂಕ್ಷ್ಮ ವ್ಯತ್ಯಾಸವನ್ನು ಪರಿಗಣಿಸದೆ ವಿಜ್ಞಾನ ಎಂಬ ಒಂದೇ ಪದವನ್ನು ಸರ್ವತ್ರ ಬಳಸುವುದು ವಾಡಿಕೆ. ಇದು ಹಾಗಿರಲಿ.

ವಿಜ್ಞಾನದ ಆಧಾರಭಾವನೆಗಳು ಮೂರು ಎಂದು ಅನುಭವದಿಂದ ತಿಳಿದಿದ್ದೇವೆ : (೧) ಭೌತವಿಶ್ವದಲ್ಲಿ ಕ್ರಮ ಉಂಟು; (೨) ಈ ಕ್ರಮವನ್ನು ಗುರುತಿಸಿ, ಗ್ರಹಿಸಿ, ಅರ್ಥವಿಸಿ ಸಂವಹನಿಸುವ ಸಾಮರ್ಥ್ಯ ಮಾನವಮತಿಗುಂಟು; (೩) ''ದೇವರು ನವುರು, ಆದರೆ ಎಂದೂ ಕುಹಕಿ ಅಲ್ಲ.''

ಆಧಾರಭಾವನೆಗಳಿಗೆ ಆದ್ಯುಕ್ತಿಗಳೆಂಬ ಹೆಸರೂ ಇದೆ. ವಿಜ್ಞಾನಸೌಧದ ಪಂಚಾಂಗ ಶಿಲೆಗಳಿವು, ಇವನ್ನು ರುಜುವಾತಿಸಲಾಗಲೀ ಹುಸಿವಾತಿಸಲಾಗಲೀ ಸಾಧ್ಯವಿಲ್ಲ, ಎಲ್ಲರಿಗೂ ಎಲ್ಲ ಕಾಲಗಳಲ್ಲಿಯೂ ಅನುಭವಗೋಚರ ಭಾವನೆಗಳಿವು. ಮೂರನೆಯ ಆದ್ಯುಕ್ತಿ ಐನ್‌ಸ್ಟೈನರ ಪ್ರಸಿದ್ಧ ಇಂಗ್ಲಿಷ್ ಸೂಕ್ತಿಯ ಭಾವಾನುವಾದ : ನಿಸರ್ಗವೆಂದೂ ಮಾನವನ ಜೊತೆ ಕಪಟದ್ಯೂತ ಆಡುವುದಿಲ್ಲ, ತನ್ನ ನಿಯಮಗಳನ್ನು ಆತನಿಗೆ ತಿಳಿಸಬೇಕೆಂಬ ಬಯಕೆಯಾಗಲೀ ತಿಳಿಸಬಾರದೆಂಬ ಹಠವಾಗಲೀ ಅದಕ್ಕಿಲ್ಲ, ಅದೊಂದು ನಿರ್ಲಿಪ್ತ, ನಿರಬಾಧಿತ ಮತ್ತು ನಿಶ್ಚಿತ ಭಾಗಿ ಮತ್ತು ಎಂದೂ ಅದು ಯಾವುದೇ ಪಕ್ಷಪಾತ ನಿಲುವನ್ನು ತಳೆಯುವುದಿಲ್ಲ. ನಿಸರ್ಗದ ಬಗೆಗಿನ ಇಂಥ ಒಂದು ವಿಶ್ವಾಸವೇ ವಿಜ್ಞಾನದ ಆಧಾರ. ಇದೊಂದು ಜ್ಞೇಯನಿಷ್ಠಬಲ (ಅಥವಾ ವಸ್ತುನಿಷ್ಠಬಲ). ವಿಜ್ಞಾನ ತಾನೇ ವಿಶ್ವನಿರ್ಮಾತೃ ಎಂಬ ಅಹಂಭಾವ ತಳೆದು ಮನುಕುಲನಾಶಕ ಭಸ್ಮಾಸುರನಾಗಬಾರದೆಂಬ ಪ್ರಜ್ಞೆ ಕ್ರಮೇಣ ಅನುಭವದಿಂದ ವೇದ್ಯವಾಯಿತು. ವಿಜ್ಞಾನನಿಯಂತ್ರಕರು ಯಾರು ?

**ಸಮಾಜದ ಮೂಲ**

ಮಾನವನನ್ನು ನಿಸರ್ಗ ಒಬ್ಬ ಸಂಘಜೀವಿಯಾಗಿ ಕಂಡರಿಸಿದೆ : ಗಂಡು-ಹೆಣ್ಣು, ಮಕ್ಕಳು, ಕುಟುಂಬ, ಸಮಾಜ, ಹಳ್ಳಿ ಹೀಗೆ ಬೆಳೆಯುತ್ತದೆ ಈತನ ಪರಿವಾರ. ಮಗುವಿಗೆ ಶೈಶವದಲ್ಲಿ ಜನ್ಮದಾತರೇ ರಕ್ಷಕರು ಹಾಗೂ ಪೋಷಕರು. ಈ ಪರಸ್ಪರ ಅವಲಂಬನೆ ಬೆಳೆದು ಮುಂದೆ ರಾಜ ಅಥವಾ ಪ್ರಧಾನಿ ಪ್ರಜೆಗಳಿಗೆ ನಾಯಕತ್ವ ಒದಗಿಸುತ್ತಾನೆ. ಇಲ್ಲಿಯ ಅಂತರ್ಗತ ತತ್ತ್ವವಿದು : ಸಮಾಜಕ್ಕೊಬ್ಬ ಮುಂದಾಳುವಿನ ಅಗತ್ಯವಿದೆ, ಈತ ನಿರಂಕುಶ, ಪ್ರಭುವಾಗಿ ಪ್ರಜಾಪೀಡಕನಾಗದಂತೆ ಮಾಡಲು ಯೋಗ್ಯ ಪ್ರತಿಬಂಧಗಳ ರೂಪಣೆಯೂ ಅಷ್ಟೇ ಅಗತ್ಯವಿದೆ. ಒಟ್ಟಾರೆ ರಾಷ್ಟ್ರ ಹಿತಸಾಧನೆ ಇಲ್ಲಿಯ ಉದ್ದೇಶ: 'ವಸುಧೈವ ಕುಟುಂಬಕಂ' ತತ್ತ್ವದ ಅನುಷ್ಠಾನ.

ಸಮಾಜದ ಮುಂದಾಳು ದುಷ್ಟನಾದಾಗ ಆತನ ದಬ್ಬಾಳಿಕೆಯಿಂದ ಪ್ರಜೆಗಳಿಗೆ ರಕ್ಷಣೆ ಒದಗಿಸುವವರು ಯಾರು ?

**ಜೀವನ ತ್ರಿಪಾದಿ**

ನಮ್ಮ ಬದುಕೊಂದು ತ್ರಿಪಾದಿಯ ಮೇಲೆ ನಿಂತಿರುವ ಜೀವಂತ ವ್ಯವಸ್ಥೆ. ಧರ್ಮ, ವಿಜ್ಞಾನ ಮತ್ತು ಸಮಾಜ ಈ ಮೂರು ಕಾಲುಗಳು. ಇವು ಪರಸ್ಪರ ಪೂರಕ ಪೋಷಕವಾಗಿರುವಾಗ, ಇರುವಾಗ ಮಾತ್ರ, ಈ ತ್ರಿಪಾದಿ (ಅಂದರೆ ಜೀವನ) ಸಮತೋಲದಲ್ಲಿರುತ್ತದೆ. ಹಾಗಾದರೆ ಇವುಗಳ ನಡುವಿನ ಸಂಬಂಧವೇನು ? ಜೀವನಪಥಪರಿಕ್ರಮಣ ನಮಗೆಲ್ಲರಿಗೂ ನಿಸರ್ಗ ವಿಧಿಸಿರುವ ಕರ್ತವ್ಯ. ಸೋಮಾರಿಗಳಿಗೆ ಜಗತ್ತಿನಲ್ಲಿ ಸ್ಥಾನವಿಲ್ಲ. ಇಲ್ಲಿಯ 'ಪಥ'ದ ನೆಲೆ ಆಯಾ ಸಮಾಜ. 'ಪಥ'ಕ್ಕೆ ಗುರಿ ತೋರಿಸುವುದು ಧರ್ಮ. ಇಲ್ಲಿ ಗುರಿ ಎನ್ನುವುದೊಂದು ಅಮೂರ್ತ ಮೌಲ್ಯ : ಯಥಾ ಮತಿ ತಥಾ ಪಥ. ಉದಾಹರಣೆಗೆ, ಚಂದ್ರನ ಮೇಲೆ ಕಾಲೂರುವುದು ಒಬ್ಬಾತನ ಗುರಿ; ಕಬ್ಬಿಣವನ್ನು ಚಿನ್ನವಾಗಿ ಮಾರ್ಪಡಿಸುವುದು ಇನ್ನೊಬ್ಬನ ಮಹತ್ತ್ವಾಕಾಂಕ್ಷೆ; ದೇವರ ಪ್ರತ್ಯಕ್ಷ ದರ್ಶನ ಮಗುದೊಬ್ಬನ ಉತ್ಕಟೇಚ್ಛೆ; ಸತ್ಯದ ತಿರುಳನ್ನರಿಯುವುದು ಮತ್ತೊಬ್ಬನ ಆಶಯ, ಇತ್ಯಾದಿ. ಇಂಥ ಒಂದೊಂದು ಗುರಿಯ ಸಾಧನೆಗೂ ಆಯಾ ಸಾಧಕ ಯುಕ್ತ ಮಾರ್ಗವನ್ನು ನಿರ್ಮಿಸಿ ಅದರ ಮೇಲೆ ಮುನ್ನಡೆಯುವುದು ಅನಿವಾರ್ಯ. ಮಾರ್ಗನಿರ್ಮಾಣ ಮಾಡಲು ಆತ ವಿಜ್ಞಾನಕ್ಕೆ ಶರಣಾಗಲೇಬೇಕು. ಮಥಿತಾರ್ಥವಿಷ್ಟು: ಧರ್ಮ ಅಮೂರ್ತವಾದ ಒಂದು ಗುರಿಯನ್ನು ಕಾಣಿಸುತ್ತದೆ, ವಿಜ್ಞಾನ ಆ ಗುರಿ ಐದಲು ಮೂರ್ತ ದಾರಿಯನ್ನು ರಚಿಸುತ್ತದೆ, ಫಲವಾಗಿ ಜಿಜ್ಞಾಸುಮಾನವ ನಿರಂತರ ಪರಿಕ್ರಮಣಶೀಲನಾಗಿರುತ್ತಾನೆ. ಎಂದೇ ಧರ್ಮ-ವಿಜ್ಞಾನ-ಸಮಾಜ ತ್ರಿಪಾದಿಯಲ್ಲಿಯ ಅಂತರಸಂಬಂಧವನ್ನು ಈ ಮುಂದಿನ ಸೂತ್ರವಾಕ್ಯಗಳಲ್ಲಿ ನಿರೂಪಿಸಬಹುದು : (೧) ಧರ್ಮರಹಿತ ವಿಜ್ಞಾನ ಕುಂಟು, ವಿಜ್ಞಾನರಹಿತ ಧರ್ಮ ಕುರುಡು. (೨) ಸಮಾಜರಹಿತ ಧರ್ಮ ಅನಾಥ, ಧರ್ಮರಹಿತ ಸಮಾಜ ಅರಾಜಕ. (೩) ವಿಜ್ಞಾನರಹಿತ ಸಮಾಜ ಸ್ಥಗಿತ, ಸಮಾಜರಹಿತ ವಿಜ್ಞಾನ ಅನುಪಯುಕ್ತ. ಒಂದನೆಯ ಸೂತ್ರವಾಕ್ಯ ಐನ್‌ಸ್ಟೈನರ ಒಂದು ಪ್ರಸಿದ್ಧ ಸೂಕ್ತಿಯ ಭಾವಾನುವಾದ. ಧರ್ಮ-ವಿಜ್ಞಾನ-ಸಮಾಜ ಸಾಮರಸ್ಯವೇ ಆರೋಗ್ಯವಂತ ವ್ಯಕ್ತಿಯ ಹಾಗೂ ಸಮಾಜದ ಲಕ್ಷಣ.

**ಮೂಲಭೂತತೆ ಮತ್ತು ಅಂಧತೆ**

ಸಾಧಾರಣವಾಗಿ ಇಂದು ಈ ಪದಗಳನ್ನು ಮತಧರ್ಮ ಸಂದರ್ಭದಲ್ಲಿ ಪ್ರಯೋಗಿಸಲಾಗುತ್ತಿದೆ. ಇಂಗ್ಲಿಷಿನಲ್ಲಿ ಸಮಾನಾರ್ಥಕಗಳು ಅನುಕ್ರಮವಾಗಿ fundamentalism and fanaticism. ವ್ಯಾಪಕಾರ್ಥ ಇನ್ನೂ ವಿಶಾಲವಾಗಿದೆ. ವ್ಯಕ್ತಿಗೆ ಬದುಕಿನಲ್ಲಿ ಎದುರಾಗುವ ಸಮಸ್ಯೆಗಳನ್ನು ಆಯಾ ರಾಷ್ಟ್ರದ ಕಾನೂನು ಚೌಕಟ್ಟಿನೊಳಗೆ ನಿರ್ಣಯಿಸಬೇಕಾದದ್ದು ಸರ್ವಕ್ಷೇಮ. ಹೀಗಲ್ಲದೆ ಅನ್ಯ ಚೌಕಟ್ಟಿನೊಳಗೆ – ಧರ್ಮ, ಪರಂಪರೆ, ನಂಬಿಕೆ, ಸಂಪ್ರದಾಯ ಮುಂತಾದವು – ನಿರ್ಣಯಿಸತಕ್ಕದ್ದು ಎಂದು ಆಗ್ರಹಿಸಿ ಜನಕ್ಷೋಭೆಗೆ ಕಾರಣವಾಗುವ ಮನೋಭಾವಕ್ಕೆ ಮೂಲಭೂತತೆ ಅಥವಾ ಮೂಲಭೂತವಾದ ಎಂದು ಹೆಸರು. ''ನನ್ನ ಫಿರ್ಯಾದಿಯನ್ನು ನನ್ನ ಧರ್ಮಾನುಸಾರವೇ ಇತ್ಯರ್ಥಗೊಳಿಸಬೇಕು, ಇದು ರಾಷ್ಟ್ರೀಯ ಕಾನೂನಿನ ವ್ಯಾಪ್ತಿಯ ಒಳಗೆ ಬರುವುದಿಲ್ಲ'' ಎಂಬ ದುರಾಗ್ರಹವೇ ಮೂಲಭೂತತೆ. ಇನ್ನು ''ಪ್ರಪಂಚದಲ್ಲಿ ನನ್ನ ಧರ್ಮವೊಂದೇ ಉಳಿದಿರತಕ್ಕದ್ದು. ಉಳಿದೆಲ್ಲ ಧರ್ಮಗಳನ್ನೂ ನಾಶಗೊಳಿಸತಕ್ಕದ್ದು'' ಎಂಬ ಉತ್ಕಟ ಪರಧರ್ಮದ್ವೇಷ ಮನೋಭಾವ ಅಂಧತೆ. ಇಂಥ ವಿಕೃತ ಮತ್ತು ವಿಕ್ಷಿಪ್ತ ಮನಃಸ್ಥಿತಿಗಳು ಪ್ರಕಟವಾದಾಗ ಜೀವನತ್ರಿಪಾದಿ ತನ್ನ ಸಮತೋಲ ಸ್ಥಿತಿಯನ್ನು ಕಳೆದುಕೊಂಡಿದೆ ಎಂದರ್ಥ. ಸ್ವಮತಾಂಧತೆ, ಅಧಿಕಾರಾಂಧತೆ, ಸಾಮ್ರಾಜ್ಯಾಂಧತೆ, ಸ್ವಜನಮೋಹಾಂಧತೆ, ವರ್ಣಾಂಧತೆ ಮೊದಲಾದ ಹಲವು ಹನ್ನೊಂದು ಬಗೆಯ ಅಂಧತೆಗಳ ತಳದಲ್ಲಿರುವುದೂ ಇದೇ : ತ್ರಿಪಾದಿಯ ಅಸಮತೋಲನ.

**ಸಮಾರೋಪ**

ಹಾಗಾದರೆ ನಾವು ಹೇಗೆ ಬಾಳಬೇಕು ? ನಿಸರ್ಗವು ಗುರುವಾಗಲಿ, ಎಂದನೊಬ್ಬ ಕಾವ್ಯರ್ಷಿ. ನಿಸರ್ಗದತ್ತ ಗೊಂಡಾರಣ್ಯವನ್ನು (ಮಾನವಕೃತ ತೋಟವನ್ನಲ್ಲ) ನೋಡಿದರೆ ನಮ್ಮ ಬಾಳಿಗೊಂದು ಮಾರ್ಗ ಮತ್ತು ಅರ್ಥ ಹೊಳೆಯುತ್ತವೆ : ಸಹಜೀವನ, ಪರಸ್ಪರಾವಲಂಬನೆ; ಯಾವುದೂ ಕೀಳಲ್ಲ, ಮೇಲಲ್ಲ. ಬುದ್ಧ ಇಂಥ ಮಾರ್ಗಕ್ಕೆ ಹಸುರು ಕಂದೀಲು ಹಿಡಿದಿದ್ದಾನೆ : ''ನಂಬದಿರು ಏನನ್ನೂ ಅದು ನಿನಗೆ ಹೇಳಲ್ಪಟ್ಟಿದೆ ಎಂಬ ಒಂದೇ ಕಾರಣಕ್ಕಾಗಿ, ಅಥವಾ ಅದು ಪಾರಂಪರಿಕ ಎಂಬ ಕಾರಣಕ್ಕಾಗಿ, ಅಥವಾ ನೀನೇ ನಿನ್ನಷ್ಟಕ್ಕೆ ಅದನ್ನು ಕಲ್ಪಿಸಿಕೊಂಡಿರುವೆ ಎಂಬ ಕಾರಣಕ್ಕಾಗಿ, ನಿನ್ನ ಉಪಾಧ್ಯಾಯ ನಿನಗೆ ಹೇಳುವುದನ್ನು ಆತನ ಬಗೆಗಿನ ಗೌರವ ಎಂಬ ಒಂದೇ ಕಾರಣಕ್ಕಾಗಿ ನಂಬದಿರು; ಬದಲು, ತೀಕ್ಷ್ಣ ಪರೀಕ್ಷೆ ಮತ್ತು ವಿಶ್ಲೇಷಣಾನಂತರ ಯಾವುದು ಸಮಸ್ತಜೀವಿಗಳ ಶ್ರೇಯೋಭಿವೃದ್ಧಿಗೆ ಕಾರಣವೋ ಆ ತತ್ತ್ವವನ್ನು ನಂಬು ಮತ್ತು ಅದಕ್ಕೆ ಶರಣಾಗು ಮತ್ತು ಅದನ್ನು ನಿನ್ನ ಜೀವನಮಾರ್ಗದರ್ಶಿ ಎಂದು ಸ್ವೀಕರಿಸು.''

ಜಿ. ಟಿ. ನಾರಾಯಣರಾವ್
೮, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ, ಮೈಸೂರು - ೫೭೦ ೦೦೯

ಇತ್ತೀಚೆಗೆ ಬಿಡುಗಡೆಯಾದ ಅಂಕಿಅಂಶಗಳ ಪ್ರಕಾರ ಕೃಷಿಕ್ಷೇತ್ರವು ಕಳೆದ ಸಾಲಿನ ಹಣಕಾಸು ವರ್ಷದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ (GDP)ದ ಬೆಳವಣಿಗೆಗೆ ಶೇಕಡ ೯.೩ರಷ್ಟು ಕಾಣಿಕೆಯನ್ನು ಸಲ್ಲಿಸಿದೆ ಎಂದು ಸಾರಲಾಗುತ್ತಿದೆ. ಆದರೆ ಸೂಕ್ಷ್ಮವಾಗಿ ಗಮನಿಸಿದಾಗ ಕೃಷಿಕ್ಷೇತ್ರದ ಈ 'ಸಾಧನೆ' ಮೇಲ್ನೋಟಕ್ಕೆ ಮಾತ್ರ ಸತ್ಯ ಎಂದು ಕಂಡುಬರುತ್ತದೆ. ಕೇಂದ್ರ ಸರ್ಕಾರದ ಹಣಕಾಸು ಸಚಿವರೇ ಒಪ್ಪಿಕೊಂಡಿರುವಂತೆ, ಕೃಷಿಕ್ಷೇತ್ರದ ಬೆಳವಣಿಗೆಯ ಬಹುಪಾಲು ಸಾಧನೆ ತೋಟಗಾರಿಕೆ, ಆಹಾರ ಧಾನ್ಯೇತರ ಬೆಳೆಗಳು, ಸಾಂಬಾರ ಪದಾರ್ಥಗಳು ಮತ್ತು ಸೆಣಬು ವಲಯಗಳಲ್ಲಿ ಮಾತ್ರ ಕಾಣಿಸಿಕೊಂಡಿದೆ. ಆದರೆ, ಇಂದು ಆಹಾರಧಾನ್ಯ ಉತ್ಪಾದನಾ ವಲಯ ಎದುರಿಸುತ್ತಿರುವ ಸಮಸ್ಯೆ ಮತ್ತು ಅದು ಯಾವ ದಿಕ್ಕಿನಲ್ಲಿ ಸಾಗುತ್ತಿದೆಯೆಂಬುದು ನಾವು ಗಮನಿಸಬೇಕಾದ ಅಂಶ.

ನ್ಯಾಷನಲ್ ಸ್ಯಾಂಪಲ್ ಸರ್ವೆ ಸಂಸ್ಥೆ (NSSO) ಬಿಡುಗಡೆ ಮಾಡಿದ ಮಾಹಿತಿ ಪ್ರಕಾರ ನಮ್ಮ ದೇಶದ ಒಟ್ಟು ೮೯.೩೫ ದಶಲಕ್ಷ ರೈತಾಪಿ ಕುಟುಂಬಗಳ ಪೈಕಿ ೪೩.೪೨ ದಶಲಕ್ಷ ರೈತಾಪಿ ಕುಟುಂಬಗಳು ತೀವ್ರವಾದ ಸಾಲದ ಹೊರೆಯಿಂದ ಕಂಗಾಲಾಗಿವೆ. ಯಾವುದೇ ರೈತ ಕುಟುಂಬವು ೩೦೦ ರೂ.ಗಳ ಸಾಲ ಬಾಕಿಯನ್ನಿರಿಸಿಕೊಂಡಿದ್ದರೆ, ಅಂತಹ ಕುಟುಂಬವು ಸಾಲದ ಋಣಬಾಧೆಯನ್ನು ಅನುಭವಿಸುತ್ತಿದೆಯೆಂದು ಪರಿಗಣಿಸಲಾಗುತ್ತದೆ.

ಇನ್ನೊಂದು ಮಗ್ಗುಲಲ್ಲಿ, ಪಂಜಾಬಿನ ಶ್ರೀಮಂತ ರೈತರು ಐಷಾರಾಮ ಜೀವನ ನಡೆಸುತ್ತಿರುವುದನ್ನು ಕಾಣಬಹುದು. ವೈಭವೋಪೇತ ಕಾರುಗಳಲ್ಲಿ ಸುತ್ತಾಡುವುದು ಅವರ ಜೀವನಶೈಲಿಯ ಸೂಚಕವಾಗಿದೆ. ಸಮೀಕ್ಷೆಯ ಬಹುಮುಖ್ಯವಾದ ಅಂಶವೆಂದರೆ ಉತ್ತರ ಪ್ರದೇಶ, ಆಂಧ್ರಪ್ರದೇಶ, ಮಹಾರಾಷ್ಟ್ರ, ಪಶ್ಚಿಮ ಬಂಗಾಳ ಹಾಗೂ ಮಧ್ಯಪ್ರದೇಶ ರಾಜ್ಯಗಳ ಶೇಕಡ ೫೦ಕ್ಕೂ ಮಿಗಿಲಾಗಿ ರೈತಾಪಿ ಕುಟುಂಬಗಳು ಸಾಲ ಮರುಪಾವತಿ ಮಾಡಲಾಗದೆ ಸಂಕಷ್ಟದಲ್ಲಿ ಸಿಲುಕಿವೆ. ಆಂಧ್ರಪ್ರದೇಶದಲ್ಲಿಯೇ ಶೇಕಡ ೮೨ರಷ್ಟು ರೈತ ಕುಟುಂಬಗಳು ಸಾಲದ ವಿಷವರ್ತುಲದಲ್ಲಿ ಸಿಲುಕಿರುವುದು ದುಃಖಕರ ಸಂಗತಿ. ಸಾಮಾಜಿಕವಾಗಿ ಮುಂದುವರೆದ ರಾಜ್ಯವೆಂದು ಪರಿಗಣಿಸಲಾಗಿರುವ ಕೇರಳದಲ್ಲೂ ಶೇಕಡ ೬೪.೪ರಷ್ಟು ರೈತ ಕುಟುಂಬಗಳು ಸಾಲದ ಋಣಬಾಧೆಗೆ ಒಳಗಾಗಿವೆ ಎಂಬುದು ಆಶ್ಚರ್ಯಕರ ಸಂಗತಿ. ಈ ನಿಟ್ಟಿನಲ್ಲಿ ಪಂಜಾಬ್ ರಾಜ್ಯವೇನೂ ಹಿಂದುಳಿದಿಲ್ಲ. ಶೇಕಡ ೬೪.೫ರಷ್ಟು ಕೃಷಿಕವರ್ಗ ಸಾಲ ಮರುಪಾವತಿ ಸಮಸ್ಯೆಯನ್ನು ಎದುರಿಸುತ್ತಿದೆ.

೧೯೬೦ ಹಾಗೂ ೭೦ರ ದಶಕದಲ್ಲಿ ಅನುಷ್ಠಾನಗೊಂಡ ಹಸಿರುಕ್ರಾಂತಿ ನಮ್ಮ ದೇಶದ ಕೃಷಿಕ್ಷೇತ್ರದಲ್ಲಿ ಸಮೃದ್ಧಿಯ ಹೊಳೆ ಹರಿಸಿತೆಂಬುದು ಜನಪ್ರಿಯ ನಂಬಿಕೆ. ನವದೆಹಲಿಯ ಕೆಲವು ಕೃಷಿ ಪಂಡಿತರು ಈ ತಪ್ಪು ಅಭಿಪ್ರಾಯವು ಜನಮನದಲ್ಲಿ ಬಲವಾಗಿ ಬೇರೂರುವಂತೆ ಶ್ರಮಿಸಿದರು. ಆದರೆ ಹಸಿರುಕ್ರಾಂತಿಯ ಪ್ರಯೋಜನವು ಸಣ್ಣ ಮತ್ತು ಮಧ್ಯಮ ವರ್ಗದ ರೈತರನ್ನು ಅಷ್ಟಾಗಿ ತಲುಪಲಿಲ್ಲ.

ನ್ಯಾಷನಲ್ ಸ್ಯಾಂಪಲ್ ಸರ್ವೆ ಸಂಸ್ಥೆ (NSSO) ಸಮೀಕ್ಷೆಯು ಗ್ರಾಮೀಣ ಪ್ರದೇಶಗಳ ಬಡತನ ಮತ್ತು ಕೃಷಿನೀತಿಯ ವಿಷಯದಲ್ಲಿ ನಿರಾಶಾದಾಯಕ ಚಿತ್ರಣವನ್ನು ನೀಡಿದೆ. ಹಸಿರು ಕ್ರಾಂತಿಯ ಪರಿಣಾಮಗಳ ಬಗ್ಗೆ ವಿಮರ್ಶಾತ್ಮಕವಾಗಿ ಅಧ್ಯಯನ ನಡೆಸಿದರೆ, ಅದರ ಯೋಜನೆಗಳು, ಕಾರ್ಯತಂತ್ರ ಮತ್ತು ತಂತ್ರಜ್ಞಾನ ಕೇವಲ ಬಂಡವಾಳಶಾಹಿ ಮತ್ತು ದೊಡ್ಡ ದೊಡ್ಡ ಕೃಷಿಭೂಮಿ ಹಿಡುವಳಿ ರೈತರನ್ನು ಮಾತ್ರ ಶ್ರೀಮಂತಗೊಳಿಸಿವೆಯೆಂಬುದು ಗೋಚರವಾಗುತ್ತದೆ. ಆಂಧ್ರಪ್ರದೇಶ ಸರ್ಕಾರವು ಕೃಷಿಕ್ಷೇತ್ರಕ್ಕೆ ಉಚಿತ ವಿದ್ಯುಚ್ಛಕ್ತಿಯನ್ನು ನೀಡುತ್ತಿದೆ. ತನ್ನ ಹೊಲದಲ್ಲಿ ಬಾವಿಯೇ ಇಲ್ಲದ ರೈತನಿಗೆ ಈ ವಿದ್ಯುಚ್ಛಕ್ತಿಯಿಂದೇನು ಪ್ರಯೋಜನ ? ಕೋಟ್ಯಂತರ ರೂಪಾಯಿಗಳ ವೆಚ್ಚದಲ್ಲಿ ತಯಾರಾಗುವ ಈ ವಿದ್ಯುಚ್ಛಕ್ತಿಯ ಪ್ರಯೋಜನವನ್ನು ವಿಶಾಲ ಕೃಷಿಭೂಮಿಯ ಮಾಲೀಕರು ಪಡೆಯುತ್ತಿದ್ದಾರೆ.

ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ನ್ಯೂಟ್ರಿಷನ್, ಹೈದರಾಬಾದ್, ಸಂಸ್ಥೆಯ ಪ್ರಕಾರ ಇಂದು ಪ್ರತಿ ವ್ಯಕ್ತಿಗೆ ಲಭ್ಯವಾಗುತ್ತಿರುವ ಆಹಾರದ ಪ್ರಮಾಣ ಕೇವಲ ೩೫೦ ಗ್ರಾಂ. ಆದರೆ ಅವಶ್ಯಕ ಪ್ರಮಾಣ ೫೦೦ ಗ್ರಾಂ. ಆಹಾರ ಸೇವನೆಯಲ್ಲಿ ದೇಹಕ್ಕೆ ಲಭ್ಯವಾಗುತ್ತಿರುವ ಪ್ರೋಟೀನ್ ಅಂಶ ೨೮ ಗ್ರಾಂ. ಆರ್ಥಿಕ ಸುಧಾರಣೆ ಅನುಷ್ಠಾನದ ಅವಧಿಯ ೧೯೯೩ರಿಂದ ೨೦೦೦ದವರೆಗೆ ಆಹಾರ ಧಾನ್ಯ ಉತ್ಪಾದನೆ ಶೇಕಡ ೧೩.೪೧ರಷ್ಟು ಹೆಚ್ಚಳವನ್ನು ಕಂಡಿತು. ಶೇಕಡ ೧.೨ರಷ್ಟಿದ್ದ ವಾರ್ಷಿಕ ಪ್ರಮಾಣ ಶೇಕಡ ೧.೩ಕ್ಕೆ ಮಾತ್ರವಷ್ಟೇ ಏರಿತು.

ನ್ಯಾಷನಲ್ ಸ್ಯಾಂಪಲ್ ಸರ್ವೆ ಸಂಸ್ಥೆ (NSSO) ಸಮೀಕ್ಷೆ ಹೊರಗೆಡಹಿರುವ ಮತ್ತೊಂದು ಅಂಶವೆಂದರೆ, ಪ್ರತಿಯೊಂದು ಕೃಷಿಕ ಕುಟುಂಬವು ೩೦೦ ರೂ.ಗಳ ತನ್ನ ಅಂದಂದಿನ ಆದಾಯದಲ್ಲಿ ಅರ್ಧ ಭಾಗವನ್ನು ಆಹಾರಕ್ಕಾಗಿ ವ್ಯಯಿಸುತ್ತದೆ.

ಈ ಹಿನ್ನೆಲೆಯಲ್ಲಿ ಕೇಂದ್ರ ಕೃಷಿ ಸಚಿವರಾದ ಶರದ್ ಪವಾರ್ ಅವರು ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿ ಸರಬರಾಜಾಗುವ ಗೋಧಿಯ ಪ್ರಮಾಣವನ್ನು ತಗ್ಗಿಸಿ ಬೆಲೆಯನ್ನು ಹೆಚ್ಚಿಸಿರುವುದು ಎಷ್ಟು ಸಮಂಜಸವೆಂಬುದು ಪ್ರಶ್ನಾರ್ಹವಾಗಿದೆ. ಸಾರ್ವಜನಿಕ ವಿತರಣಾ ವ್ಯವಸ್ಥೆಯ ಧಾನ್ಯಗಳು ಕಾಳಸಂತೆಕೋರರ ಪಾಲಾಗುತ್ತಿರುವುದು ಶೋಚನೀಯ. ಆಹಾರ ಸಬ್ಸಿಡಿಯನ್ನು ಕಡಿತಗೊಳಿಸಿ ಬಡತನದ ರೇಖೆಯಿಂದ ಕೆಳಮಟ್ಟದಲ್ಲಿರುವವರಿಗಾಗಿ ರೂಪಿಸಿದ ಯೋಜನೆಗಳನ್ನು ಗಾಳಿಗೆ ತೂರುವುದು ನಿಜಕ್ಕೂ ಖಂಡನೀಯ.

ಹಸಿರುಕ್ರಾಂತಿಯ ತವರೂರಾದ ಪಂಜಾಬ್ ರಾಜ್ಯದಲ್ಲಿ ಹಸಿರುಕ್ರಾಂತಿ ತಂತ್ರಜ್ಞಾನವನ್ನು ವಿವೇಚನೆಯಿಲ್ಲದೆ ಅನುಸರಿಸಿದ ಪರಿಣಾಮವಾಗಿ ಕೃಷಿಭೂಮಿ ತನ್ನ ಸತ್ವವನ್ನು ಕಳೆದುಕೊಂಡಿದೆ. ಅತ್ಯಧಿಕ ಪ್ರಮಾಣದಲ್ಲಿ ರಾಸಾಯನಿಕ ಗೊಬ್ಬರವನ್ನು ಬಳಸಿದ್ದರಿಂದ ಭೂಮಿಯ ಫಲವತ್ತತೆ ಇಳಿಮುಖವಾಗಿದೆ. ಈ ಹಿನ್ನೆಲೆಯಲ್ಲಿ, ನಮ್ಮ ಪ್ರಧಾನ ಮಂತ್ರಿಗಳೇ ಇತ್ತೀಚಿನ ತಮ್ಮ ಭಾಷಣವೊಂದರಲ್ಲಿ ಅಭಿಪ್ರಾಯಪಟ್ಟಿರುವಂತೆ ನಮ್ಮ ಕೃಷಿ ವಿಧಾನ, ತಂತ್ರಜ್ಞಾನ ಮತ್ತು ನೀತಿಗಳನ್ನು ಪುನರ್ವಿಮರ್ಶೆಗೆ ಒಳಪಡಿಸಬೇಕಾಗುತ್ತದೆ. *(ಸಾಧಾರ)*

# ಭಾರತೀಯ ಕೃಷಿ ಕ್ಷೇತ್ರ : ಒಂದು ವಿಶ್ಲೇಷಣೆ



**ಶಂಕರನಾರಾಯಣ**
ನಂ. ೫೪/೧೧೪, ಕೆನರಾ ಬ್ಯಾಂಕ್ ಕಾಲೋನಿ
ಚಿಕ್ಕಲಸಂದ್ರ, ಸುಬ್ರಮಣ್ಯಪುರ ಪೋಸ್ಟ್
ಬೆಂಗಳೂರು - ೫೬೦ ೦೬೧

ಕೈನೆಟಿಕ್ ಅನ್ನು ರಸ್ತೆಯಲ್ಲಿ ನಿಲ್ಲಿಸಿ ಗೇಟು ತೆಗೆದು ಒಳಹೊಕ್ಕ ವಸಂತಮಾಲಾಳಿಗಿಂತ ಮೊದಲೇ ಅವಳ ಮೂಗು ಆ ಮನೆಯನ್ನು ಪ್ರವೇಶಿಸಿತ್ತು. ಬಾಗಿಲು ತೆರೆದೇ ಇದ್ದರೂ ಕರೆಗಂಟೆ ಒತ್ತಿ ಒಳಗೆ ಪ್ರವೇಶಿಸಿದ ಅವಳ ಮಿದುಳು ಆಗಲೇ ವಾಸನೆಯ ಜಾಡನ್ನು ಹಿಡಿದಿತ್ತು.

ಮೊದಲೇ ತನ್ನ ದೊಡ್ಡ ಬಾಯನ್ನು ಇನ್ನಷ್ಟು ಅಗಲಿಸುತ್ತಾ ರೇವತಿ, ''ಬಾರೆ ವಸಂತ ಏನು ಬೆಳಿಗ್ಗೆ ಬೆಳಿಗ್ಗೆ ಈ ಕಡೆ ಸವಾರಿ'' ಎನ್ನುತ್ತಾ ಪಟಪಟ ಮಾತಾಡುತ್ತಿದ್ದರೆ ವಸಂತಮಾಲಾ, ''ಇದೇನು ಬೇಯಿಸಿದ ಮೂಲಂಗಿಯ ಗಬ್ಬುನಾತವೇ? ಅದರ ಜೊತೆಯಲ್ಲೇ ಇನ್ನೊಂದೇನೋ ಹಸಿಹಸಿ ವಾಸನೆ ಬರುತ್ತಿದೆಯಲ್ಲ'' ಎಂದುಕೊಳ್ಳುತ್ತಾ ಮೂಗಿನ ಹೊಳ್ಳೆಗಳನ್ನು ಅರಳಿಸಿದಳು. ''ಏನೇ ಮೂಲಂಗಿ ಸಾಂಬಾರಾ ?'' ಎಂದಳು. ಈ ಅಸಂಬದ್ಧ ಪ್ರಶ್ನೆಗೆ ರೇವತಿ ರೇಗುತ್ತಾ, ''ನಮ್ಮ ಮನೆಯಲ್ಲಿ ಮೂಲಂಗಿ ಯಾರಿಗೂ ಸೇರಲ್ಲ'' ಎನ್ನುತ್ತಾ ಹೆಗಲಮೇಲಿನ ಕೈಟವೆಲ್ಲಿನಿಂದ ಸೋಫಾ ಒದರಿ ಕೂತ್ಕೊಳ್ಳೆ ಎಂದಳು. ರೇವತಿಯ ದಪ್ಪ ಕಪ್ಪು ಮುಖದಲ್ಲಿ ಕಣ್ಣುಗಳು ಆಳದಿಂದೆಲ್ಲೋ ಎದ್ದುಬಂದಂತೆ ತೋರುತ್ತಿದ್ದವು. ಅಲ್ಲಲ್ಲಿ ಸಿಡುಬಿನ ಕಲೆ ಮೊಡವೆಯ ತೂತು ಎಲ್ಲಾ ಸೇರಿ ಅಕ್ಕಿ ಸಾಣಿಗೆಯ ನೆನಪಾಯಿತು. ಸೀರೆಯ ನೆರಿಗೆಯನ್ನೆಲ್ಲ ಸೊಂಟಕ್ಕೆ ಸಿಕ್ಕಿಸಿ ಕೆಳಕ್ಕೆ ತಳ್ಳಿದ್ದರಿಂದ ದೊಡ್ಡ ಕರಿ ಹೊಟ್ಟೆ ಕುಲುಕಾಡುತ್ತಿತ್ತು. ಇದನ್ನೆಲ್ಲ ಗಮನಿಸುತ್ತಲೆ ಮೂಗಿನ ಹೊಳ್ಳೆಗಾಗಲೇ ವಾಸನೆಯ ಜಾಡು ಸಿಕ್ಕಿಬಿಟ್ಟಿತು. 'ಬೆಳಿಗ್ಗೆ ಬೆಳಿಗ್ಗೆ ಮನೆಗೆ ವಕ್ಕರಿಸಿದಳಲ್ಲಪ್ಪಾ ಇವಳು. ಇವಳ ಡ್ರೆಸ್ ನೋಡು, ಮೇಕಪ್ ನೋಡು, ಎಂತಾ ಸ್ಲಿಮ್ ಆಗಿದ್ದಾಳಲ್ಲಾ? ಅಯ್ಯೊ ಇವಳಿಗೇನು ಮದುವೇನಾ ಮಕ್ಕಳಾ ಏನು ಜವಾಬ್ದಾರಿ ? ಐದಂಕಿ ಸಂಬಳ. ಜುಂ ಅಂತಿದ್ದಾಳೆ. ಇನ್ನೇನು ಇವರು ರೂಮಿನಿಂದ ಈಚೆ ಬಂದೇಬಿಡ್ತಾರೆ ಹಲ್ಲು ಕಿಸಿಯುತ್ತಾ, ಪ್ರಾರಬ್ಧ ಯಾಕಾದ್ರೂ ಇವಳನ್ನು ಪರಿಚಯ ಮಾಡಿಕೊಂಡೆನೋ' ಎಂದುಕೊಂಡಳು ಮನಸ್ಸಿನಲ್ಲಿ.

# ವಾಸನೆ



ಶಾಂತಾಕುಮಾರಿ

ಅರೆ, ಇದ್ಯಾಕೆ ರೇವತಿ ಹೀಗೆ ಯೋಚಿಸ್ತಾ ಇದ್ದಾಳೆ, ಅವಳ ಯೋಚನೆ ನಂಗೆ ಹೇಗೆ ಗೊತ್ತಾಗ್ತಾ ಇದೆ, ಅಂತ ವಿಸ್ಮಯಪಡುತ್ತಾ, ''ರೇವತಿ ನಿನ್ನ ಯಜಮಾನರ ಹತ್ತಿರ ಸ್ವಲ್ಪ ಕೆರಿಯರ್ ರೆಕಾರ್ಡ್ ಬಗ್ಗೆ ಡಿಸ್ಕಸ್ ಮಾಡ್ಬೇಕಿತ್ತು. ಅದಕ್ಕೆ ಅವರು ಆಫೀಸಿಗೆ ಹೋಗೋ ಮೊದಲು ನೋಡೋಣ ಅಂತ ಬಂದೆ. ಅಕ್ಕ ಹೇಳಿದಳು, ಅವರು ರಾತ್ರಿ ಲೇಟಾಗುತ್ತೆ ಬರೋದು ಬೆಳಿಗ್ಗೇನೆ ಹೋಗು'' ಅಂತ ಅಂದಾಗ, ''ಅದೂ ಸರೀನೆ ರಾತ್ರಿ ಇವರು ಬರೋದು ಹನ್ನೊಂದೋ ಹನ್ನೆರಡೋ ಹೇಳೋಕಾಗೋಲ್ಲ. ಕಾಫಿ ಬೆರೆಸ್ತೀನಿ ಇರು'' ಎನ್ನುತ್ತಾ ಒಳಗೆ ಹೊರಟವಳ ಚಪ್ಪರದಂತೆ ಕೆದರಿದ ತಲೆಯನ್ನು ನೋಡುತ್ತಾ, 'ಗ್ರೇಟ್ ಬಿಡು. ನಿನ್ನಂಥವಳ ಜೊತೆ ಇಡೀ ರಾತ್ರಿ ಕಳೀತಾನಲ್ಲಾ ನಿನ್ನ ಗಂಡ' ಎಂದುಕೊಳ್ಳುತ್ತಾ ಮನಸ್ಸಿನೊಳಗೇ ನಕ್ಕಳು ವಸಂತ.

ಮಾಸಲು ಬಣ್ಣಕ್ಕೆ ತಿರುಗಿದ ಪರದೆಗಳು, ನೀರಿನ ಮುಖವಾಗಲಿ ಹುಣಿಸೆಹಣ್ಣಿನ ಮುಖವಾಗಲಿ ಕಾಣದೆ ಕಂದುಬಣ್ಣಕ್ಕೆ ತಿರುಗಿದ ಹಿತ್ತಾಳೆಯ ಷೋಪೀಸುಗಳು, ಟೀವಿ ಸ್ಟಾಂಡ್‌ನಲ್ಲಿ ಪೇರಿಸಿಟ್ಟ ನ್ಯೂಸ್ ಪೇಪರ್ ರಾಶಿ ನೋಡುತ್ತಾ ಕುಳಿತವಳಿಗೆ ಯಾವುದೋ ಸುಗಂಧದ ವಾಸನೆ ಮೂಗಿನೊಳಹೊಕ್ಕಂತಾದಾಗ ಹೊಳ್ಳೆಗಳನ್ನು ಅರಳಿಸಿದಳು. ಯಾವುದೋ ಸೆಂಟಿನ ಪರಿಮಳ. ಅದರ ಜೊತೆಯಲ್ಲೇ ಕಿರಿಕಿರಿ ಯಾಗುವಂತಹುದೇನೋ ವಾಸನೆ, ಏನದು ? ಮುಸುಮುಸು ಮಾಡಿ ಮೂಗಿನ ಹೊಳ್ಳೆಗಳನ್ನು ಮತ್ತೆ ಅರಳಿಸಿದಳು. ದೀರ್ಘವಾಗಿ ಉಸಿರೆಳೆದು ಕೊಳ್ಳುತ್ತಾ ಹುಬ್ಬುಗಂಟಿಕ್ಕಿ ಯಾವುದೀ ವಾಸನೆ ? ಆಗಾಗ್ಗೆ ಜನರ ಪಕ್ಕ ಸುಳಿದಾಡಿದಾಗಲೆಲ್ಲಾ ಮೂಗಿಗೆ ಬಡಿದು ಓಡುವ ಈ ವಾಸನೆ ? ಬಾಸ್ ಪಾಷಾ ಬಂದಾಗ ಕೂಡಾ ಇದೇ ವಾಸನೆಯಲ್ಲವೇ ನನಗೆ ಉಸಿರು ಕಟ್ಟಿಸುವಂತೆ ಮಾಡುತ್ತಿದ್ದದ್ದು? ಇಲ್ಲೇಕೆ ಆ ವಾಸನೆ ಬರುತ್ತಿದೆ ? ಇದ್ಯಾವ ವಾಸನೆ ? ಎಲ್ಲರ ಹತ್ತಿರ ಕಾಮನ್ ಆಗಿರುವ ವಾಸನೆಯೇ ಇದು ? ಇಲ್ಲವಲ್ಲ, ಇಡೀ ದಿನ ವಿವೇಕನ ಜೊತೆ ಇದ್ದರೂ ಈ ವಾಸನೆ ಬರೋದಿಲ್ಲವಲ್ಲ? ಕಂಡುಹಿಡಿಬೇಕು. ಇದು ಎಂಥಾ ಜನರ ಹತ್ತಿರ ಬರೋ ವಾಸನೆ ? ಯಾಕೆ ಬರುತ್ತೆ? ಅಂತೆಲ್ಲಾ ಅಂದುಕೊಂಡವಳಿಗೆ ಪಕ್ಕನೆ ನಗು ಬಂತು, ಜೊತೆಯಲ್ಲಿ ಕೋಪಾನೂ. 'ನನಗ್ಯಾಕೆ ಈ ವಾಸನೆ ಹುಚ್ಚು ಅಂಟಿಕೊಳ್ತಾ ಇದೆ. ನಾನೇನು ಅದರ ಮೇಲೆ ಪಿಎಚ್.ಡಿ. ಮಾಡಬೇಕಿದೆಯಾ ? ಈಗ ಬಂದಿರುವ ಸಮಸ್ಯೆಯಿಂದ ಹೊರಬಂದರೆ ಸಾಕಾಗಿದೆ' ಎಂದುಕೊಳ್ಳುತ್ತಿದ್ದಂತೆ, 'ನಮಸ್ಕಾರ ವಸಂತ ಅವರಿಗೆ. ಹೇಗಿದ್ದೀರಾ ?' ಎನ್ನುತ್ತಾ, 'ಏನ್ರೀ ಭಾರಿ ಫೇಮಸ್ ಆಗ್ಬಿಟ್ಟೇದ್ದೀರಿ ? ಪೇಪರ್‌ನಲ್ಲೆಲ್ಲಾ ನಿಮ್ಮದೇ ಸುದ್ದಿ' ಎನ್ನುತ್ತಾ ಷರ್ಟಿನ ಕಫ್ ಬಟನ್ ಗಳನ್ನು ಹಾಕಿಕೊಳ್ಳುತ್ತಾ ಬಂದ ರೇವತಿಯ ಗಂಡನನ್ನು ನೋಡುತ್ತಾ ಮೂಗಿನ ಹೊಳ್ಳೆಗಳನ್ನು ಉಜ್ಜಿಕೊಂಡಳು ವಸಂತ. ''ನಮಸ್ಕಾರ, ಚೆನ್ನಾಗಿದ್ದೀನಿ. ನೀವು ಹೇಗಿದ್ದೀರಾ ?'' ಎನ್ನುತ್ತಿದ್ದಂತೆ, 'ಅಯ್ಯೋ ಭಾರಿ ಬಿಸಿ ಮೇಡಂ. ಏನೇ ಆದರೂ ಈ ಕ್ರಿಮಿನಲ್ ಲಾಯರ್ ಮಾತ್ರಾ ಆಗಬಾರ್ದು ನೋಡಿ, ನೀವೇ ಸುಖಿಗಳಪ್ಪ. ಟೆನ್ ಟು ಫೈವ್ ಡ್ಯೂಟಿ ಹ್ಹ...ಹ್ಹಾ' ಎನ್ನುತ್ತಾ ನಕ್ಕ ಅವನ ಸುಂದರ ಹಲ್ಲುಗಳು ಅದರ ಮೇಲಿದ್ದ ಪೊಗದಸ್ತು ಮೀಸೆ, ಹದವಾದ ತುಟಿಗಳನ್ನು ನೋಡಿ ಇವ ಹೇಗೆ ಆ ರೇವತಿಯನ್ನು ಮುದ್ದಿಸ್ತಾನೋ ಎಂದು ಯೋಚನೆ ಬಂದು ಫಕ್ಕನೆ ನಕ್ಕುಬಿಟ್ಟಳು. ಅವ ಕಕ್ಕಾಬಿಕ್ಕಿಯಾಗಿ ನೋಡ್ತಿದಾನೆ ಎನಿಸಿದಾಗ, ಅಸಂಬದ್ಧ ಎನಿಸಿಬಿಡುವ ತನ್ನ ನಗುವಿಗೆ ಮಾತು ಜೋಡಿಸಲು ಪ್ರಯಾಸಪಡುತ್ತಾ, 'ಕಾಸಿಗೆ ತಕ್ಕ ಕಜ್ಜಾಯ ಅಲ್ಲವೇ ? ನಮ್ಮ ತಿಂಗಳ ಸಂಬಳಕ್ಕಿಂತ ಹೆಚ್ಚು ನೀವು ಒಂದು ದಿನಕ್ಕೆ ದುಡೀತೀರಿ' ಅಂದಾಗ ರೇವತಿ ಹಬೆಯಾಡುವ ಕಾಫಿ ತಂದಳು.

ವಸಂತಮಾಲಾ ಸಿ. ಆರ್. ಬಗ್ಗೆ ವಿವರಣೆ ನೀಡಿದಳು. ಪೇಪರಿನಲ್ಲಿ ಬಂದ ಹಗರಣದ ಸಂಕ್ಷಿಪ್ತ ವರದಿ ನೀಡಿದಳು. ಈಗ ತನ್ನ ಕೆರಿಯರ್ ರೆಕಾರ್ಡಿನಲ್ಲಿರುವ ರಿಮಾರ್ಕ್ಸ್ ಮೇಲೆ ಮೊದಲು ಕೇಸು ಹಾಕಿದರೆ ಈ ಹಗರಣ ಉದ್ದೇಶಪೂರಿತ ಎಂಬುದನ್ನು ಸಾಬೀತುಮಾಡುವ ಮೊದಲ

ಹೆಜ್ಜೆಯಾಗುವುದಿಲ್ಲವೇ ಎನ್ನುತ್ತಾ ಅವನನ್ನು ಗಂಭೀರವಾಗಿ ನಿರುಕಿಸಿದಳು. ಅವನು ಅವಳ ಮೆಗಾಸ್ಲೀವ್‌ನಿಂದ ಇಣುಕುತ್ತಿದ್ದ ಬಿಳಿಯ ತೋಳುಗಳನ್ನು ನೋಡುವ ಆನಂದದಲ್ಲಿ ಮೈಮರೆತ್ತಿದ್ದ. ಎಷ್ಟು ಸಂಪಾದಿಸಿದ್ರೇನು ? ಇಂತಹ ಸುಂದರ ಹೆಣ್ಣೊಂದು ಪಕ್ಕದಲ್ಲಿಲ್ಲದ ಮೇಲೆ. ಆಸ್ತಿಗಾಗಿ ರೇವತೀನ ಮದುವೆ ಮಾಡಿಕೊಂಡು ತಪ್ಪು ಮಾಡಿದೆ. ಅರೆ, ಇದ್ಯಾವುದೋ ದನಿ ಕೇಳ್ತಾ ಇದೆಯಲ್ಲಾ? ಇದೇನು ಭ್ರಮೇನೋ ? ಎಂದುಕೊಂಡ. ಇಷ್ಟು ದಿನ ಬರೀ ವಾಸನೆಯೊಂದೇ ಸತಾಯಿಸ್ತಾ ಇತ್ತು. ಈಗ ಏನೇನೋ ಮಾತುಗಳೂ ಕೇಳಿಸುತ್ತಲ್ಲಪ್ಪಾ, ಎಂದುಕೊಳ್ಳುತ್ತಾ ತಲೆ ಕೊಡವಿಕೊಂಡಳು. ತೋಳಿನಿಂದ ಕಣ್ಣು ಕಿತ್ತು ವಸಂತಳ ನೋಟಕ್ಕೆ ಬೆರೆಸುತ್ತಾ, ''ಖಂಡಿತಾ ವಿ ವಿಲ್ ಡೂ ಇಟ್'' ಎನ್ನುತ್ತಾ ಸಮಸ್ಯೆ ತನ್ನದೇ ಎನ್ನುವಷ್ಟು ಜವಾಬ್ದಾರಿಯಿಂದ ನುಡಿದು, ''ವಿ ಹ್ಯಾವ್ ಎ ವೆರಿ ಗುಡ್ ಲಾಯರ್ ಫಾರ್ ದಿಸ್'' ಎಂದು ಲಾಯರ್ ವಿಜಯಕುಮಾರ್‌ಗೆ ಫೋನ್ ಮಾಡಿ ವಿಷಯ ತಿಳಿಸಿ ಮರುದಿನಕ್ಕೆ ಅಪಾಯಿಂಟ್‌ಮೆಂಟ್ ಫಿಕ್ಸ್ ಮಾಡುತ್ತಿದ್ದಂತೆ ವಸಂತಮಾಲಾಗೆ ಹುರ್ರಾ! ಎಂದು ಕೂಗಿಕೊಳ್ಳುವಂತಾಯಿತು. ಅಷ್ಟೊತ್ತಿನಿಂದ ಅವಳ ಮೂಗು ಅರಳಿ ಅರಳಿ ಉಸಿರೆಳೆದುಕೊಂಡು ಮಿದುಳಿನ ಲ್ಯಾಬಿಗೆ ಕಳಿಸಿ ಆ ವಾಸನೆಯ ಪೂರ್ವಾಪರಗಳನ್ನೆಲ್ಲಾ ಪರೀಕ್ಷಿಸಿ ರಿಪೋರ್ಟ್ ಕಳಿಸಿಬಿಟ್ಟಿತ್ತು. ಅಬ್ಬಾ ಎಷ್ಟು ದಿನದ ಪ್ರಾಬ್ಲಂ ಇವತ್ತು ಸಾಲ್ವ್ ಆಯ್ತು. ಇದು ಬಚ್ಚಲ ಪಾಚಿ ಕೆರೆದ ವಾಸನೆ. ಮತ್ತೆ ಕೆಲವೊಮ್ಮೆ ತಿಂಗಳ ಮುಟ್ಟಿನ ಬಟ್ಟೆ ತೊಳೆದಾಗ ಬರುವ ವಾಸನೆ! ನಿಡಿದಾದ ಉಸಿರುಬಿಟ್ಟಳು ವಸಂತಮಾಲಾ. ಬಾಸ್ ಪಾಷಾ ಬಂದಾಗ ಕೂಡಾ ಇಂತಹುದೆ ವಾಸನೆಯಿಂದ ಆಕೆಗೆ ಅಸಹ್ಯ ಆಗುತ್ತಿತ್ತು. ಆತ ಫೋನಿನಲ್ಲಿ ಮಾತನಾಡಿದರೂ ಆ ವಾಸನೆ ಕರೆಂಟಿನಂತೆ ಪಾಸಾಗುತ್ತಿದೆಯೇನೋ ಎಂಬಂತೆ ಆಕೆಯ ಮೈ ಹೀಕರಿಸುತ್ತಿತ್ತು.

ಕಾಫಿ ತಣ್ಣಗಾಗ್ತಿದೆ ಎಂದಾಗ ಬೆಚ್ಚಿಬಿದ್ದು ವಸಂತಮಾಲಾ ಕಾಫಿಯನ್ನು ಒಂದೇ ಗುಟುಕಿಗೆ ಗುಟುಕರಿಸಿದಳು. ಮೂಗಿನ ಹೊಳ್ಳೆಗಳು ಸಿಕ್ಕಾಪಟ್ಟೆ ಅದುರತೊಡಗಿದಾಗ ಕರ್ಚೀಫಿನಿಂದ ಮೂಗುಜ್ಜಿ ತೊಡೆದುಕೊಂಡಳು. ಒಳಗಿನಿಂದ ಒತ್ತಿ ಬರುವ ವಾಕರಿಕೆಯನ್ನು ತಡೆಹಿಡಿದು ವಸಂತಮಾಲಾ, ''ತುಂಬಾ ಥ್ಯಾಂಕ್ಸ್ ಸರ್'' ಎನ್ನುತ್ತಾ ಹೊರಡಲನುವಾದಳು. ರೇವತಿ ತನ್ನ ಗುದ್ದಲಿ ಹಲ್ಲುಗಳನ್ನು ಧಾರಾಳವಾಗಿ ಪ್ರದರ್ಶಿಸುತ್ತಾ, ''ಬರ್ತಾ ಇರೆ ವಸಂತ'' ಎಂದಾಗ ''ಸದ್ಯ ನೀನು ಬಂದು ನನ್ನ ಮೂಡ್ ಹಾಳು ಮಾಡ್ಬೇಡಮ್ಮಾ'' ಎಂದಂತಾಗಿ ಎರಡಕ್ಕೂ ಉತ್ತರವಾಗಿ, ''ಆಯ್ತು'' ಎಂದಳು.

ಮನೆಗೆ ಬಂದ ವಸಂತಾಮಾಲಾ ಆಫೀಸಿಗೆ ಫೋನಾಯಿಸಿ ಒಂದು ವಾರ ರಜೆ ಎಂದಾಗ ಆಪ್ತ ಸಹಾಯಕ ಮಧು ದನಿ ತಗ್ಗಿಸಿ, ''ನಿಮ್ಮ ಮೇಲೆ ವಿಚಾರಣೆ ಕಂಡಕ್ಟ್ ಆಗಬಹುದು. ಸಸ್ಪೆಂಡ್ ಕೂಡ ಮಾಡಬಹುದು ಅಂತಾ ಎಲ್ಲಾ ಮಾತಾಡಿಕೋತಿದ್ದಾರೆ ಮೇಡಂ. ಇನ್ನು ಕೆಲವು ವಿಷಯ ಈಗ ಫೋನಿನಲ್ಲಿ ಹೇಳೋಕಾಗೋಲ್ಲ. ಸಂಜೆ ಮನೆಗೆ ಬರ್ಲಾ ಮೇಡಂ'' ಎಂದು ಪಿಸುಗುಟ್ಟುವ ಸ್ವರದಲ್ಲಿ ನುಡಿದಾಗ ಕಸಿವಿಸಿಗೊಂಡಳು. ಮನೆಗೆ ಬಂದ ವಸಂತಮಾಲಾ ಆಫೀಸಿಗೆ ಫೋನಾಯಿಸಿ ಈ ವಿಷಯ ಈಗ ಫೋನಿಲ್ಲಿ ಹೇಳೋಕಾಗೊಲ್ಲ. ಮಧು ತಾನು ಆತ್ಮೀಯನಾಗಲು ಪ್ರಯತ್ನಿಸುತ್ತಿದ್ದಾನಾ ಅಥವಾ ಸಲಿಗೆ ತೆಗೆದುಕೊಳ್ಳುತ್ತಿದ್ದಾನಾ ? ಅಂದು ಕೊಳ್ತಾ ಹಾಗೇ ತಲೆಕೊಡವಿ ಜಾಡಿಸಿದಳು. ಅಲ್ಲಿನ ಬೆಳವಣಗೆ ತಿಳಿದುಕೊಳ್ಳಲೇಬೇಕಾದ್ದರಿಂದ, ''ಹೂಂ ಏಳುಗಂಟೆ ಒಳಗೆ ಬನ್ನಿ'' ಎಂದಾಗ ದನಿಯಲ್ಲಿನ ಗತ್ತು ಕಡಿಮೆಯಾಗಿತ್ತಾ... ?

ಡಿಪಾರ್ಟ್‌ಮೆಂಟಿಗೆ ಉತ್ತರಿಸಬೇಕಾದ ಪತ್ರವನ್ನು ರೆಡಿಮಾಡುತ್ತಾ ಕಂಪ್ಯೂಟರಿನ ಮುಂದೆ ಕುಳಿತ ವಸಂತಮಾಲಾಗೆ ಅವರೆ ಹೂವಿನ ಗಮಗಮ ಮೂಗಿಗೆ ನುಸುಳಿತು. ಅದು ಮಿದುಳಿಗೆ ತಲುಪುವ ಮೊದಲೇ ಮೂಗಿನ ಹೊಳ್ಳೆಗಳು ಬುಸುಬುಸುಗುಡಲು ಪ್ರಾರಂಭಿಸಿದ್ದವು. ಕತ್ತೆತ್ತದೆಯೇ ಕೇಳಿದಳು : ''ಏನು ಸಾಕಮ್ಮ''? ಅವರೆಹೂವಿನ ಪರಿಮಳಕ್ಕೂ ಕೆಲಸದ ಸಾಕಮ್ಮನಿಗೂ ಏನೋ ನಂಟು. ''ಗಂಟೆ ಮೂರಾಯ್ತಮ್ಮಾ. ಊಟ ರೆಡಿಯಾಗೈತೆ'' ಎಂದು ಅಕ್ಕರೆಯ ದನಿಯಲ್ಲಿ ನುಡಿದ ಅಜ್ಜಿಯನ್ನು ಅಭಿಮಾನದಿಂದ ದಿಟ್ಟಿಸಿದಳು. ವಯಸ್ಸಾದ ಸುಕ್ಕುಗಟ್ಟಿದ ಮುಖದಲ್ಲೂ ಕಳೆ. ದುಂಡು ಕುಂಕುಮ ಕಳೆಯಾಗಿ ಕಾಣಿಸುತ್ತಿತ್ತು. ಎತ್ತರದ ನಿಲುವಿನ ಸಾಕಮ್ಮ ಬಗ್ಗಿ ಎದ್ದು ಕೆಲಸ ಮಾಡುವುದರಿಂದ ನಾಲ್ಕೈದು ಮಕ್ಕಳನ್ನು ಹೆತ್ತಿದ್ದರೂ ಬೊಜ್ಜು ಹೊಟ್ಟೆ ಒಂದೂ ಇಲ್ಲದೆ ಅಚ್ಚುಕಟ್ಟಾಗಿ ಕಾಣಿಸುತ್ತಿದ್ದಳು. ಒಂದು ಕಾಲದಲ್ಲಿ ರೂಪವಂತೆಯೇ ಆಗಿರಬಹುದು ಅಂತ ಯೋಚಿಸುತ್ತಿದ್ದರೆ ಬುಸುಗುಡುವ ಮೂಗಿನ ಹೊಳ್ಳೆಗಳು ಬೌಬೌ ಎಂದು ಕೂಗಿ ಗುರುತು ಸಿಕ್ಕ ನಂತರ ಕುಂಯ್... ಕುಂಯ್ ಎನ್ನುತ್ತಾ ಕಾಲು ನೆಕ್ಕುತ್ತಾ ಓಡಾಡುವ ನಾಯಿಯಂತೆ ಉಸಿರನ್ನು ಸರಾಗವಾಗಿಸಿ ಮಲಗಿದವು.

ಊಟ ಮಾಡುತ್ತಾ ದೀರ್ಘವಾಗಿ ಆಲೋಚನೆಗಳಲ್ಲೇ ಕಳೆದುಹೋದ ವಸಂತಮಾಲಾಳ ಮೂಗು ಅದೇಕೋ ತೀರಾ ತೆಪ್ಪಗಾಗಿತ್ತು. ದಪ್ಪ ಮೆಣಸಿನಕಾಯಿಯ ಗಮಗಮವಾಗಲೀ ಹಾಗಲಕಾಯಿಯ ಗೊಜ್ಜಿನ ಪರಿಮಳವಾಗಲೀ ಅವಳ ಮೂಗನ್ನು ಸೇರಲೇ ಇಲ್ಲ. ಕೈ ತೊಳೆದು ಎದ್ದಾಗ ತಾನೇನು ಊಟ ಮಾಡಿದೆ ಎಂದು ಯೋಚಿಸಿದಳು. ಅರೇ! ಇದ್ಯಾಕೋ



## ನಮ್ಮ ಕಾರುಣ್ಯ

ತೇಪೆ, ತೇಪೆಯ ಕಪ್ಪು
ಕಂಬಳಿಯ ಹೊದಿಕೆಯನು
ಹೊದಿಸುತಿರುವೆವು ನಾವು
ಬೆಟ್ಟಕ್ಕೆ, ಚಳಿಯಾಗದಿರಲೆಂದು.

ಹೆಣದ ಮಳೆಯನು ಬರಿಸಿ
ನಂಜೆನೆರಕವ ತುಂಬ
ಹರಿಯ ಬಿಟ್ಟಿಹೆವಿಂದು
ನದಿಗೆ, ಬಣ್ಣವಿರಲೆಂದು.

ಮದ್ದು ಗುಂಡಿನ ಹೊಗೆಯ
ಧಗೆಯ ಸೀರೆಯ ಸುತ್ತಿ
ಸಿಂಗರಿಸುತಿಹೆವಿಂದು
ಬಯಲು, ಬೆತ್ತಲಿರಬಾರದೆಂದು.

ಅವಳ ಮೈಸಿರಿ ಮೇಲೆ
ಕೆಂಪು ಹಚ್ಚೆಯ ಬರೆದು
ಗಾಯಗೊಳಿಸಿಹೆವಿಂದು
ಭೂಮಿ, ಚೆಂದವಿರಲೆಂದು.

ಹೊಲ ಗದ್ದೆಗಳ ಕೆಡಿಸಿ
ತಂತಿ ಬೇಲಿಯ ಕಟ್ಟಿ
ಮಂದಿರ ಮಸೀದಿಗಳ
ಕಟ್ಟುತ್ತಿಹೆವಿಂದು
'ಧರ್ಮ', ಸ್ಥಾವರವಾಗಿರಲೆಂದು.

ಮಾರುತಿ ದಾಸಣ್ಣವರ
ಕನ್ನಡ ಅಧ್ಯಾಪಕರು, ಜವಾಹರ ನವೋದಯ ವಿದ್ಯಾಲಯ
ಗಾಳಿಬೀಡು - ೫೭೧ ೨೦೧

ವಿಚಿತ್ರವಾಯ್ತಲ್ಲ! ಬರೀ ಮನುಷ್ಯರ ಹತ್ತಿರ ಬರುವ ತರತರದ ವಾಸನೆ ಬಿಟ್ಟರೆ ಉಳಿದೆಲ್ಲ ವಾಸನೆಗಳು ಹತ್ತಿರ ಸುಳಿಯದೆ ಮುಷ್ಕರ ಹೂಡಿಬಿಟ್ಟಿವೆ. ಇಲ್ಲ, ಈ ಕೇಸಿನಿಂದ ಹೊರ ಬಂದನಂತರ ಯಾವುದಾದರೂ ಒಳ್ಳೆ ಡಾಕ್ಟರ್ ಹತ್ತಿರ ಹೋಗಬೇಕು. ಇದ್ದಕ್ಕಿದ್ದಂತೆ ಗ್ರಹಣೇಂದ್ರಿಯಗಳು ಈ ಪರಿ ಸೆನ್ಸಿಟಿವ್ ಯಾಕಾದವು ಅಂತ ಕಾರಣ ಕೇಳಬೇಕು ಎಂದು ಕೊಂಡಳು. ಇಷ್ಟು ದಿನ ಅಲಕ್ಷ್ಯ ಮಾಡಿದೆ ಎಂದು ಅವಳ ಮೇಲೆ ಅವಳಿಗೇ ಅಸಹನೆ ಯಾಯಿತು. ಮೊದಲೆಲ್ಲ ಅವಳಿಗೆ ಈ ವಾಸನೆ ಬರುವುದು ಖುಷಿಯ ಸಂಗತಿಯಾಗಿತ್ತು. ಚಿಕ್ಕವಳಿದ್ದಾಗ ಅವಳ ಅಣ್ಣ ಹತ್ತಿರ ಬಂದಾಗ ''ಹೂಂ... ನಿನ್ನ ಹತ್ತಿರ ಚಿಕ್ಕು ಹಣ್ಣಿನ ವಾಸನೆ ಬರುತ್ತಿದೆ. ನಂಗೂ ಬೇಕು'' ಅಂತ ಹಠ ಹಿಡಿಯುತ್ತಿದ್ದಳು. ಮುಂದೆಂದೋ ಗೊತ್ತಾಯಿತು. ಅದು ಚಿಕ್ಕುವಿನ ವಾಸನೆ ಅಲ್ಲ ಬೀರಿನ ವಾಸನೆ ಅಂತ. ಆದರೂ ಎಲ್ಲರೂ ''ಏನು ಚುರುಕಪ್ಪಾ ಅವಳ ಮೂಗು, ಯಾವ ವಾಸನೆ ಇದ್ರೂ ಕಂಡುಹಿಡಿದುಬಿಡ್ತಾಳೆ'' ಅಂತ ಶಿಫಾರಸ್ ಮಾಡ್ತಿದ್ದಾಗ ಎಲ್ಲರಿಗಿಂತ ವಿಶೇಷವಾದ ಶಕ್ತಿ ತನ್ನಲ್ಲಿದೆ ಅನ್ನಿಸಿ ಖುಷಿಪಟ್ಟಿದ್ದಳು. ಅಣ್ಣ ''ನೀನು ಹಿಂದಿನ ಜನ್ಮದಲ್ಲೆಲ್ಲೋ ನಾಯಿ ಆಗಿದ್ದಿರಬೇಕು'' ಅಂತ ರೇಗಿಸುತ್ತಾನೂ ಇದ್ದ. ಯಾರ ಮನೆಗೆ ಹೋದರೂ ಹೊದೆಯಲು ಕೊಟ್ಟ ಬೆಡ್‌ಶೀಟ್ ಪಿಲ್ಲೋಗಳನ್ನು ಮೂಸಿ ನೋಡಿ ಮುಖ ಕಿವುಚುತ್ತಿದ್ದಳು. ಬೆಡ್‌ಶೀಟನ್ನು ತಿರುಗಮುರುಗ ಅಂದರೆ ಒಳಪದರನ್ನು ಮೇಲೆ ಬರುವಂತೆ ಹೊದೆದುಕೊಂಡು ಪಿಲ್ಲೋ ಕವರ್‌ಗೆ ಕರ್ಚೀಫ್ ಹಾಕಿ ಮಲಗುತ್ತಿದ್ದಳು. ಇದಕ್ಕಾಗಿ ಎಲ್ಲರಿಂದ ಮಹಾ ಕೊಬ್ಬು ಎಂಬ ಬಿರುದು ಬೇರೆ ಸಿಕ್ಕಿತ್ತು.

ವಸಂತಮಾಲಾಗೆ ಈ ವಾಸನೆಯ ಜೊತೆ ಅದರ ಜಾಡನ್ನು ಕಂಡುಹಿಡಿಯುವ ಖಯಾಲಿ ಹುಟ್ಟಿದ್ದೇ ಒಂದು ದುರಂತವಿರಬಹುದು. ವಾಸನೆ ಬಂದಕೂಡಲೇ ಇದೆಂತಹ ವಾಸನೆ ಇದು, ಇವರ ಹತ್ತಿರ ಯಾಕೆ ಬರುತ್ತಿದೆ, ಹಿಂದೆ ಯಾರ್ಯಾರ ಹತ್ತಿರ ಈ ವಾಸನೆ ಬರುತ್ತಿತ್ತು, ಅವರ ಗುಣಸ್ವಭಾವಗಳೇನು, ಅವರಿಗೂ ಇವರಿಗೂ ಯಾವ ವಿಷಯದಲ್ಲಿ ತಾಳೆಯಾಗುತ್ತದೆ ಎಂದೆಲ್ಲಾ ಲೆಕ್ಕ ಹಾಕಲು ಶುರುಮಾಡಿ ಕೊನೆಗೂ ಆ ವಾಸನೆಯ ಕಾರಣವನ್ನು ಕಂಡುಹಿಡಿದೇ ತೀರಬೇಕು, ಅಲ್ಲಿಯವರೆಗೂ ಅವಳ ಮೂಗಿಗಾಗಲೀ ಮನಸ್ಸಿಗಾಗಲೀ ವಿಶ್ರಾಂತಿಯಿಲ್ಲ.

ವಸಂತಮಾಲಾ ಬಹುಶಃ ಹೈಸ್ಕೂಲು ಹುಡುಗಿ ಇದ್ದಿರಬಹುದು. ಅವರ ಮನೆ ಹತ್ತಿರವೇ ಒಬ್ಬ ಟೈಲರ್‌ಳ ಮನೆ. ಆಗ ಸುತ್ತಮುತ್ತ ಬೇರೆ ಯಾರೂ ಟೈಲರ್‌ಗಳಿರಲಿಲ್ಲ. ಹಾಗಾಗಿ ಆಕೆಗೆ ಬಹಳ ಡಿಮ್ಯಾಂಡು. ಅಲ್ಲದೇ ಅವಳ ದುಡಿತದಲ್ಲೇ ಅವರ ಮನೆಯ ರಥ ಸಾಗಬೇಕಿತ್ತು. ತಂದೆ ಇರಲಿಲ್ಲ. ತಾಯಿ ವಾತವೋ ಎಂತದೋ ಕಾಯಿಲೆಯಿಂದ ಹಾಸಿಗೆ ಹಿಡಿದಿದ್ದರು. ಮದುವೆಯಾದ ಅಕ್ಕ ಮೂರು ದಿನಕ್ಕೊ ಗಂಡನ ಜೊತೆ ಜಗಳವಾಡಿ ಮಕ್ಕಳ ಸಮೇತ ಇಲ್ಲೇ ಜಾಂಡಾ ಊರುತ್ತಿದ್ದಳು. ಇನ್ನು ತಮ್ಮಂದಿರು ತಂಗಿ ಹೀಗೆ ಇವರೆಲ್ಲರ ಊಟದ ದಾರಿಯೂ ಇದೊಂದೆ. ಅವರ ಮನೆಯಲ್ಲಿ ಬೆಳಿಗ್ಗೆ ಆರಕ್ಕೆ ಮಿಶನ್ ತುಳಿಯಲು ಸುರುವಾದರೆ ರಾತ್ರಿ ಹನ್ನೆರಡು ಒಂದಾದರೂ ಮಿಶನ್ನಿನ ಕಟ ಕಟ ಕೇಳಿಸುತ್ತಲೇ ಇರುತ್ತಿತ್ತು, ಅಕ್ಕಪಕ್ಕದ ಮನೆಗಳಿಗೆ. ಅವರ ಮನೆಗೆ ಹೋದರೆ ಎಂತಹ ಕೆಟ್ಟವಾಸನೆ ಎಂದರೆ ಅಳತೆ ಕೊಡುವ ಐದು ನಿಮಿಷಗಳು ವಸಂತಮಾಲಾಗೆ ಶಿಕ್ಷೆ ಎನಿಸಿಬಿಡುತ್ತಿತ್ತು. ಮನೆ ತುಂಬ ಬಟ್ಟೆಯ ರಾಶಿ. ಮನೆಯನ್ನು ಗುಡಿಸಿ ಒರೆಸುವ ಸಾಹಸಕ್ಕೆ ಅವರೆಂದೂ ಕೈಹಾಕುತ್ತಿರಲಿಲ್ಲ ವೆನಿಸುತ್ತದೆ. ಅವರ ತಾಯಿಗೆ ಕೆಲವೊಮ್ಮೆ ಮಲಗಿದಲ್ಲೇ ಎಲ್ಲಾ ಆಗುತ್ತಿದ್ದುದರಿಂದ ಅವರನ್ನು ಸ್ನಾನ ಮಾಡಿಸುವಷ್ಟು ಬಿಡುವು ಇವರಾರಿಗೂ ಇರುತ್ತಿರಲಿಲ್ಲ. ಹಾಗಾಗಿ ಚುಂಗು ನಾತ ಬರುತ್ತಿತ್ತು. ಅಕ್ಕನ ಮಕ್ಕಳು ಕಂಡಕಂಡಲ್ಲೇ ಮೂತ್ರ ಮಾಡಿ ಒರೆಸಲಾಗದೆ ಅಲ್ಲೇ ಒಣಗಿ ಅದು ವಾಸನೆಯಾಗಿ ಮನೆಯೆಲ್ಲಾ ಹಬ್ಬಿರುತ್ತಿತ್ತು. ಇವೆಲ್ಲದರ ನಡುವೆ ವಿಪರೀತ ಬೆಳ್ಳುಳ್ಳಿ ತಿನ್ನುವ ಅವರ ಮನೆಯಲ್ಲಿ ಅದೂ ಕೂಡಾ ಆ ವಾಸನೆಯೊಂದಿಗೆ ಬೆರೆತು ಘಾಟು ವಾಸನೆಯಾಗಿ ಅವರ ಮನೆ ಹೊಸ್ತಿಲು ತುಳಿಯುವ ಮೊದಲೇ ವಾಕರಿಕೆ ಶುರುವಾಗುತ್ತಿತ್ತು. ಆಕೆಗೊಬ್ಬ ಅಡನಾಡಿ ತಮ್ಮ, ಇವಳು ದುಡಿದದ್ದನ್ನೆಲ್ಲಾ ಇಸ್ಕೊಂಡು ಕಳೆಯಲಿಕ್ಕೆ. ಅವನಿಗೂ ಆಕೆಗೂ ಆಗಾಗ ಜಗಳ. ಅವನು ದುಡ್ಡನ್ನೆಲ್ಲ ಕದ್ದು ಮನೆಬಿಟ್ಟು ಓಡಿಹೋಗು ತ್ತಿದ್ದರೆ ಪುತ್ರವ್ಯಾಮೋಹಿ ತಾಯಿ ಇಡೀ ದಿನ ಆಕೆಗೆ ಶಾಪ ಹಾಕುತ್ತಾ ಕುಳಿತಿರುತ್ತಿತ್ತು. ದುಡ್ಡು ಖಾಲಿಯಾದ ನಂತರ ಆತ ಮನೆಗೆ ಬರುತ್ತಿದ್ದ. ಇವರೆಲ್ಲರ ಸಮಸ್ಯೆಗಳನ್ನು ಕಟ್ಟಿಕೊಂಡ ಟೈಲರ್‌ಗೆ ಮದುವೆ ಮಕ್ಕಳು ಎನ್ನುವ ಕನಸು ಕಾಣಲು ಬಿಡುವಿರಲಿಲ್ಲ. ಅದರೊಂದಿಗೆ ಭಾವನೇ ಆಕೆಯನ್ನು ಕೆಡಿಸಿದ್ದಾನೆ ಎಂಬ ಅಕ್ಕಪಕ್ಕದವರ ಗುಸುಗುಸು. ಆದರೆ ಇದ್ಯಾವುದೂ ತನಗೆ ಸಂಬಂಧಿಸಿದ್ದೇ ಅಲ್ಲ ಎನ್ನುವಂತೆ ಇಡೀ ದಿನ ಮಿಶನ್ನಿನ ಕಟಕಟದಲ್ಲಿ ಆಕೆ ಮುಳುಗಿಹೋಗಿರುತ್ತಿದ್ದಳು, ಅದೊಂದು ತಪಸ್ಸು ಎನ್ನುವಂತೆ. ಮಿಶನ್ನಿನ ಹೊರತಾಗಿ ಆಕೆಯನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ ವಸಂತಮಾಲಾಗೆ. ಆಗೆಲ್ಲಾ ಆಕೆಯ ಬಗ್ಗೆ ಅನುಕಂಪ ಉಂಟಾಗಿ ಆ ವಾಸನೆಯೊಳಗೆ ಹೇಗಾದರೂ ಇರಬಹುದು ಅವಳು ? ಆ ವಾಸನೆ ಕುಡಿದು ಕುಡಿದು ಒಂದು ದಿನ ನಿತ್ರಾಣವಾಗಿ ಕೃಶಳಾಗಿ, ಕೊನೆಗೆ ಅದೃಶ್ಯಳಾಗಿ ಬರೀ ಮಿಶನ್ನಿನ ಕಟಕಟ ಮಾತ್ರ ಕೇಳಿಸುತ್ತಿರುವ ಹಾಗೆ ಕಲ್ಪಿಸಿಕೊಳ್ಳುತ್ತಿದ್ದಳು. ಈ ವಾಸನೆ ಶೋಷಣೆಯ ರೂಪವಾಗಿ ಕಂಡುಬರುತ್ತಿತ್ತು ಹಾಗೂ ಮೂಗಿರುವುದರಿಂದಲೇ ವಾಸನೆಯ ಗ್ರಹಣ ಸಾಧ್ಯವಾಗುತ್ತಿರುವುದರಿಂದ ಮನುಷ್ಯನಿಗೆ ಮೂಗೇ ಇರಬಾರದಿತ್ತು ಎಂಬ ಯೋಚನೆ ಬಾರದೇ ಇರಲಿಲ್ಲ.

ಮುಂದೆ ವಾಸನೆ ಕುರಿತಾದ ಅವಳ ಗ್ರಹಿಕೆ ವ್ಯಾಖ್ಯಾನ ಮಾಹಿತಿ ಹೆಚ್ಚಿದಂತೆ ಗೆಳತಿಯರು ಆಕೆಗೆ ವಾಸನೆ ವಸಂತಮಾಲಾ ಎಂಬ ಬಿರುದನ್ನು ದಯಪಾಲಿಸಿದರು. ಅದು ಗಮನಕ್ಕೆ ಬಂದಮೇಲೆ ವಸಂತಮಾಲಾ ವಾಸನೆಯ ಬಗ್ಗೆ ಮಾತಾಡುವುದನ್ನು ಕಡಿಮೆಮಾಡಿದಳು. ಹೀಗೆ ಮಾತಾಡುವುದನ್ನು ಕಡಿಮೆ ಮಾಡಿದ ಮೇಲಂತೂ ವಾಸನೆಯ ಗ್ರಹಿಕೆ ಜಾಸ್ತಿಯಾಗ ತೊಡಗಿತ್ತು. ನಂತರ ಈ ವಾಸನೆಗೆ ಬಗೆಬಗೆಯ ಬಣ್ಣಗಳನ್ನು ನೀಡಿದಳು. ಅವಳ ಡೈರಿಯ ಪುಟಗಳಲ್ಲಿ ವಿವಿಧ ಬಣ್ಣಗಳ ಹೆಸರು, ಆ ಹೆಸರಿನ ಕೆಳಗೆ ಯಾವ್ಯಾವ ವಾಸನೆ ಯಾವ್ಯಾವ ಬಣ್ಣದ ಗುಂಪಿಗೆ ಸೇರಿರುತ್ತೆ ಎಂಬುದರ ವಿವರವಿರುವ ಒಂದು ಚಾರ್ಟ್ ರೆಡಿಯಾಯಿತು. ಪ್ರತಿನಿತ್ಯ ಅವಳಿಗೆ ಬಂದ ವಿಶೇಷ ವಾಸನೆಯನ್ನು ಗ್ರಹಿಸಿ ಅದನ್ನು ವಿಂಗಡಿಸಿ ಬರೆದಿಟ್ಟು ಕೊಳ್ಳುವುದನ್ನು ಅಭ್ಯಾಸ ಮಾಡಿಕೊಂಡಳು. ಒಮ್ಮೆ ಒಬ್ಬ ವ್ಯಕ್ತಿಯಿಂದ ಒಂದು ವಾಸನೆಯನ್ನು ಗ್ರಹಿಸಿ, ವಿಂಗಡಿಸಿ ಅವನನ್ನು ಆ ಗ್ರೂಪಿಗೆ ಸೇರಿಸಿದ ಮೇಲೆ ಅವರ ಬಗ್ಗೆ ಅವಳದೊಂದು ಅಭಿಪ್ರಾಯ ಸಿದ್ಧವಾಗಿಬಿಡುತ್ತಿತ್ತು. ಇದರಿಂದ ಬಹಳಷ್ಟು ಸಾರಿ ಉಪಕಾರವೇ ಆಗಿದೆಯೆಂದೂ ಅವರ ಒಳಮನಸ್ಸಿನ ಬಾನಗಡಿಗಳು ಇವಳಿಗೆ ತೆರೆದ ಪುಸ್ತಕದಂತೆನಿಸಿ ಅನಾಹುತಕ್ಕೂ ಮೊದಲೇ ಅಪಾಯದ ಸೂಚನೆ ಸಿಕ್ಕಿಬಿಡುತ್ತಿತ್ತೆಂಬುದು ಅವಳ ಅಭಿಪ್ರಾಯ.

ಕರೆಗಂಟೆ ಸದ್ದಾಯಿತು. ಊಟ ಮಾಡಿದ ಕೈಗಳು ಒಣಗಿಹೋಗಿದ್ದವು. ಕೈ ತೊಳೆದು ಕೊಂಡು ಹಾಲಿಗೆ ಬರುವಷ್ಟರಲ್ಲಿ ಷೂ ರ್‍ಯಾಕಿನ ವಾಸನೆ ದುರ್ನಾತ! ಅಣ್ಣ ಬಂದಿರಬೇಕು ಎಂದುಕೊಂಡಳು. ಈ ವಾಸನೆ ತೀರಾ ಪರಿಚಿತ. ಯಾರ್‍ಯಾರು ಈ ಗುಂಪಿಗೆ ಸೇರಿದ್ದಾರೆಂದು ಆಗಲೇ ಡೈರಿಯಲ್ಲಿ ನಮೂದಿಸಿದ್ದಾಳೆ. ಸೀನಿಯರ್ ಹೆಡ್‌ಕ್ಲಾರ್ಕ್ ಪದ್ಮನಾಭಯ್ಯ, ದೊಡ್ಡಪ್ಪಾ, ಅಣ್ಣ ಹೀಗೆ ಸಾಕಷ್ಟು ಜನರು ಪಟ್ಟಿಯಲ್ಲಿದ್ದಾರೆ. ಆದರೆ ಅವರ ಸ್ವಭಾವದ ಬಗ್ಗೆ ನಿರ್ದಿಷ್ಟ ಸ್ವರೂಪ ಇನ್ನೂ ಸಿಕ್ಕಿಲ್ಲ. ಸೋಫಾದ ಮೇಲೆ ಕೂರುತ್ತಾ, ''ಊಟಕ್ಕೆ ರೆಡಿ ಮಾಡಿ ಅಜ್ಜಿ ಅಣ್ಣನಿಗೆ'' ಅಂದಳು. ನಂದಾಗಿದೆ ಎಂದ ಗಡಸುದನಿಯಲ್ಲಿ. ಊದಿಕೊಂಡ ಮುಖನೋಡಿದರೆ ಚೆನ್ನಾಗಿ ಕ್ಲಾಸು ತೆಗೆದುಕೊಳ್ಳಲು ಬಂದಿರಬೇಕು ಎನಿಸುತ್ತಿತ್ತು. ಇನ್ನು ಎರಡು ಮೂರು ತಾಸುಗಳು ಸತತ ಬೈಗುಳ ಎಂದು ಯೋಚಿಸುತ್ತಿದ್ದಂತೆ ಅರೆ! ಈ ಬೈಗುಳ ಗಳಿಗೂ ಶೂ ರ್‍ಯಾಕಿನ ವಾಸನೆಗೂ ಏನೋ ಸಂಬಂಧವಿದೆ ಎನಿಸತೊಡಗಿತು. ಏಕೆಂದರೆ, ಈ ವಾಸನೆ ಇರೋರೆಲ್ಲ ವಿಪರೀತ ಕೊರೆತ, ತಮ್ಮ ಬಗ್ಗೆ ಅಹಂಭಾವ, ತಮ್ಮ ಮೂಗಿನ ನೇರಕ್ಕೆ ಯೋಚಿಸುವವರಾಗಿದ್ದರು.

''ನೀನು ಆಫೀಸಿಗೆ ರಜಾ ಹಾಕಿದ್ದು ಸುಜಾತ ಹೇಳಿದಳು ಅದಕ್ಕೆ ಬಂದೆ'' ಎಂದ. ಈ ಮಾತಿನಲ್ಲಿ ಆಕ್ಷೇಪಣೆ ಎದ್ದುಕಾಣುತ್ತಿತ್ತು. ಸುಮ್ಮನೆ ಗೋಣು ಅಲ್ಲಾಡಿಸಿದಳು. ''ಲಾಯರ್

ವಸಂತಮಾಲಾಗೆ ಈ ವಾಸನೆಯ ಜೊತೆ ಅದರ ಜಾಡನ್ನು ಕಂಡುಹಿಡಿಯುವ ಖಯಾಲಿ ಹುಟ್ಟಿದ್ದೇ ಒಂದು ದುರಂತವಿರಬಹುದು. ವಾಸನೆ ಬಂದಕೂಡಲೇ ಇದೆಂತಹ ವಾಸನೆ ಇದು, ಇವರ ಹತ್ತಿರ ಯಾಕೆ ಬರುತ್ತಿದೆ, ಹಿಂದೆ ಯಾರ್ಯಾರ ಹತ್ತಿರ ಈ ವಾಸನೆ ಬರುತ್ತಿತ್ತು , ಅವರ ಗುಣಸ್ವಭಾವಗಳೇನು, ಅವರಿಗೂ ಇವರಿಗೂ ಯಾವ ವಿಷಯದಲ್ಲಿ ತಾಳೆಯಾಗುತ್ತದೆ ಎಂದೆಲ್ಲಾ ಲೆಕ್ಕ ಹಾಕಲು ಶುರುಮಾಡಿ ಕೊನೆಗೂ ಆ ವಾಸನೆಯ ಕಾರಣವನ್ನು ಕಂಡುಹಿಡಿದೇ ತೀರಬೇಕು. ಅಲ್ಲಿಯವರೆಗೂ ಅವಳ ಮೂಗಿಗಾಗಲೀ ಮನಸ್ಸಿಗಾಗಲೀ ವಿಶ್ರಾಂತಿಯಿಲ್ಲ.



ವಿಚಾರಿಸ್ತಿದ್ದೆಯಂತೆ,'' ಎಂದ. ''ಹೌದು'' ಎಂದಳು ಚುಟುಕಾಗಿ. ''ಏನಿದು ಹಗರಣ ? ಪೇಪರಿನಲ್ಲೆಲ್ಲ ಸುದ್ದಿ. ನಿನ್ನೆ ಮೊನ್ನೆಯಿಂದ ಮನೆಗೆ ಫೋನೋ ಫೋನು. ಯಾರು ಸಿಕ್ಕಿದರೂ ನಿನ್ನದೇ ಸುದ್ದಿ.'' ಅವನ ದನಿ ಸಣ್ಣ ಮಕ್ಕಳನ್ನು ಗದರಿಸುವಂತಿತ್ತು. ಎಲ್ಲರಿಗೂ ಅಷ್ಟೆ, ಮದುವೆಯಾಗಿ ಮಕ್ಕಳಾಗಿಬಿಟ್ಟರೆ ದೊಡ್ಡವರಂತೆ ಕಾಣುತ್ತಾರೆ. ಇಲ್ಲದಿದ್ದರೆ ನಮ್ಮ ವಯಸ್ಸಿಗೆ ಅನುಭವಕ್ಕೆ ವಿದ್ಯೆಗೆ ಬೆಲೇನೇ ಇಲ್ಲದ ಹಾಗಾಡ್ತಾರೆ ಎಂದುಕೊಳ್ಳುತ್ತಾ, ''ಅವರೆಲ್ಲರಿಗೂ ನಮ್ಮನೆ ಫೋನ್ ನಂಬರ್ ಗೊತ್ತಿಲ್ವ ? ನಿನಗೆ ಕೇಳೋ ಬದಲು ನನಗೇ ಕೇಳಿದ್ರೆ ಹೇಳ್ತಾ ಇದ್ದೆ. ಅಷ್ಟಕ್ಕೂ ನಾನ್ಯಾಕೆ ಯಾರಿಗಾದ್ರೂ ಕನ್‌ವಿನ್ಸ್ ಮಾಡಬೇಕು ? ಅವರೆಲ್ಲರ ಕಾಳಜಿ ನನಗೆ ಗೊತ್ತಿಲ್ಲದ್ದೇನಲ್ಲ ಬಿಡು. ಯಾರ್‍ಯಾರ ಫೋನ್ ಬಂದಿರುತ್ತೆ, ಯಾವ ಕೆಟ್ಟ ಕುತೂಹಲಕ್ಕೆ ಮಾಡಿರ್‍ತಾರೆ, ಅವರೇನು ಕೇಳಿರ್‍ತಾರೆ, ಅದಕ್ಕೆ ನೀನು ಹೇಗೆ ರಿಯಾಕ್ಟ್ ಮಾಡಿರ್‍ತೀಯಾ ಅಂತ ನಾನೇ ಹೇಳಬಲ್ಲೆ. ನನಗೆ ಅದ್ಯಾವ ವಿವರಣೆಯ ಅವಶ್ಯಕತೆಯೂ ಇಲ್ಲ'' ಎಂದಳು ಖಾರವಾಗಿ.

''ನಿನಗ್ಯಾರ ಅವಶ್ಯಕತೆನೂ ಇಲ್ಲಾ, ಆದರೆ ನಿನ್ನ ಅಣ್ಣ ಅನ್ನಿಸಿಕೊಂಡ ತಪ್ಪಿಗೆ ನನಗೆ ಎಲ್ಲದರ ಅವಶ್ಯಕತೇನೂ ಇದೆ'' ಎಂದು ಶುರುಮಾಡಿದ. ಏನೋ ಒಂದಷ್ಟು ಒದರಲು ಬಂದಿದ್ದಾನೆ, ಸುಮ್ಮನೆ ಕೇಳಿಸಿಕೊಳ್ಳುವುದು ಬೆಟರ್ ವಾದವಿವಾದಕ್ಕಿಂತ ಅಂತ ಸುಮ್ಮನೆ ಕುಳಿತಳು.

ತಾನು ಎಷ್ಟು ಕಷ್ಟಪಟ್ಟು ಎಲ್ಲರ ಜವಾಬ್ದಾರಿ ಹೊತ್ತುಕೊಂಡೆ, ಅಕ್ಕಂದಿರ ಮದುವೆಗೆ, ನನ್ನ ಓದಿಗೆ ಎಲ್ಲಾ ಖರ್ಚು ಮಾಡಿ ನಾನು ಹೇಗೆ ತನ್ನ ಸುಖವನ್ನು ಅಲಕ್ಷಿಸಿದೆ, ಅದರೆ ಎಲ್ಲರೂ ಸೇರಿ ತನಗೆ ಎಷ್ಟೆಲ್ಲಾ ಅನ್ಯಾಯ ಮಾಡಿದರು ಎಂಬ ತನ್ನ ಎಂದಿನದೇ ಧಾಟಿಯ ಡೈಲಾಗುಗಳನ್ನು ಉದುರಿಸ ತೊಡಗಿದ. ಅದರ ಹಿಂದಿನ ಸ್ವಾರ್ಥ, ಕುತಂತ್ರಗಳನ್ನು ಬಿಚ್ಚಿ ಒದರಿಬಿಡಬೇಕೆಂಬ ರೋಷ ಉಕ್ಕಿದರೂ ಇದು ಸಮಯ ಅಲ್ಲ ಎಂಬ ವಿವೇಚನೆಯಿಂದ ಎತ್ತಲೋ ನೋಡುತ್ತಾ ಅಸಡ್ಡೆಯಿಂದ ಕುಳಿತುಕೊಂಡಳು ವಸಂತಮಾಲಾ. ''ಇವನು ದೊಡ್ಡವನು ಅನ್ನೊ ಕಾರಣಕ್ಕೆ ಊರೆಲ್ಲಾ ತನ್ನ ಸಾಹಸವನ್ನು ಬಣ್ಣಿಸಿ ಶಹಬಾಸಗಿರಿ ತೆಗೆದುಕೊಳ್ಳುತ್ತಿದ್ದಾನೆ ಅನ್ನೋ ಕಾರಣಕ್ಕೆ ನಾವು ಜೀ ಹುಜೂರ್ ಎನ್ನಬೇಕು. ಹೂಸು ಬಿಡುವುದಕ್ಕೂ ಅವನಪ್ಪಣೆ ಕೇಳಬೇಕು, ಅವನನ್ನು ಬಿಟ್ಟರೆ ಬೇರೆ ಯಾರಿಗೂ ತಲೆಯಲ್ಲಿ ಗುಲಗುಂಜಿಯಷ್ಟೂ ಬುದ್ಧಿ ಇಲ್ಲ ಎಂದು ತನ್ನ ಮೂಗಿನ ನೇರಕ್ಕೆ ಯೋಚಿಸುವ ಅವನಿಗೆ ನಾನು ಕ್ಯಾರೆ ಎನ್ನದೇ ನನ್ನಿಷ್ಟದಂತೆ ಬದುಕುತ್ತಿರುವುದೇ ಉರಿಯುತ್ತಿತ್ತು. ಈಗ ಇದೊಂದು ಒಳ್ಳೆಯ ಅವಕಾಶ ಅಂತ ಹೇಳ್ತಾನೆ ಇದ್ದ. ''ನೀನು ಮದುವೆಯಾಗಿದ್ರೆ ಈ ಸಮಸ್ಯೆ ಇರ್‍ತಿತ್ತಾ ? ನನಗಿಂತ ಹೆಚ್ಚು ಸಂಬಳ ತಗೋತಿಯಾ ಅನ್ನೋದೇ ದುರಂಹಕಾರ ನಿನಗೆ, ನನ್ನ ಮಾತು ಕಾಲ ಕಸ ನಿನಗೆ. ಈಗ ಪೇಪರಿನಲ್ಲೆಲ್ಲಾ ಈ ಹಗರಣ ಓದಿ ನಿನ್ನನ್ಯಾರು ಮದುವೆಯಾಗ್ತಾರೆ ? ಇಷ್ಟಾದರೂ ನನಗೆ ಒಂದು ಮಾತು ತಿಳಿಸಬೇಕು ಅನ್ನಿಸ್ಲಿಲ್ವಲ್ಲಾ ನಿಂಗೆ'' ಹೀಗೆ ಕಂಟಿನ್ಯೂ... ಆಗ್ತಾ ಇತ್ತು. ಉಸಿರು ಕಟ್ಟುವ ವಾಸನೆಗೆ ಫ್ಯಾನ್ ಹಾಕಿದಳು. ಅಜ್ಜಿ ಎರಡು ಕಪ್ ಸ್ಟ್ರಾಂಗ್ ಕಾಫಿ ತನ್ನಿ ಎಂದು ಕೂಗಿದಳು.

ಇಷ್ಟೆಲ್ಲಾ ಹಗರಣ ಆದಮೇಲೆ ಕುಸಿದುಹೋಗಿರ್‍ತಾಳೆ, ಈಗ ನನ್ನ ಅಧಿಕಾರದ ಧ್ವಜ ಸ್ಥಾಪಿಸಲು ಒಳ್ಳೆ ಸಮಯ ಎಂದುಕೊಂಡರೆ ಇವಳಿಗೆ ಒಂದಿಂಚೂ ಕೊಬ್ಬು ಕಡಿಮೆ ಆಗಿಲ್ವಲ್ಲಾ... ಅರೆ ! ಅಣ್ಣ ಯಾರ ಹತ್ತಿರ ಈ ಮಾತು ಹೇಳ್ತಿದ್ದಾನೆ ? ಎಲ್ಲೋ ಹಿಂದಲೆಯಲ್ಲಿ ಕುಳಿತು ಈ ಮಾತು ನುಡಿದಂತಾಯ್ತು, ಇವನನ್ನು ನೋಡಿದ್ರೆ ಮಾತೆಲ್ಲಾ ಮುಗಿದೇ ಹೋಯ್ತು ಎನ್ನುವಂತೆ ಕುಳಿತಿದ್ದಾನೆ.

ಸಂಜೆ ಪಿ.ಎ. ಬಂದ. ಈ ದಿನ ಅವನ ಮುಖದಲ್ಲೇನೋ ಆತ್ಮವಿಶ್ವಾಸ. ಏನೋ ಲಂಚ ತಿಂದು ಸಸ್ಪೆಂಡ್ ಆದವರಿಗೆ ಹೇಳುವಂತೆ, ''ಹೀಗಾಗಬಾರದಿತ್ತು ನೋಡ್ರಿ ಮೇಡಂ. ನಾನು ಆ ಟೈಮಾಗೆ ರಜಾ ಹಾಕದೇ ಇದ್ದಿದ್ರೆ ಹಿಂಗೆಲ್ಲಾ ಆಗಲಿಕ್ಕೆ ಅವಕಾಶಾನಾ ಇರ್ತಿರಲಿಲ್ಲ'' ಅಂತ ತಾಜಾ ಬೆಣ್ಣೇನೆ ಸವರಲಿಕ್ಕೆ ಶುರು ಮಾಡಿದ. ''ಸರಿ ಈಗೇನು ಕತೆ ಆಫೀಸಿನಲ್ಲಿ? ಅದನ್ನು ಮೊದಲು ಹೇಳು'' ಎಂದಳು. ಬಾಸ್ ಮತ್ತು ಅವರ ಪಿ.ಎ. ಅಸಿಸ್ಟೆಂಟ್ ಡೈರೆಕ್ಟರ್ ಕೆಲವು ಕ್ಲರ್ಕಗಳು ಸೆಕ್ಷನ್ ಆಫೀಸರ್‌ಗಳು ಎಲ್ಲಾ ಸೇರಿ ಡೆಲ್ಲಿಗೆ ಫೋನ್ ಮಾಡಿ, ಇದನ್ನು ಇಲ್ಲಿಗೆ ಬಿಡಬಾರದು. ಬಾಸನ ಮಾನ ತೆಗೆದ ಆಕೆಯನ್ನು ಸಸ್ಪೆಂಡ್ ಮಾಡ್ಬೇಕು ಅಂತ ಕರಾಮತ್ತು ಮಾಡುತ್ತಿರುವುದರ ಬಗ್ಗೆ ಬೆಳಿಗ್ಗೆಯಿಂದ ಆಫೀಸಿನಲ್ಲಿ ಒಂದೇ ಒಂದು ಕೆಲಸ ಆಗದೆ ಅವರೆಲ್ಲಾ ಒಳಗೊಳಗೆ ಮಸಲತ್ತು ನಡೆಸುತ್ತಿರುವುದು ಆಫೀಸಿನಲ್ಲೆಲ್ಲಾ ಇದೇ ಗುಸುಗುಸು ನಡೆದಿರುವುದೂ, ಬಾಸ್‌ನ ಕೀಪ್ ಪಟ್ಟಮ್ಮಾಳ್ ಇದು ತನ್ನದೇ ವಿಜಯ ಎಂದು ಬೀಗುತ್ತಿರುವುದೂ ಎಲ್ಲವನ್ನೂ ಬಹಳ ಆಪ್ತನೆಂಬಂತೆ ವರದಿ ಮಾಡಿದ. ಆತ ಬಂದ ಹೊತ್ತಿನಿಂದಲೂ ಶುರುವಾದ ರಬ್ಬರು ಸುಟ್ಟ ವಾಸನೆ ಈಗ ರೂಮನ್ನೆಲ್ಲಾ ವ್ಯಾಪಿಸಿದಂತಾಯ್ತು. ಪದೇ ಪದೇ ಮೂಗುಜ್ಜಿಕೊಂಡು ಮೂಗು ಉರಿಯುತ್ತಿತ್ತು. ಆ ಕಮಟು ನಾತಕ್ಕೆ ಮತ್ತು ಘಾಟಿನ ವಾಸನೆಗೆ ತಲೆ ಸುತ್ತಿದಂತಾಗುತ್ತಿತ್ತು. ಆಗಲೇ ಕೇಳಿಸಿದ್ದು ''ಭಾರಿ ಸ್ಟ್ರಿಕ್ಟ್ ಆಫೀಸರ್ ಅಂತ ಬೀಗುತ್ತಿದ್ದೆಯಲ್ಲಾ, ಅರ್ಧಗಂಟೆ ಲೇಟಾದರೂ ಲೆಕ್ಚರ್ ಕೊಡ್ತಾ ಇದ್ದೆ ಯಲ್ಲಾ? ಈಗ ಅನುಭವಿಸು. ಇನ್ನು ನಿನ್ನ ಆಟ ಮುಗಿದಂತೆನೇ!'' ''ಆಟ ಇನ್ನು ಮುಗಿದಿಲ್ಲಪ್ಪಾ ಪಾಠ ಈಗ ಶುರುವಾಗಿದೆ'' ಎಂದಕೂಡಲೆ ಬೆಚ್ಚಿಬಿದ್ದು ''ಹಾಂ! ಏನಂದ್ರಿ ಮೇಡಂ''? ಎಂದ. ''ಸರಿ, ಇನ್ನು ನೀನು ಹೊರಡಬಹುದು'' ಎಂದಳು. 'ಈ ರಬ್ಬರು ಸುಟ್ಟ ವಾಸನೆಯವರು ಎರಡು ತಲೆ ಹಾವಿನಂತೆ, ನಮ್ಮೆದುರಿಗೆ ನಮ್ಮ ಪರವಾದ ವಿಷಯವನ್ನು ವಿಷದಂತೆ ಸಂಗ್ರಹಿಸಿ ಅವರೆದುರಿಗೆ ಉಗುಳುವುದೇ ಅವರ ಆದ್ಯಕರ್ತವ್ಯವೆಂದು ತಿಳಿದವರು' ಇವರು ಎಂದುಕೊಂಡಳು.

ಸಂಜೆ ಪಾರ್ಥಸಾರಥಿಯ ಫೋನು, ''ಬಾಳಾ ಗುಟ್ಟಿನ ವಿಷಯ ಮೇಡಂ'' ಎನ್ನುತ್ತಾ ''ಇವೆಲ್ಲದರಲ್ಲೂ ಬಾಸನ ಕೈವಾಡವಿದೆಯಂತೆ. ನಿಮ್ಮ ಪಿ.ಎ.ಗೆ ರಜ ಹಾಕಿಸಿದ್ದೂ ಅವನೇ ಅಂತೆ. ಪೇಪರಿನವರಿಗೆಲ್ಲಾ ಹೇಳಿ ಬರೆಸಿದ್ದೂ ಅವನೇ ಅಂತೆ. ಯಾರನ್ನೂ ನಂಬಬೇಡಿ ಮೇಡಂ. ಈಗ ಮುಂದೇನು ಮಾಡ್ತೀರಿ ಮೇಡಂ'' ಎನ್ನುತ್ತಾ ವಿಷಯ ಪ್ರೋಬ್ ಮಾಡಲು ನೋಡಿದ. ''ವಾಟೆವರ್ ನೆಸಸರಿ ಆ್ಯಕ್ಷನ್ ಐ ಶುಡ್ ಟೇಕ್, ಐ ವಿಲ್ ಟೇಕ್'' ಎಂದಳು.

ರಾತ್ರಿ ಬೆಡ್‌ರೂಮ್ ಬಾಲ್ಕನಿಯಲ್ಲಿ ಕುಳಿತಾಗ ಜಾಜಿ ಮಲ್ಲಿಗೆಯ ವಾಸನೆ ಬದಲಿಗೆ ಬರೀ ಮೋರಿ ವಾಸನೆ ಬರುತ್ತಿದೆ ಎನಿಸಿತು. ಈ ವಾಸನೆ ತಡೆಗಟ್ಟಲೆಂದೇ ಜಾಜಿ ಮೊಲ್ಲೆ ಎಲ್ಲಾ ಬೆಳೆಸಿದ್ದಳು. ಆದರೂ ಯಾಕೋ ಅದನ್ನೂ ಮೀರಿದ ಮೋರಿ ವಾಸನೆ.

ಈ ಆಫೀಸಿಗೆ ಡೈರೆಕ್ಟರ್ ಆಗಿ ಬಂದಾಗ ಅಲ್ಲಿ ಅವಳಿಗೇನು ಆದರದ ಸ್ವಾಗತ ಇರಲಿಲ್ಲ. ಅವಳ ಸಿನ್ಸಿಯಾರಿಟಿ ಬಗ್ಗೆ

ಅರಿವಿದ್ದ ಅವರಿಗೆಲ್ಲಾ ಅವಳೊಂದು ತೊಡರುಗಾಲು ಎನಿಸಿತ್ತು. ಪಕ್ಕದಲ್ಲೇ ಜಾಯಿಂಟ್ ಡೈರೆಕ್ಟರ್ ಆಫೀಸ್. ಜಾಯಿಂಟ್ ಡೈರೆಕ್ಟರ್ ಪಾಷಾ ವುಮನೈಸರ್ ಎಂದು ಕೇಳಿದ್ದಳು. ಹಿಂದಿನ ಡೈರೆಕ್ಟರ್‌ಗಳೆಲ್ಲಾ ಆಲ್‌ಮೋಸ್ಟ್ ಹೆಂಗಸರೇ. ಅವನೇ ಕೇಳಿ ಹೆಂಗಸರನ್ನೇ ಹಾಕಿಸಿಕೊಳ್ಳುತ್ತಾನೆ. ಯಾವುದಾದರೂ ಇಕ್ಕಟ್ಟಿನಲ್ಲಿ ಸಿಕ್ಕಿಸಿ ಅವರನ್ನು ತನ್ನ ಗಾಳಕ್ಕೆ ಬೀಳಿಸಿ ಕೊಳ್ಳುತ್ತಾನೆ. ಮೇಲಿನವರಿಗೂ ಆಗಾಗ ಸೇವೆ ಸಲ್ಲಿಸಿ ಅವರನ್ನೂ ಚೆನ್ನಾಗಿ ಇಟ್ಟು ಕೊಂಡಿದ್ದಾನೆ, ಸ್ವೀಪರ್‌ಗಳನ್ನು ಕೂಡಾ ಬಿಡಲ್ಲ ಎಂಬ ವದಂತಿಯನ್ನು ಕೇಳಿದ್ದಳು. ಈಗ ಅವನಿಗೇ ರಿಪೋರ್ಟ್ ಮಾಡಿಕೊಳ್ಳಬೇಕಾದಾಗ ಚಾಲೆಂಜಿಂಗ್ ಎನಿಸಿತ್ತು. ಮೊದಲನೇ ದಿನವೇ ಆತನ ಛೇಂಬರ್‌ನಲ್ಲಿ ಕೆಂಪು ರೋಜಾ ಹೂವು ಕೊಟ್ಟು ವೆಲ್‌ಕಂ ಮಾಡಿದಾಗ ಅದನ್ನ ಅವನ ಟೇಬಲ್ ಮೇಲಿನ ಹೂದಾನಿಯಲ್ಲೇ ಸಿಕ್ಕಿಸಿ ಬಂದಿದ್ದಳು. ಅಲ್ಲಿಂದ ಶುರುವಾದ ಶೀತಲಯುದ್ಧ ಕುಳಿತರೂ ನಿಂತರೂ ಮೆಮೋ ಇಷ್ಯೂ ಮಾಡುವಲ್ಲಿಗೆ ಬಂತು. ಎಷ್ಟೆಷ್ಟೋ ಬಾರಿ ಅವಳನ್ನು ಹಲವಾರು ಪ್ರಸಂಗಗಳಲ್ಲಿ ಸಿಕ್ಕಿಸಲು ನೋಡಿದಾಗ ಈ ಹಸಿಹಸಿ ವಾಸನೆಯ ಅರಿವಿನಿಂದ ಹೇಗೋ ಏನೋ ವಿಪರೀತ ಕಾಳಜಿ ವಹಿಸಿ ಪಾರಾಗಿಬಿಡುತ್ತಿದ್ದಳು. ಅವನು ಹತ್ತಿರ ಬಂದಾಗ ಹಸಿ ಹಸಿ ಹೆಣದ ವಾಸನೆ ಮೂಗಿನ ಹೊಳ್ಳೆಗಳು ಅರಳಿ ಹೃದಯಕ್ಕೇನೋ ಸಂದೇಶ ರವಾನೆ ಮಾಡಿಬಿಡುತ್ತಿದ್ದವು.

ಇತ್ತೀಚೆಗೆ ಬಾಸ್‌ನ ಚೇಂಬರ್‌ಗೆ ಒಮ್ಮೆ ಹೋಗಿದ್ದಾಗ ಆತ ಕಣ್ಣೆವೆ ಮಿಟುಕಿಸದೆ ನೋಡುತ್ತಾ, ''ಈ ಹೆಂಗಸರು ಹೆತ್ತ ಕೂಡಲೇ ವಿಪರೀತ ದಪ್ಪವಾಗಿಬಿಡ್ತಾರೆ ನೋಡಿ. ಫಿಗರ್ ಮೆಂಟೇನ್ ಮಾಡೋಹಂಗಿಲ್ಲ. ನಿಮ್ಮನ್ನು ನೋಡಿ ಕಲಿಬೇಕು. ಹ್ಯಾಂಗ ಬಳ್ಳಿಹಾಂಗ ಬಳುಕ್ತೀರಾ'' ಎಂದಾಗ, ''ಅರೆ ನಾನೆಲ್ಲಿ ಹೆತ್ತಿದ್ದೀನಿ ? ಹೊರದೆ ಹೆರದೇನೆ ಗಂಡಸರು ಹಂಡೆಯಂಥಾ ಹೊಟ್ಟೆ ಬೆಳೆಸ್ತಾರೆ. ಇನ್ನು, ಪಾಪ ಹೊತ್ತು ಹೆತ್ತನಂತರಾನೂ ಮೊದಲಿನ ಹಾಗೇ ಇರಬೇಕು ಅಂದ್ರೆ ಹೇಂಗೆ ?'' ಅಂತ ಅವನ ಗುಡಾಣದ ಹೊಟ್ಟೆ ನೋಡಿ ಹೇಳಿದ್ದಳು. ''ಹ... ಹಾ... ಭೊಲೋ ಹೇಳಿದ್ರಿ. ನಮಾಜು ಮಾಡ್ಲಿಕ್ಕೆ ಹೋದ್ರ ಮಸೀದಿ ತಲೆ ಮೇಲೆ ಬಿದ್ದಂಗಾತು'' ಎನ್ನುತ್ತ ತಟ್ಟಂತ ತಬ್ಬಿಕೊಂಡಿದ್ದ. ರಪ್ಪಂತ ಕೆನ್ನೆಗೆ ಬಾರಿಸಿಬಿಟ್ಟಿದ್ದಳು. ಅಲ್ಲಿಂದ ಶೀತಲಯುದ್ಧ ಕರಗಿ ರಣರಂಗವೇ ಶುರುವಾಗಿತ್ತು.

ಈಗ ಮೊನ್ನೆ ಕೈಗಾ ಅಣುಸ್ಥಾವರದ ಉದ್ಘಾಟನೆಗೆ ಪ್ರೈಂ ಮಿನಿಸ್ಟರ್ ಬರ್ತಾರೆ ಎಂದಾದಾಗ ಅದರ ಇನ್‌ಚಾರ್ಜ್ ಅವಳಿಗೇ ನೀಡಿದಾಗ ಅಚ್ಚರಿ ಕಾದಿತ್ತು. ಹಸಿ ಹಸಿ ಹೆಣದ ವಾಸನೆ, ಬ್ಲೀಡಿಂಗ್ ವಾಸನೆ ಕಾಡಿ ಇದರಲ್ಲೇನೋ ಇದೆ ಎನಿಸಿದರೂ ಜಾಗ್ರತೆಯಾಗಿದ್ದರಾಯಿತು ಎಂದುಕೊಂಡಳು. ಆದರೆ ಅವಳ ಪಿ.ಎ.ಗೆ ರಜ ಹಾಕಿಸಿ ಅವನ ಪಿ.ಎ.ಯನ್ನು ಅವಳ ಜೊತೆ ಕಳಿಸಿದ. ಅಲ್ಲಿ ಮಾಡಬೇಕಾದ ಏರ್ಪಾಟಿನಲ್ಲೆಲ್ಲಾ ಪಿ.ಎ. ಮೂಗು ತೂರಿಸಿ ಎಡವಟ್ಟಾಗುವಂತೆ ಮಾಡಿದ. ಮೀಡಿಯಾದವರಿಗೆಲ್ಲ ತಾನೆ ರೂಂ ಬುಕ್ ಮಾಡಿದ್ದೇನೆಂದು ಹೇಳಿ ಕೊನೆಯ ಮೊಮೆಂಟಿನಲ್ಲಿ ಅವರಿಗೆಲ್ಲಾ ಉಳಿಯುವ ವ್ಯವಸ್ಥೆಯೇ ಇಲ್ಲದೇ ಅವರೆಲ್ಲಾ ಗಲಾಟೆ ಮಾಡುವಂತೆ ಮಾಡಿದ. ಪ್ರಧಾನ ಮಂತ್ರಿಯ ಭಾಷಣದ ವೇಳೆಗೆ ಕರೆಂಟ್ ಹೋಗಿದ್ದಕ್ಕೆ ಜನರೇಟರ್ ವ್ಯವಸ್ಥೆ ಇಲ್ಲದೆ ಪಿ.ಎ. ನಾಪತ್ತೆಯಾಗಿಬಿಟ್ಟಿದ್ದ. ಊಟ, ಟ್ರಾನ್ಸ್‌ಪೋರ್ಟ್ ಎಲ್ಲದರಲ್ಲೂ ಅವ್ಯವಸ್ಥೆ. ಮಾರನೇ ದಿನದ ಪೇಪರಿನಲ್ಲೆಲ್ಲಾ ಇದೇ ಸುದ್ದಿ. ಇನ್‌ಚಾರ್ಜ್ ಆಫೀಸರನ್ನು ಕೂಡಲೇ ವಿಚಾರಣೆ ಗೊಳಪಡಿಸಿ, ಎಂಬ ಪಿ.ಎಂ. ಆಜ್ಞೆ. ತಕ್ಷಣವೇ ಮೀಡಿಯಾದವರೆಲ್ಲಾ ಕೇಳಿದ ಪ್ರಶ್ನೆಗಳಿಗೆ ವಸಂತಮಾಲಾ ಕೊಟ್ಟ ಸಾಫ್ ಸೀದಾ ಉತ್ತರ ಆತನ ಲೈಂಗಿಕ ಕಿರುಕುಳದ ವಿವರಣೆ. ಸೇಡು ತೀರಿಸಿಕೊಂಡ ಬಗ್ಗೆ ಆರೋಪ. ಮಾಧ್ಯಮಗಳಿಗೆಲ್ಲಾ ಮಸಾಲೆ. ಮಹಿಳಾ ಸಂಘಟನೆಗಳಿಂದ ಅಪಾರ ಬೆಂಬಲ. ಈಗ ಅಮಾನತು ಮಾಡುವಲ್ಲಿಗೆ ಬಂದು ನಿಂತಿದೆ. ಆದರೆ ವಿಚಾರಣೆಯಲ್ಲಿ ನ್ಯಾಯ ಸಿಗುತ್ತದೆಂಬ ಭರವಸೆಯಿಲ್ಲ. ಏಕೆಂದರೆ ಡಿಪಾರ್ಟ್‌ಮೆಂಟ್‌ನವರೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಆತನ ಮುಲಾಜಿಗೊಳಪಟ್ಟವರೇ.

ಕೈಯಲ್ಲಿ ಪುಸ್ತಕವೊಂದನ್ನು ಹಿಡಿದು ಕೂತಳು. ಓದಿದ್ದೊಂದೂ ತಲೆಗೆ ಹೋಗಲಿಲ್ಲ. ಇದ್ದಕ್ಕಿದ್ದಹಾಗೆ ಈ ವಾಸನೆ ಕೊಡುವ ಗ್ರಹಿಕೆ ಸರಿಯಾದದ್ದೇ ಅಲ್ಲವೇ ಎಂಬ ಪ್ರಶ್ನೆ ಧುತ್ತೆಂದು ಎದ್ದುನಿಂತಿತು. ಇಷ್ಟು ದಿನಗಳ ತನಕ ವಾಸನೆಯ ಜಾಡು ಹಿಡಿಯುವುದೇ ಪರಮ ಗುರಿಯಾದ ವಸಂತಮಾಲಾಳಿಗೆ ಅದು ಕೊಡುವ ಗ್ರಹಿಕೆ ಆಖೈರು ತೀರ್ಮಾನ ಪೂರ್ವ ಗ್ರಹಪೀಡಿತವಾದದ್ದೇ. ಈ ಎಲ್ಲಾ ವಾಸನೆಗಳು ನೆಗೆಟಿವ್ ಆಗಿ ಕಾರ್ಯಪ್ರವೃತ್ತವಾಗಿ ತನ್ನನ್ನು ಯಾವುದೋ ಕೂಪಕ್ಕೆ ತಳ್ಳುತ್ತಿಲ್ಲವಷ್ಟೇ. ಈ ವಾಸನೆಯ ಪರಿಮಿತಿಗೆ ನನ್ನ ಬದುಕು ಒಳಗೊಂಡುಬಿಟ್ಟಿದೆಯೇ ? ಎಂದುಕೊಂಡಾಗ ಒಳಗಡೆಯಿಂದ ಬೆಳ್ಳುಳ್ಳಿ ಶುಂಠಿ ಮಿಶ್ರಿತ ಕುರ್ಮಾ ತೇಗು ಗಕ್ಕೆಂದು ಬಂದು ಗಂಟಲು ಎದೆಯೆಲ್ಲಾ ಉರಿ ಉರಿಯಾಯಿತು. ಮೂಗಿಗೂ ಒಮ್ಮೆಗೆ ಘಾಟು ಏರಿದಂತಾಗಿ ಅರೆ ಇದೇನಿದು ? ಈ ವಾಸನೆ ಅಹಮ್ಮಿನದಲ್ಲವೇ ? ಎಂದು ಚಕಿತಳಾದಳು ವಸಂತಮಾಲಾ.

ಎದ್ದುಹೋಗಿ ಡೈರಿ ತೆಗೆದಳು. ಅಲ್ಲಿ ಸಾಕಷ್ಟು ಜನರ ಹೆಸರು ನಮೂದಿತವಾಗಿತ್ತು. ಅಸಹನೆ, ಸಿಡಿಸಿಡಿ, ಅನುಮಾನ, ಅಹಂ ಈ ವಾಸನೆಯವರು ಬಹುಮುಖ್ಯ ಕ್ಯಾರೆಕ್ಟರ್ ಎಂದು ಷರಾ ಬರೆದುಬಿಟ್ಟಿದ್ದಳು.

ಊಟ ಮಾಡಿದ್ದೇನೆಂದು ನೆನಪಿಸಿಕೊಂಡಳು. ಉಹೂಂ ನೆನಪಾಗಲಿಲ್ಲ. ಸಾಕಮ್ಮನನ್ನು ಕರೆದಳು. ಸಾಕಮ್ಮ ಇವತ್ತು ಅಡಿಗೆಗೆ ಬೆಳ್ಳುಳ್ಳಿ ಶುಂಠಿ ಏನಾದ್ರೂ ಹಾಕಿದ್ದೆಯಾ ? ಎಂದಾಗ ಆ ವಿಚಾರಣೆಯ ಗೈರತ್ತಿಗೆ ಠಾಣೆಯಲ್ಲಿದ್ದ ಕೈದಿಯಂತೆ ನಡುಬಗ್ಗಿಸಿ, ''ಇಲ್ವಲ್ಲಾ ಅಮ್ಮಾರೆ'' ಎಂದಳು. ಹಾಗಾದರೆ ವಾಸನೆ ಬಂದಿದ್ದೆಲ್ಲಿಂದ ? ''ಒಳಗಿಂದ'' ಎಂದಿತು ದನಿ. ''ಆಂ, ಏನಂದೆ'' ಎಂದಳು. ಸಾಕಮ್ಮನನ್ನು ದುರುಗುಟ್ಟಿ, ''ನಾನೇನೂ ಹೇಳಲಿಲ್ಲ'' ಎಂದಳು. ''ಹುಂ ನಡಿ ಒಳಗೆ'' ಎಂದ ವಸಂತಮಾಲಾ, ಒಳಗಿನಿಂದ ಬಂದ ದನಿಗೆ ಬೆಚ್ಚಿಬಿದ್ದಳು. ಹಾಗಾದರೆ ವಾಸನೆ ಒಳಗಿಂದ ಬರುತ್ತಿದೆಯೇ ? ಆತಂಕಗೊಂಡಳು. ಒಳಗಿಂದ ವಾಸನೆ ವಸಂತಮಾಲ, ವಾಸನೆ ವಸಂತಮಾಲ ಅಂತ ಯಾರೋ ಕೂಗಿಕೊಳ್ಳುತ್ತಿರುವ ಹಾಗೆನಿಸಿ ಕಿವಿಮುಚ್ಚಿಕೊಂಡಳು. ಆದರೂ ಕೇಳಿಸುತ್ತಲೇ ಇತ್ತು. ''ಥೂ ಈ ವಾಸನಾ ಜಗತ್ತಿನಿಂದ ಬಿಡುಗಡೆ ಬೇಕು ನನಗೆ'' ಅಂತ ಕೂಗಿಕೊಂಡಳು. ಯಾರೋ ಫಕಫಕ ನಕ್ಕ ಹಾಗಾಯಿತು. ''ಪಾಪಾ ವಸಂತಮಾಲಾ ವಾಸನೆಯೇ ಬದುಕು ಎಂದುಕೊಂಡುಬಿಟ್ಟಿದ್ದಾಳೆ. ವಾಸನೆಯಿಂದ ಬಿಡುಗಡೆ ಬೇಕೆ ? ವಾಸನೆಯಿಲ್ಲದ ಬದುಕೆಲ್ಲಿದೆ ವಸಂತಮಾಲಾ ? ವಾಸನೆಯಿಲ್ಲದೆ ಬದುಕು ಬೇಕೆಂದರೆ ನೀ ವಾಸ್ತವವನ್ನೇ ತಿರಸ್ಕರಿಸಿದಂತೆ. ವಾಸನೆಯನ್ನು ಗ್ರಹಿಸಿ ಮೂಸಿ ಬದಿಗಿಟ್ಟು ನಡೆ ವಸಂತಮಾಲಾ.'' ''ಯಾರು... ಯಾರು... ಮಾತನಾಡುತ್ತಿರುವವರು ? ಮುಂದೆ ಬನ್ನಿ'' ಕೂಗಿಕೊಂಡಳು. ಮತ್ತೆ ಫಕಫಕ ನಕ್ಕ ಸದ್ದು. ಕುರ್ಚಿಯ ಮೇಲಿಂದ ಧಡ್ಡನೆದ್ದಳು. ಸುತ್ತ ತಿರುಗಿದಳು. ಕಿವಿ ಮುಚ್ಚಿಕೊಂಡಳು. ಕಿವಿ ಮುಚ್ಚಿಕೊಂಡ ಹಾಗೆ ವಿಪರೀತ ಘಾಟು ವಾಸನೆ ಆ... ಕ್ಷಿ... ಆಕ್ಷಿ ಊಹೂಂ... ನಿಲ್ಲುತ್ತಲೇ ಇಲ್ಲ. ಕಣ್ಣಲ್ಲಿ ಮೂಗಲ್ಲಿ ನೀರು ಸುರಿಯ ತೊಡಗಿತು. ಕರ್ಚೀಫಿನಿಂದ ಮೂಗುಜ್ಜಿಕೊಂಡಳು. ಮೂಗು ವಿಪರೀತ ದಪ್ಪ ಎನಿಸಿತು. ಸಂಪಿಗೆ ಎಸಳಿನಂತಿದ್ದ ಮೂಗು ಹೀಗ್ಯಾಕೆ ದಪ್ಪ ಆಯಿತು ಎಂದುಕೊಳ್ಳುತ್ತಿದ್ದಂತೆ ಯಾವ ಯಾವುದೋ ವಾಸನೆ ಒಂದಕ್ಕೊಂದು ಲಿಂಕಿಲ್ಲದೇ ಮೂಗಿನ ಹೊಳ್ಳೆಗಳನ್ನು ಅರಳಿಸ ತೊಡಗಿತು. ಮೂಗುಮುಚ್ಚಿಕೊಂಡು ಬಾಯಲ್ಲಿ ಉಸಿರಾಡತೊಡಗಿದಳು. ಹೆಚ್ಚು ಹೊತ್ತು ಅದು ಸಾಧ್ಯವಾಗಲಿಲ್ಲ. ಲೈಟು ಹಾಕಿ ಫ್ಯಾನ್ ಹಾಕೋಣ ಎಂದುಕೊಂಡು ಏಳುತ್ತಿದ್ದಂತೆ ಅವಳ ಮೂಗು ಅವಳಿಗೇ ಕಾಣಿಸುವಂತೆ ಬಾಯಿಯತನಕ ಉದ್ದಕ್ಕೆ ಚಾಚಿಕೊಂಡು ಬಿಟ್ಟಿತ್ತು. ಕನ್ನಡಿಯಲ್ಲಿ ನೋಡಿಕೊಂಡರೆ ಸಂಪಿಗೆ ಎಸಳಿನಂಥ ಮೂಗು ಗಿಡುಗನ ಕೊಕ್ಕಿನಂತೆ ಉದ್ದಕ್ಕೆ ಬಾಗುತ್ತ ಬರುತ್ತಿದೆ. ನೋಡನೋಡುತ್ತಿದ್ದಂತೆ ಕುತ್ತಿಗೆಯನ್ನೂ ಧಾಟಿ ಬೆಳೆಯತೊಡಗಿತು. ಎದ್ದು ಹೊರಬಂದಳು. ಅಜ್ಜಿಯನ್ನು ಕರೆಯಲೆ ಎಂದುಕೊಂಡು ಮತ್ತೆ ಬೇಡಾ ಎನ್ನಿಸಿ ಅಕ್ಕನ ಮನೆ ನಂಬರ್ ತಿರುಗಿಸಿದಳು. ''ತಕ್ಷಣ ಬರ್ತೀಯಾ'' ಎಂದಳು ಬಿಕ್ಕುತ್ತಾ. ಏನಾಯ್ತು ಏನಾಯ್ತು ಎನ್ನುತ್ತಿದ್ದುದನ್ನು ಕೇಳಿಸಿಕೊಳ್ಳದೆ ಫೋನಿಟ್ಟು ಕುರ್ಚಿಯಲ್ಲಿ ಕುಸಿದಳು. ನಂತರ ಭಾವನ ಬೈಕ್ ಸದ್ದು. ಅಕ್ಕ ಭಾವ ತನ್ನನ್ನು ನೋಡಿ ಅವಾಕ್ಕಾಗಿ ನಿಂತದ್ದು ಅಷ್ಟೇ... ಮತ್ತೆ ಅವಳಿಗೆ ಎಚ್ಚರಾದಾಗ ಆಸ್ಪತ್ರೆಯಲ್ಲಿದ್ದಳು. ಮುಖಕ್ಕೆ ಆಕ್ಸಿಜನ್ ಕ್ಯಾಪ್ ಹಾಕಲಾಗಿತ್ತು. ಡಾಕ್ಟರ್, ನರ್ಸ್ ಗಡಿಬಿಡಿಯಲ್ಲಿ ಓಡಾಡು ತ್ತಿದ್ದರು. ''ಹೊರಗಡೆ ಭಾರೀ ಗಲಾಟೆ. ಮಾಧ್ಯಮದವರೆಲ್ಲಾ ಈ ವಿಚಿತ್ರ ಸುದ್ದಿಯನ್ನು ಬಿತ್ತರಿಸಲು ಕಾದಿದ್ದಾರೆ. ಜನರೆಲ್ಲಾ ನೂಕುನುಗ್ಗಲಿನಲ್ಲಿ ನೋಡಲು ಕಾತರಿಸುತ್ತಿದ್ದಾರೆ'' ಎಂದು ನರ್ಸ್‌ಗಳೆಲ್ಲಾ ಮಾತಾಡಿಕೊಳ್ಳುತ್ತಿದ್ದರು. ಗಾಜಿನ ಕಿಟಕಿ ಬಾಗಿಲುಗಳಲ್ಲೆಲ್ಲ ಜನರ ಮುಖಗಳೇ ಕಂಡಂತಾಗಿ, ''ಅರೆ ! ಬಾಸ್, ಪಿ.ಎ., ರೇವತಿ, ಅಣ್ಣ ಪರಿಚಿತ ಕೆಲವು ಮುಖಗಳು ಇದೇನು ಎಲ್ಲರೂ ಮಾಸ್ಕ್ ಹಾಕಿಕೊಂಡಂತೆ ಎಲ್ಲರಿಗೂ ಗಿಡುಗನ ಮೂಗು ! ಗಾಜಿನ ಬಾಗಿಲನ್ನು ಟಕಟಕ ಎಂದು ಕುಟ್ಟುತ್ತಿವೆ.'' ಈಗೆಲ್ಲೋ ಒಡೆದು ಬಂದೇ ಬಿಡಬಹುದು ಎನಿಸತೊಡಗಿತು. ಅವಸರದಲ್ಲಿ ಬಂದ ಡಾಕ್ಟರ್ ತಕ್ಷಣ ಆಪರೇಷನ್‌ಗೆ ರೆಡಿ ಮಾಡಿ ಎನ್ನುತ್ತಿದ್ದ. ಅವನಿಗೂ ಮಾರುದ್ದದ ಕೊಕ್ಕು. ಇಂಜೆಕ್ಷನ್ ಕೊಡಲು ಬಂದ ನರ್ಸ್ ಮುಖ ಥೇಟ್ ಗಿಡುಗನ ಥರವೇ. ಇನ್ನೇನೂ ಕಿರುಚಿಕೊಳ್ಳಬೇಕು. ಅಷ್ಟರಲ್ಲಿ ಚುಚ್ಚೇ ಬಿಟ್ಟಳು. ಮಂಪರು... ಅಸ್ಪಷ್ಟವಾಗಿ ಗೊಣಗಿದಳು. ಎಲ್ಲರೂ ಯಾಕೆ ಗಿಡುಗನಂತಾಗುತ್ತಿದ್ದಾರೆ... ಹಾಗೆ ಜಾರಿದಳು ನಿದ್ರೆಗಾ... ?

**ಶಾಂತಾಕುಮಾರಿ**
ನಂ. ೮೫೬, ಮೊದಲನೇ ಮುಖ್ಯರಸ್ತೆ, ೧೦ನೇ ಅಡ್ಡರಸ್ತೆ
೭ನೇ ಫೇಸ್, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮



# ರಾಹು-ಕೇತುಗಳ ಸುದೀರ್ಘ ಬಾಹುಗಳು

**ಸೆ**ಪ್ಟೆಂಬರ್ ಅಂದರೆ ಮಳೆ ಮುಗಿಯುತ್ತಾ ಬಂದಿದೆ ಎಂದುಕೊಳ್ಳಬಹುದು. ತಾತ್ಕಾಲಿಕವಾಗಿ ಒಂದೆರಡು ರಾತ್ರಿ ಮಳೆ ಬಿಡುವು ಕೊಡಬಹುದು. ಹಾಗೆ ಅವಕಾಶ ಸಿಕ್ಕಾಗ ಮರೆಯದೇ ತಲೆ ಎತ್ತಿ ನೋಡಿ. ಕೆಳಗೆ ಗಂಗೆಯ ತಂಗಿಯೋ, ಅಕ್ಕನೋ ಪಾದಗಳನ್ನು ತಂಪುಗೊಳಿಸುತ್ತಿದ್ದರೆ ಮೇಲೆ ಆಕಾಶಗಂಗೆಯೇ ಕಣ್ಣು ತಂಪುಗೊಳಿಸುತ್ತಾಳೆ. ವೃಶ್ಚಿಕ ಧನುರಾಶಿಗಳ ಮೂಲಕ ಹರಿಯುವ ಈ ದೇವನದಿಯ ಸೌಂದರ್ಯ ಸ್ವಾದಕ್ಕೆ ಈಗ ಅತಿ ಪ್ರಶಸ್ತ ಸಮಯ – ವರುಣನ ಕೃಪೆ (ಅವಕೃಪೆ ?) ಆದಾಗ ಮಾತ್ರ. ಮುಂದುವರೆಯುವ ಗಂಗೆ, ವೀಣಾ ಮತ್ತು ಗರುಡ ರಾಶಿಗಳ ನಡುವೆ ನುಸುಳುತ್ತಾಳೆ. ಈ ಎರಡು ರಾಶಿಗಳ ಪ್ರಮುಖ ನಕ್ಷತ್ರಗಳೇ ಅಭಿಜಿತ್ ಮತ್ತು ಶ್ರವಣ. ಇನ್ನೊಂದು ಪ್ರಕಾಶಮಾನ ನಕ್ಷತ್ರ ಹಂಸಾಕ್ಷಿಯೂ ಸೇರಿ ಸುಲಭವಾಗಿ ಗುರುತಿಸಬಹುದಾದ ತ್ರಿಕೋಣವಾಗುತ್ತದೆ. ಇದನ್ನು ಪಾಶ್ಚಾತ್ಯರು ಬೇಸಿಗೆ ತ್ರಿಕೋಣ ಎಂದರು. ನಮಗಾದರೋ ಬೇಸಿಗೆಯೇ ಮರೆತುಹೋದಂತಾಗಿದೆ. ವೃಶ್ಚಿಕ, ಧನು ಮುಂದಿನ ಮಕರವನ್ನೂ ಗುರುತಿಸಬಹುದು. ಆ ಮುಂದಿನ ಕುಂಭವನ್ನು ಗುರುತಿಸುವುದು ಕಷ್ಟಸಾಧ್ಯ. ಅದಕ್ಕೊಂದು ಉಪಾಯವಿದೆ, ಏಳನೆಯ ತಾರೀಖು.

ಈ ತಿಂಗಳಲ್ಲಿ ಸೂರ್ಯ ಚಂದ್ರ ಗ್ರಹಣಗಳಿವೆ. ಏಳರ ಸಂಜೆ ಹುಣ್ಣಿಮೆಯ ಚಂದ್ರನನ್ನು ಗಮನಿಸಿ. ಅದರ ಮೇಲಿರುವ ಪ್ರಕಾಶಮಾನವಾದ ಚುಕ್ಕೆ ಶತಭಿಷ ಎಂಬ ನಕ್ಷತ್ರ; ಕುಂಭ ರಾಶಿಗೆ ಸೇರಿದ್ದು. ರಾತ್ರಿ ೧೦:೧೨ಕ್ಕೆ ಗ್ರಹಣ ಆರಂಭವಾದಾಗ ಇನ್ನೊಂದು ಕ್ಷೀಣ ಚುಕ್ಕೆಯೂ ಕಾಣುವುದು. ಅದೇ ಯುರೇನಸ್. ಚಂದ್ರ ಯುರೇನಸ್ ಗ್ರಹವನ್ನು ಮುಚ್ಚಿಹಾಕುವ ಆಚ್ಛಾದನೆ ಎಂಬ ವರ್ಗದ ಗ್ರಹಣವೂ ಆಗಲೇ ನಡೆಯುತ್ತದೆ. ಆದರೆ ಆ ನೋಟ ನಮಗಿಲ್ಲ; ನಮಗೆ ಯುರೇನಸ್ ಗ್ರಹವನ್ನು ಗುರುತಿಸಲು ಇದು ಉತ್ತಮ ಅವಕಾಶ.




ಚಂದ್ರಗ್ರಹಣ ಮುಂದುವರೆದಂತೆ ಆಕಾಶವನ್ನೆಲ್ಲಾ ಮುಸುಕಿದ ತೆರೆಯೊಂದು ಸರಿಸಿದಂತಾಗಿ ಕ್ಷೀಣ ಚುಕ್ಕೆಗಳು ಕಾಣತೊಡಗುವುವು. ಆದ್ದರಿಂದಲೇ ಯುರೇನಸ್ ಅನ್ನು ಗುರುತುಹಚ್ಚುವುದು ಸಾಧ್ಯವಾಗುವುದು. ಸ್ವಲ್ಪ ಉತ್ತರಕ್ಕೆ ಕಣ್ಣು ಹಾಯಿಸಿ. ನಕುಲ ಪುಂಜದ ನಾಲ್ಕು ನಕ್ಷತ್ರಗಳ ಚೌಕ ಕಾಣುವುದು. ಇವುಗಳಲ್ಲಿ ಎರಡು – ಪೂರ್ವಾಭಾದ್ರ, ಉತ್ತರಾಭಾದ್ರ ಎಂಬ ಹೆಸರು ಪಡೆದಿವೆ. ಹಾಗಾಗಿ ಇದು ಭಾದ್ರಪದ ಮಾಸ ಎನಿಸಿಕೊಂಡಿದೆ. ಹುಣ್ಣಿಮೆಯ ಚಂದ್ರ ಈ ನಕ್ಷತ್ರಗಳ ನೇರಕ್ಕಿದ್ದರೂ ಅದರ ಸ್ಥಾನ ಕುಂಭರಾಶಿಯಲ್ಲಿ ಎಂಬುದನ್ನು ಗಮನಿಸಿ.

೨೨ರ ಸೂರ್ಯಗ್ರಹಣ ನಮಗೆ ಕಾಣುವುದಿಲ್ಲ. ದಕ್ಷಿಣ ಅಮೆರಿಕಾ, ಪೆಸಿಫಿಕ್ ಸಾಗರಗಳ ಮೇಲೆ ಚಂದ್ರನ ನೆರಳು ಹಾಯುತ್ತದೆ.

ಭೂ ಕಕ್ಷೆ ಮತ್ತು ಚಂದ್ರ ಕಕ್ಷೆ ಪರಸ್ಪರ ಛೇದಿಸುವ ಬಿಂದುಗಳಿಗೆ ಪರ್ವ ಬಿಂದುಗಳು ಎಂದು ಹೆಸರು. ಸಾಂಕೇತಿಕವಾಗಿ ಇವಕ್ಕೆ ರಾಹು ಮತ್ತು ಕೇತು ಎಂಬ ಹೆಸರಿವೆ. ಹುಣ್ಣಿಮೆ, ಅಮಾವಾಸ್ಯೆಗಳಲ್ಲಿ ಚಂದ್ರ ಈ ಪರ್ವಬಿಂದುಗಳಲ್ಲಿ ಇದ್ದಾಗ ಮಾತ್ರ ಗ್ರಹಣವಾಗಲು ಸಾಧ್ಯ. ಈ ಬಾರಿಯ ಗ್ರಹಣದ ವಿವರಗಳನ್ನು ಗಮನಿಸಿ. ಏಳರ ರಾತ್ರಿ ೨೩:೫೩ಕ್ಕೆ ಹುಣ್ಣಿಮೆ ಎಂಬ ಘಟನೆ ನಡೆಯುವುದು. ಇದಾದ ಸುಮಾರು ಹದಿನಾರೂವರೆ ಗಂಟೆಗಳ ನಂತರ ಚಂದ್ರ (ರಾಹು ಎಂಬ) ಪರ್ವ ಬಿಂದುವನ್ನು ಹಾಯುವುದು. ಆದರೂ ಗ್ರಹಣ ಸಾಧ್ಯವಾಗಿದೆ. ಅಬ್ಬಬ್ಬಾ! ರಾಹುವಿನದೆಷ್ಟು ಉದ್ದದ ತೋಳು ಎಂದು ಉದ್ಗರಿಸಿದವರು ಅದನ್ನು ಹಾವು ಎಂದು ಕರೆದಿರಬಹುದು ಅಲ್ಲವೇ? ಆದರೆ ಇದೇ ದೀರ್ಘ ಅಂತರದ ಕಾರಣ ಇದು ಪಾರ್ಶ್ವ ಗ್ರಹಣವಾಗಿದೆ. ಈ ಅಂತರ ಕಡಿಮೆಯಾಗಿದ್ದಾಗ, ಉದಾಹರಣೆಗೆ, ಮುಂದಿನ ವರ್ಷದ ಮಾರ್ಚ್‌ನಲ್ಲಿ, ಪೂರ್ಣ ಚಂದ್ರಗ್ರಹಣವಾಗುವುದು. ಇನ್ನೂ ಒಂದು ವಿಶೇಷವಿದೆ. ಈ ಹುಣ್ಣಿಮೆಯ ಎಂಟು ಘಂಟೆಗಳ ನಂತರ ಭೂಮಿ-ಚಂದ್ರರ ನಡುವಿನ ದೂರ ಕನಿಷ್ಠವಾಗುತ್ತದೆ. ಆದ್ದರಿಂದ ಕಡಲತೀರದ ಉಬ್ಬರ-ಇಳಿತ ಬೇರೆ ಹುಣ್ಣಿಮೆಗಿಂತ ಜೋರು ಎನ್ನಬಹುದು. ಮುಂದೆ ಓಡುವ ಚಂದ್ರ ೨೧ರಂದು ರಾತ್ರಿ ೯ ಗಂಟೆಗೆ ಇನ್ನೊಂದು ಪರ್ವಬಿಂದು (ಕೇತು)ವನ್ನು ಹಾಯುತ್ತದೆ. ಇದಾದ ಎಂಟು ಗಂಟೆ ನಂತರ ಅಮಾವಾಸ್ಯೆ. ಅದು ಪೂರ್ಣಗ್ರಹಣವೇ ಆಗುತ್ತಿತ್ತು. ಆದರೆ ಭೂಮಿ-ಚಂದ್ರ ದೂರ ಈಗ ಗರಿಷ್ಠ ಆದ್ದರಿಂದ ಚಂದ್ರ ಸ್ವಲ್ಪ ಚಿಕ್ಕದಾಗಿ ಕಾಣುತ್ತದೆ. ತತ್ಪರಿಣಾಮವಾಗಿ ಪೂರ್ಣಗ್ರಹಣದ ಬದಲು ಕಂಕಣ ಗ್ರಹಣ ಆಗುತ್ತದೆ. ಸೂರ್ಯನನ್ನು ಚಂದ್ರ ಪೂರ್ತಿಯಾಗಿ ಮುಚ್ಚಲಾರದೆ ಸೂರ್ಯ ಬಳೆಯ ಹಾಗೆ ಕಾಣುತ್ತದೆ. ಅಂದೂ ಕಡಲ ತೀರದಲ್ಲಿ ಉಬ್ಬರ-ಇಳಿತ ಜೋರು.

ಮುಂದಿನ ತಿಂಗಳ ಹುಣ್ಣಿಮೆಯ ವಿವರಗಳನ್ನು ಗಮನಿಸಿ. ಅಕ್ಟೋಬರ್ ೭ರಂದು ೩:೪೧ಕ್ಕೆ ಚಂದ್ರ ರಾಹುವನ್ನು ದಾಟುತ್ತದೆ. ಅದಾದ ೩೪ ಗಂಟೆಗಳ ನಂತರ ಅಂದರೆ ೭ರ ಬೆಳಿಗ್ಗೆ ೮:೪೩ಕ್ಕೆ ಹುಣ್ಣಿಮೆ. ರಾಹುವಿನ ತೋಳು ಇಷ್ಟುದ್ದ ಇಲ್ಲ. ಆದ್ದರಿಂದ ಗ್ರಹಣ ಇಲ್ಲ.

ಇಂತಹ 'ಸರಳ' ವೀಕ್ಷಣೆಗಳೇ ೩೦೦೦ ವರ್ಷಗಳ ಹಿಂದೆ ಖಗೋಳ ವಿಜ್ಞಾನಕ್ಕೆ ಭದ್ರಬುನಾದಿ ಒದಗಿಸಿತು.

ಭೂಮಿ ತನ್ನ ಕಕ್ಷೆಯಲ್ಲೊಂದು ವಿಶಿಷ್ಟ ಬಿಂದುವನ್ನು ದಾಟುವ ದಿನ ೨೩. ಇದಕ್ಕೆ



೭ರ ಸಂಜೆ ಗ್ರಹಣಕ್ಕೆ ಮುಂಚೆ ಚಂದ್ರೋದಯ; ಪಕ್ಕದ ಪ್ರಕಾಶಮಾನ ನಕ್ಷತ್ರ ಶತಭಿಷ, ಕ್ಷೀಣವಾದ ಚುಕ್ಕೆಯೇ ಯುರೇನಸ್

— ಡಾ|| ಬಿ. ಎಸ್. ಶೈಲಜಾ —

ಶರದ್ ವಿಷುವ ಎಂಬ ಹೆಸರಿದೆ. ಅಂದು ಹಗಲು ರಾತ್ರಿಗಳ ಅವಧಿ ಸಮ. ಆ ಮುಂದೆ ಹಗಲಿನ ಅವಧಿ ಕಿರಿದಾಗುತ್ತಾ ಹೋಗುತ್ತದೆ.

ಸಂಜೆಯ ಆಕಾಶದಲ್ಲಿ ಸುಲಭವಾಗಿ ಗುರುತಿಸಬಹುದಾದ ಗ್ರಹ ಗುರು. ೨೬ರಂದು ಚಂದ್ರನ ಜೊತೆಗೂಡುತ್ತದೆ. ದಿನೇ ದಿನೇ ದಿಗಂತದತ್ತ ಚಲಿಸುವ ತಿಂಗಳ ಕೊನೆಗೆ ಎಂಟುಗಂಟೆಗೆ ಕಂತುತ್ತದೆ.

ಮಂಗಳಗ್ರಹ ಕೂಡ ಸಂಜೆಯಲ್ಲೇ ಇರುವುದಾದರೂ ಬಹಳ ಕ್ಷೀಣವಾಗಿದೆ; ಅಲ್ಲದೆ ದಿಗಂತದ ಅಂಚಿಗೆ ಸರಿದಿರುವುದರಿಂದ ಸಂಧ್ಯಾಪ್ರಕಾಶದಲ್ಲಿ ಕರಗಿಹೋಗುತ್ತಿದೆ. ಗುರುತಿಸಲು ಕಷ್ಟಸಾಧ್ಯ. ಶುಕ್ರ, ಶನಿ ಈ ಎರಡೂ ಬೆಳಗಿನ ಜಾವ ಕಾಣುವುವು.

ದಿನೇ ದಿನೇ ಶನಿ ಮೇಲೆ ಏರಿದಂತೆ ಕಂಡರೆ ಶುಕ್ರ ಕೆಳಗಿಳಿಯುವುದು. ಬುಧಗ್ರಹ ತಿಂಗಳ ಮೊದಲದಿನ ಸೂರ್ಯನನ್ನು ಹಾದುಬರುವುದು; ತಿಂಗಳ ಕೊನೆಗೆ ಸಂಜೆಗೆ ಕಾಣುವುದು. ೨೪ರಂದು ಚಂದ್ರನ ಜೊತೆಯಾದಾಗ ಇದನ್ನು ಗುರುತಿಸಬಹುದು.

## ಖಗೋಳ ದಿನಚರಿ

೧ ಬುಧಗ್ರಹದ ಯುತಿ
೫ ಶುಕ್ರ-ಮಘ ಜೋಡಿ
೭ ಯುರೇನಸ್ ಗ್ರಹದ ಆಚ್ಛಾದನೆ ಹುಣ್ಣಿಮೆ ೨೩:೫೩ಕ್ಕೆ
೮ ಭೂಮಿ ಚಂದ್ರ ದೂರ ಕನಿಷ್ಠ ೮:೩೫ಕ್ಕೆ
ಚಂದ್ರ ಪರ್ವಬಿಂದುವಿನಲ್ಲಿ೧೬:೩೧ಕ್ಕೆ
ಚಂದ್ರ ಗ್ರಹಣ (೨೨:೧೨ರಿಂದ ಮರು ಬೆಳಿಗ್ಗೆ ೨.೩೦ರವರೆಗೆ)
೧೪ ಚಾಂದ್ರಮಾಸದ ಕೊನೆಯ ಪಾದ
೧೫ ಬುಧ ಮಂಗಳ ಜೋಡಿ
೧೯ ಚಂದ್ರ ಶನಿ ಜೋಡಿ
೨೧ ಚಂದ್ರ ಶುಕ್ರ ಜೋಡಿ
೨೨ ಚಂದ್ರ ಪರ್ವ ಬಿಂದುವಿನಲ್ಲಿ:೧೧ಕ್ಕೆ
ಚಂದ್ರ – ಭೂಮಿ ದೂರ ಗರಿಷ್ಠ ೧೦:೫೦ಕ್ಕೆ , ಅಮಾವಾಸ್ಯೆ ೧೭:೧೫ಕ್ಕೆ
ಕಂಕಣ ಗ್ರಹಣ (ಪೆಸಿಫಿಕ್ ಸಾಗರದ ಮೇಲೆ ನೆರಳು)
೨೩ ಶರದ್ ವಿಷುವ:೩:೩ಕ್ಕೆ
೨೪ ಚಂದ್ರ – ಬುಧ ಜೋಡಿ
೨೬ ಗುರು ಚಂದ್ರ ಜೋಡಿ
೨೭ ಬುಧ ಚಿತ್ತಾ ಜೋಡಿ
೩೦ ಚಾಂದ್ರಮಾಸದ ಮೊದಲ ಪಾದ

ಅಕ್ಟೋಬರ್

೫ ಯುರೇನಸ್ ಆಚ್ಛಾದನೆ. ಚಂದ್ರ ಪರ್ವಬಿಂದುವಿನಲ್ಲಿ
೬ ಚಂದ್ರ - ಭೂಮಿ ದೂರ ಗರಿಷ್ಠ ೧೯:೩೪ಕ್ಕೆ
೭ ಹುಣ್ಣಿಮೆ ೮:೪೩ಕ್ಕೆ

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈ ಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

## ಸಾದರ ಸ್ವೀಕಾರ

**ಗೋಪಾಲಕೃಷ್ಣ ಅಡಿಗ** ಬಾಲಸುಬ್ರಹ್ಮಣ್ಯ ಕಂಜರ್ಪಣೆ
ಪುಟ : ೧೧೨ ಬೆಲೆ : ರೂ. ೬೦

**ಪಿ. ಲಂಕೇಶ್** ಡಾ॥ ಹಾಲತಿ ಸೋಮಶೇಖರ್
ಪುಟ : ೧೧೨ ಬೆಲೆ : ರೂ. ೬೦

**ಎ. ಆರ್. ಕೃಷ್ಣಶಾಸ್ತ್ರಿ** ಬಿ. ವಿ. ಶ್ರೀಧರ
ಪುಟ : ೧೦೮ ಬೆಲೆ : ರೂ. ೬೦

**ಶಾಂತಿನಾಥ ದೇಸಾಯಿ** ಡಾ॥ ಪ್ರೀತಿ ಶುಭಚಂದ್ರ
ಪುಟ : ೧೨೦ ಬೆಲೆ : ರೂ. ೬೦

**ಎಚ್. ತಿಪ್ಪೇರುದ್ರಸ್ವಾಮಿ** ಡಾ॥ ಎನ್. ಎಸ್. ತಾರಾನಾಥ
ಪುಟ : ೧೧೨ ಬೆಲೆ : ರೂ. ೬೦

**ಎಸ್. ಎಲ್. ಭೈರಪ್ಪ** ದೇಶ ಕುಲಕರ್ಣಿ
ಪುಟ : ೧೧೨ ಬೆಲೆ : ರೂ. ೬೦

ಮೇಲಿನ ೬ ಪುಸ್ತಕಗಳು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕು-ಬರೆಹ ಕುರಿತಾದುವು

**ವ್ಯಂಗ್ಯಚಿತ್ರ ರಚಿಸುವುದು ಹೇಗೆ ?** ಜಿ. ವಿ. ಗಣೇಶಯ್ಯ
ಪುಟ : ೧೧೨ ಬೆಲೆ : ರೂ. ೯೫

**ಕುತೂಹಲ ಕೆರಳಿಸುವ ಪ್ರಶ್ನೆಗಳು ಉತ್ತರಗಳು**
ಕೆ. ಎಲ್. ಗೋಪಾಲಕೃಷ್ಣ ರಾವ್
ಪುಟ : ೧೦೪ ಬೆಲೆ : ರೂ. ೯೦

ಮೇಲಿನ ಎಂಟು ಪುಸಕಗಳ ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಪ್ರಳಯದ ಕಸ** (ವಿಮರ್ಶಾ ಲೇಖನಗಳು)
ಡಾ॥ ಗುಂಡಣ್ಣ ಕಲಬುರ್ಗಿ
ಪುಟ : ೧೩೪ ಬೆಲೆ : ರೂ. ೧೨೦
ಸೌಜನ್ಯ ಪ್ರಕಾಶನ, 'ಸೃಷ್ಟಿ', ಈರಣ್ಣನಗರ, ಮೂಡಲಗಿ - ೫೯೧ ೩೧೨

**ಜೇಬಿನ ಬಾಬು** (ಪ್ರಬಂಧ ಸಂಕಲನ) ಅನಂತ ಕಲ್ಲೋಳ
ಪುಟ : ೧೫೨ ಬೆಲೆ : ರೂ. ೭೫
ಅಮೋಘ ವಾಙ್ಮಯ ಪ್ರಸಾರ, ೬೫, ವೆಂಗೋ, ತೊರಗಲ್ಲ ಮಾರ್ಗ, ರಾಣಿ ಚೆನ್ನಮ್ಮ ನಗರ, ಬೆಳಗಾವಿ - ೫೯೦ ೦೦೭

**ಚಿನ್ನದ ಇಲಿ** (ಮಕ್ಕಳ ಕಥೆಗಳು) ಟಿ. ಎಸ್. ಸಂಜೀವ ರಾವ್
ಪುಟ : ೮೮ ಬೆಲೆ : ರೂ. ೩೫
ಪ್ರಿಸಮ್ ಬುಕ್ಸ್ ಪ್ರೈ. ಲಿ., ನಂ. ೧೮೬೫, ೩೨ನೇ ಕ್ರಾಸ್, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

**ಮಾಧ್ವಮಠಗಳು** (ಪ್ರಾರಂಭ ಮತ್ತು ಬೆಳವಣಿಗೆ)
ಡಾ॥ ಕೃಷ್ಣ ಕೊಲ್ಹಾರ ಕುಲಕರ್ಣಿ
ಪುಟ : ೨೩೨ ಬೆಲೆ : ರೂ. ೧೨೫
ಭಾಗ್ಯಲಕ್ಷ್ಮಿ ಪ್ರಕಾಶನ, ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ಮೂರನೇ ಹಂತ, ೩ನೇ ಫೇಸ್, ಬೆಂಗಳೂರು- ೫೬೦ ೦೮೫

**ವಿನೋದ** (ವಾರ್ಷಿಕ ವಿಶೇಷ ಸಂಚಿಕೆ-೨೦೦೬)
ಸಂ : ಜಿ. ನಾರಾಯಣ
ಪುಟ : ೧೬೦ ಬೆಲೆ : ರೂ. ೧೫
ವಿನೋದ ಕಾರ್ಯಾಲಯ, ನಂ. ೩, ಬಿ.ಸಿ.ಸಿ. ಬ್ಯಾಂಕ್ ಕಟ್ಟಡ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಜೀವ ಚುಂಬನ** (ಕವನ ಸಂಕಲನ) ಎಂ. ಸುಭದ್ರಾ
ಪುಟ : ೮೬ ಬೆಲೆ : ರೂ. ೫೦
ಎಂ. ಸುಭದ್ರಾ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ

**ಪಿಸುಮಾತು** (ಪತ್ರಿಕಾ ಬರಹ ತುಣುಕುಗಳು) ಹಂಝು ಮಲಾರ್
ಪುಟ : ೧೦೪ ಬೆಲೆ : ರೂ. ೬೦
ಅಖಿಲಾ ಏಜೆನ್ಸೀಸ್, 'ಅಂಜನಾದ್ರಿ' ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮೀ ಟಾಕೀಸ್ ಹಿಂಭಾಗ, ಮೈಸೂರು-೫೭೦ ೦೨೪

**ಅರಳವ್ವ** (ಕಾದಂಬರಿ) ಡಾ॥ ಹೆಬ್ಬಾಲೆ ಕೆ. ನಾಗೇಶ್
ಪುಟ : ೧೨೬ ಬೆಲೆ : ರೂ. ೯೦
ರುಚಿರ ಪ್ರಕಾಶನ, ಎಂ. ಪಿ. ಪ್ರಕಾಶ್‌ನಗರ, ಹೊಸಪೇಟೆ-೫೮೩ ೨೦೧

**ಮೂರು ಬೀದಿನಾಟಕಗಳು** ಮೂಡ್ನಾಕೂಡು ಚಿನ್ನಸ್ವಾಮಿ
ಪುಟ : ೫೮ ಬೆಲೆ : ರೂ. ೬೦

**ಬದಲಾಗದ ಫೋಟೋ** (ಕಥಾ ಸಂಕಲನ)
ಶಾಂತಾರಾಮ ಸೋಮಯಾಜಿ
ಪುಟ : ೧೨೬ ಬೆಲೆ : ರೂ. ೧೦೦

**ವೈಶಾಖ** (ಕಾದಂಬರಿ) ಚದುರಂಗ
ಪುಟ : ೩೨೮ ಬೆಲೆ : ರೂ. ೧೭೫

**ಸರ್ವಮಂಗಳಾ** (ಕಾದಂಬರಿ) ಚದುರಂಗ
ಪುಟ : ೨೮೦ ಬೆಲೆ : ರೂ. ೧೫೦

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
ಅಭಿರುಚಿ ಪ್ರಕಾಶನ, ನಂ. ೩೮೬, ೧೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು - ೯

**ನಗುವ ತುಟಿಗಳಲ್ಲಿ** (ಕವನ ಸಂಕಲನ) ನಾಗರಾಜ ಹುಡೇದ
ಪುಟ : ೪೫ ಬೆಲೆ : ರೂ. ೩೦
ಭಾನು ಪ್ರಕಾಶನ, ಲಕ್ಷ್ಮೇಶ್ವರ - ೫೮೨ ೧೧೬

**ಸಂವಹನ ಕನ್ನಡ** ಡಾ॥ ಡಿ. ಬಿ. ನಾಯಕ
ಪುಟ : ೧೪೪ ಬೆಲೆ : ರೂ. ೧೦೦
ಬಂಜಾರ ಪ್ರಕಾಶನ, ನಂ. ೪೪, ಶಂಕರ ಕೃಪಾ, ಸದಾಶಿವನಗರ, ಗುಲಬರ್ಗಾ - ೫೮೫ ೧೦೨

**ಭಾರತೀಯ ಖಗೋಳಶಾಸ್ತ್ರ** (ಕಿರು ಪರಿಚಯ)
ಡಾ॥ ಎಸ್. ಬಾಲಚಂದ್ರ ರಾವ್
ಪುಟ : ೧೧೨ ಬೆಲೆ : ರೂ. ೫೦
ಭಾರತೀಯ ವಿದ್ಯಾಭವನದ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧಿ ಕೇಂದ್ರ, ನಂ.೪೩/೧, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

**ಸೂರ್ಯಕಾಂತನ ವಚನಗಳು** (ವಚನ ಸಂಗ್ರಹ)
ಸೂರ್ಯಕಾಂತ ಗುಣಕೀಮಠ
ಪುಟ : ೬೪ ಬೆಲೆ : ರೂ. ೫೦
ಪವಿತ್ರವಾಣಿ ಪ್ರಕಾಶನ, 'ಪಯೋಧ', ೧೪, ಜ್ಞಾನ ಜ್ಯೋತಿ ನಗರ, ಉಲ್ಲಾಳ ರಸ್ತೆ, ಬೆಂಗಳೂರು - ೫೬೦ ೦೫೬

ರಸ್ತೆಯಲ್ಲಿ ಯಾರಾದರೂ ತಮ್ಮ ಪಾಡಿಗೆ ತಾವು ಒಬ್ಬೊಬ್ಬರೇ ಮಾತನಾಡುತ್ತಾ ಸಾಗುತ್ತಿದ್ದರೆ ''ಇದು ಯಾವುದೋ ಐಲು'' ಎಂದು ನಾವಂದುಕೊಂಡು ಅವರಿಂದ ದೂರ ಹೋಗುತ್ತಿದ್ದೆವು. ಮೊಬೈಲು ಬಂದನಂತರ ''ಇದು ಐಲಲ್ಲ, ಅಣ್ಣಾ, ಸ್ಟೈಲು'' ಎನ್ನುವಂತಾಗಿದೆ !

'ಮೊಬೈಲ್' (mobile) ಎನ್ನುವ ಆಂಗ್ಲ ಪದಕ್ಕೆ ಕೊಂಬುಕೊಟ್ಟು 'ಮೊಬೈಲು' ಎಂದು ನಾವು ಕನ್ನಡೀಕರಣ ಮಾಡಿದ್ದೇವೆ, ರೇಯಲ್ (rail) ಅನ್ನು 'ರೈಲು' ಮಾಡಿದಂತೆ. ಈ ಎರಡೂ ಪದಗಳು ತಪ್ಪಾಗಿ ಕನ್ನಡಕ್ಕೆ ಬಂದಿವೆ. 'ರೇಯಲ್' ಎಂದರೆ ಹಳಿ. ಹಳಿಗಳ ಮೇಲೆ ಹೋಗುವ ಗಾಡಿಯನ್ನೇ ನಾವು 'ರೈಲು' ಎಂದು ಮಾಡಿಕೊಂಡೆವು. 'ಮೊಬೈಲ್' ಎನ್ನುವುದು 'ಸಂಚಾರಿ' ಎಂಬ ಅರ್ಥ ನೀಡುವ ಗುಣವಾಚಕ. ಸಂಚಾರದಲ್ಲಿದ್ದಾಗಲೂ ಬಳಸಬಹುದಾದ ದೂರವಾಣಿಯನ್ನು ನಾವು 'ಮೊಬೈಲು' ಮಾಡಿಕೊಂಡಿದ್ದೇವೆ. ನಾವು ತಪ್ಪು ಮಾಡಿದಾಗಲೂ ಜನ ತೆಪ್ಪಗಿರುವಂತಾದರೆ ತಪ್ಪೇ ಒಪ್ಪವಾಗಿಬಿಡುತ್ತದೆ ಎನ್ನುವುದಕ್ಕೆ ಇದೊಂದು ಉದಾಹರಣೆ !



# ಮೊಬೈಲು

ಮಾನವನ ಪ್ರಗತಿಯ ಇತಿಹಾಸದಲ್ಲಿ ರೈಲು ಕಂಡುಹಿಡಿದದ್ದು ಒಂದು ಪ್ರಮುಖವಾದ ಘಟ್ಟ ಎಂದು ಗುರುತಿಸಲಾಗಿದೆ. ಅದೇ ರೀತಿ ಮೊಬೈಲು ಕಂಡುಹಿಡಿದದ್ದೂ ಒಂದು ಪ್ರಮುಖವಾದ ಘಟ್ಟ ಎಂದು ಈಗ ಗುರುತಿಸಬಹುದಾಗಿದೆ. ಸಂಚಾರ ಕ್ರಾಂತಿಗಿಂತ ಸಂಪರ್ಕ ಕ್ರಾಂತಿ ನಮ್ಮ ಬದುಕಿನ ಮೇಲೆ ಹೆಚ್ಚು ಪರಿಣಾಮ ಬೀರುತ್ತಿದೆ. ಮಲಗಿಕೊಂಡೇ ಇವತ್ತು ನಾವು ರೈಲಲ್ಲಿ ಸಂಚರಿಸಬಹುದು. ಅದರಂತೆ ಮಲಗಿಕೊಂಡೇ ಇವತ್ತು ನಾವು ದೂರದಲ್ಲಿರುವವರೊಡನೆ ಸಂಪರ್ಕಿಸಬಹುದು. ಕಾಯಿಲೆ ಬಿದ್ದಾಗ, ಬಾಯಿತಪ್ಪಿ, ಮಲಗಿಕೊಂಡೇ ಚುನಾವಣೆಯಲ್ಲಿ ಗೆಲ್ಲುತ್ತೇನೆಂದು ಹೇಳಿ, ಜನರನ್ನು ಎದುರು ಹಾಕಿಕೊಂಡು ಸೋತ ಕಾಮರಾಜ ನಾಡಾರ್, ಮೊಬೈಲ್ ಬಂದನಂತರ ಅದೇ ರೀತಿ ಹೇಳಿದ್ದರೆ ಖಂಡಿತ ಸೋಲುತ್ತಿರಲಿಲ್ಲವೆಂದು ನನಗನಿಸುತ್ತದೆ! ಮೊಬೈಲಿಗೂ ಒಂದು ಕೀರ್ತಿ ಬರುತ್ತಿತ್ತು.

ಲ್ಯಾಂಡ್‌ಲೈನ್ ಫೋನು ಒಂದು ರೀತಿಯ ಪಬ್ಲಿಕ್ ಫೋನು. ಮನೆಯಲ್ಲಿರುವವರೆಲ್ಲಾ ಅದನ್ನು ಬಳಸುತ್ತಾರೆ. ಅದೊಂದು ರೀತಿಯ ದ್ರೌಪದಿ! ಮೊಬೈಲು ಹಾಗಲ್ಲ, ವ್ಯಕ್ತಿಗತವಾಗಿ ಒಬ್ಬೊಬ್ಬರೇ ಪ್ರತ್ಯೇಕವಾಗಿ ಬಳಸುವ ಸಾಧನ. ಇದೊಂದು ರೀತಿಯ ಸೀತೆ! ಲ್ಯಾಂಡ್‌ಲೈನ್ ಫೋನು ಸ್ಥಾವರ, ಮೊಬೈಲು ಜಂಗಮ. ಅದು ಗುಡಿಯಲ್ಲಿನ ಲಿಂಗ, ಇದು ಬಗಲಲ್ಲಿನ ಲಿಂಗ. ಮೊಬೈಲನ್ನು ನಾವು ಧರಿಸುವುದು ಕೂಡ ಲಿಂಗಧಾರಣೆಗೆ ಸಮನಾಗಿದೆ! ಮೊಬೈಲಿನ ಆಕಾರ ಕೂಡ ಲಿಂಗವನ್ನೇ ಹೋಲುವಂಥದ್ದು! ಲ್ಯಾಂಡ್‌ಲೈನ್ ಫೋನಿನಲ್ಲಿ ಒಂದು ಕೊಳವೆ. ಒಂದು ಕಡೆಯಿಂದ ಕೇಳಬಹುದು. ಇನ್ನೊಂದು ಕಡೆಯಿಂದ ಮಾತನಾಡಬಹುದು. ಮೊಬೈಲಲ್ಲಿ ಹಾಗಲ್ಲ, ಅದು ತಾನೇ ಧ್ವನಿಯನ್ನು ಹೀರುತ್ತದೆ, ಹಾಗೆಯೇ ಬೀರುತ್ತದೆ. ಕಿವಿಯ ಹತ್ತಿರ ಅದು ಇದ್ದರೆ ಸಾಕು. ನೋಡುವುದಕ್ಕೂ ಮೊಬೈಲು ಚಂದ. ಮೇಲ್ಭಾಗದಲ್ಲಿ ಒಂದು ಸ್ಕ್ರೀನು, ಕೆಳಭಾಗದಲ್ಲಿ ಕೀ ಬೋರ್ಡು. ಅದಕ್ಕೊಂದು ಚಿಕ್ಕ ಆಂಟೆನಾ ಎಂಬ ಕೋಡು. ಜಗತ್ತೇ ನಮ್ಮ ಮುಷ್ಟಿಯಲ್ಲಿದೆ ಎಂಬ ಹೆಮ್ಮೆ ನಮಗೆ ಬಂದದ್ದು ಮೊಬೈಲಿನಿಂದಾಗಿ!



○ ಹಾಲಾಡಿ ಮಾರುತಿ ರಾವ್

ಮೊಬೈಲಿನ ಸಾಧಕ-ಬಾಧಕಗಳನ್ನು ಎಣಿಸತೊಡಗಿದರೆ ಅದೊಂದು ದೊಡ್ಡ ಪಟ್ಟಿಯಾಗುತ್ತದೆ. ಒಂದೆರಡು ಅಂಶಗಳನ್ನು ಮಾತ್ರ ಎತ್ತಿಕೊಂಡು ಇದರಿಂದಾಗುತ್ತಿರುವ ಸಾಮಾಜಿಕ ಬದಲಾವಣೆಯ ಬಗ್ಗೆ ನಿಮ್ಮ ಗಮನ ಹರಿಸಲು ಇಲ್ಲಿ ನಾನು ಪ್ರಯತ್ನಿಸುತ್ತೇನೆ.

ಈ ಹಿಂದೆ ಕಳ್ಳರು ಮನೆಗೆ ಬಂದು ಕಳ್ಳತನ ಮಾಡುವ ಮುಂಚೆ ಫೋನಿನ ವೈರು ತುಂಡುಮಾಡಿ ಮನೆಯವರು ಹೊರಗಿಂದ ನೆರವು ಪಡೆಯಲು ಸಾಧ್ಯವಾಗದಂತೆ ಮಾಡುತ್ತಿದ್ದರು. ಮೊಬೈಲಿಗೆ ವೈರು ಕನೆಕ್ಷನ್ ಎಂಬುದೇ ಇಲ್ಲದಿರುವುದರಿಂದ ಕಳ್ಳರು ಅದನ್ನು ನಿಷ್ಕ್ರಿಯ ಮಾಡಲು ಆಗುವುದಿಲ್ಲ, ಕಳ್ಳರಿಗೆ ಇದೊಂದು ತಾಪತ್ರಯ. ಕಳ್ಳರೂ ತಮ್ಮದೇ ಆದ ಮೊಬೈಲ್ ಬಳಸಿ ತಮ್ಮ ಪಂಗಡದವರೊಡನೆ ಸಂಪರ್ಕಿಸಿ ಬಹು ಬೇಗ ತಪ್ಪಿಸಿಕೊಳ್ಳುವ ಸಾಧ್ಯತೆ ಇರುವುದು ನಿಜ. ಆದರೆ ಅವರು ಬಳಸುವ ಮೊಬೈಲು ಪೊಲೀಸರಿಗೆ ಸಿಕ್ಕರೆ ಅದರಲ್ಲಿ ರೆಕಾರ್ಡ್ ಆಗಿರುವ ಫೋನು ನಂಬರುಗಳನ್ನು ಹುಡುಕಿ ತೆಗೆದು ಅದರಿಂದ ಅವರ ಅನೇಕ ದುಷ್ಕೃತ್ಯಗಳನ್ನು ಪತ್ತೆಹಚ್ಚಬಹುದು. ಹುಡುಗಿಯರ ಕೈಯಲ್ಲಿ ಮೊಬೈಲ್ ಇದ್ದರೆ ಬೀದಿಕಾಮಣ್ಣಗಳು ಹಿಂಜರಿಯುತ್ತಾರೆ. ಹೀಗೆ ಕ್ರೈಮ್ ಕಡಿಮೆಯಾಗಲು ಮೊಬೈಲು ಸಹಕಾರಿಯಾಗಿದೆ.

ವಾಹನಗಳ ಚಾಲಕರು ವಾಹನ ಚಲಿಸುತ್ತಿರುವಾಗ ಮೊಬೈಲನ್ನು ಒಂದು ಕೈಯಲ್ಲಿ ಹಿಡಿದುಕೊಂಡು ಮಾತು ಕೇಳಿಸಿಕೊಳ್ಳುವುದರಲ್ಲಿ, ಮಾತನಾಡುವುದರಲ್ಲಿ ಮಗ್ನರಾಗಿದ್ದುದರ ಪರಿಣಾಮವಾಗಿ ರಸ್ತೆಯಲ್ಲಿ ಅಪಘಾತಗಳ ಸಂಖ್ಯೆ ಆರಂಭದಲ್ಲಿ ಹೆಚ್ಚಾದದ್ದುಂಟು. ಕರೆಬಂದಾಗ ವಾಹನವನ್ನು ರಸ್ತೆಯ ಬದಿಯಲ್ಲಿ ನಿಲ್ಲಿಸಿ ಮಾತು ಮುಗಿಸಿ ಅನಂತರ ಮುಂದೆ ಚಲಿಸಿದರೆ ಈ ಬಗೆಯ ಅಪಘಾತಗಳು ಸಂಭವಿಸುವುದಿಲ್ಲ, ಗಾಡಿ ನಿಲ್ಲಿಸಲು ಸಾಧ್ಯವಾಗದಿದ್ದರೆ ತೊಂದರೆ ಇಲ್ಲ, ಕರೆಗಂಟೆ ಹೊಡೆದು ಹೊಡೆದು ನಿಂತರೂ ಅದು ಮಿಸ್ ಆದ ಕಾಲ್ ತೋರಿಸುತ್ತದೆ. ಹಾಗಾಗಿ ಸ್ವಲ್ಪ ಕಾಲದನಂತರ ಅನುಕೂಲ ಮಾಡಿಕೊಂಡು ಆ ನಂಬರಿಗೆ ಚಾಲಕನು ಫೋನು ಮಾಡಬಹುದು. ನಾವು ಸಭೆಯಲ್ಲಿ ಕೂತಾಗ ನಮ್ಮ ಮೊಬೈಲಿನಿಂದಾಗಿ ಬೇರೆಯವರಿಗೆ ಕಿರಿಕಿರಿ ಆಗದಂತೆ ಮೊಬೈಲನ್ನು ಆಫ್ (off) ಮಾಡಬಹುದು. ನ್ಯೂ ಸಿವಿಕ್ ಸೆನ್ಸ್ ಇದ್ದರೆ ನ್ಯೂಸೆನ್ಸ್ ಇರುವುದಿಲ್ಲ!

ಮೊಬೈಲಲ್ಲಿ ಎಸ್. ಎಮ್. ಎಸ್. ಎಂಬ ಬಿಟ್ಟಿಸೇವೆಯ ಸೌಕರ್ಯವಿದೆ. ಇದರ

ಮೂಲಕ ಸಂದೇಶಗಳನ್ನು ಕಳಿಸಬಹುದು. ವ್ಯಾಪಾರಿಗಳಿಗೆ ಇದು ತುಂಬಾ ಪ್ರಯೋಜನಕಾರಿ. ಪ್ರೇಮಿಗಳಿಗಂತೂ ಇದೊಂದು ದೊಡ್ಡ ವರದಾನ. ಮೊಬೈಲಿನಿಂದಾಗಿ ಪತ್ರಗಳು ಮತ್ತು ಟೆಲಿಗ್ರಾಂಗಳು ಕಾಣೆಯಾಗುತ್ತಿವೆ. ಅಂಚೆ ಇಲಾಖೆ ಅಂಚಿಗೆ ದೂಡಲ್ಪಟ್ಟಿದೆ.

ದೊಡ್ಡವರು ಗಂಡಿಗೆ ಹೆಣ್ಣು, ಹೆಣ್ಣಿಗೆ ಗಂಡು ಹುಡುಕಿ ಮದುವೆ ಮಾಡುವ ದಿನಗಳು ದೂರ ಆಗುತ್ತಿವೆ. ಗಂಡು ಮತ್ತು ಹೆಣ್ಣು ನೇರವಾಗಿ ಒಬ್ಬರನ್ನೊಬ್ಬರು ಸಮಯಾನುಸಾರ ಅರಿತುಕೊಳ್ಳಲು, ಬೆರೆತುಕೊಳ್ಳಲು, ಬಾಳಸಂಗಾತಿಯಾಗಿ ಆಯ್ಕೆ ಮಾಡಿಕೊಳ್ಳಲು ಹದವಾಗುತ್ತಿರುವ ವಾತಾವರಣದಲ್ಲಿ ಮೊಬೈಲಿನ ಪಾತ್ರ ಹಿರಿದಾಗಿದೆ. ವರದಕ್ಷಿಣೆ ಎಂಬ ಪಿಡುಗು ತೊಲಗಬೇಕಾದರೆ ಪ್ರೇಮ ವಿವಾಹಗಳು ಚಾಲ್ತಿಯಲ್ಲಿ ಬರಬೇಕು. ಮದುವೆಗೆ ಮುಂಚೆ ಮಾತ್ರವಲ್ಲ, ಮದುವೆಯಾದ ನಂತರವೂ ಮೊಬೈಲಿನ ಸಂಪರ್ಕ ಸೌಕರ್ಯದಿಂದಾಗಿ ದೂರವಿರುವ ಕ್ಷಣಗಳಲ್ಲಿ ಒಬ್ಬರನ್ನೊಬ್ಬರು ವಿಚಾರಿಸಿಕೊಂಡು ಅನ್ಯೋನ್ಯತೆಯನ್ನು ಹೆಚ್ಚಿಸಿಕೊಳ್ಳಬಹುದು. ಸಂದೇಹಗಳಿಂದ ಉದ್ಭವಿಸುವ ಡೈವೋರ್ಸ್, ಸಂಪರ್ಕ ಸಣಕಲಾಗುವುದರಿಂದ ಉಂಟಾಗುವ ಎಕ್ಸ್‌ಟ್ರಾ ಮಾರಿಟಲ್




ಅಫೇರ್ಸ್ ಕಡಿಮೆಯಾಗಬಹುದು. ದೂರದಲ್ಲಿದ್ದರೂ ಮಾನಸಿಕವಾಗಿ ದೂರವಾಗದಂತೆ ಮಾನವೀಯ ಸಂಬಂಧಗಳನ್ನು ಉಳಿಸಿಕೊಳ್ಳುವುದರಲ್ಲಿ ಮೊಬೈಲಿನ ಪಾತ್ರ ಹಿರಿದಾಗಿರುತ್ತದೆ.

ದೂರದಲ್ಲಿರುವವರನ್ನು ಹತ್ತಿರವಾಗಿಸುವ ಮೊಬೈಲ್ ಅಪರೋಕ್ಷವಾಗಿ ಹತ್ತಿರದಲ್ಲಿರುವವರನ್ನು ದೂರಮಾಡಿಬಿಡುವ ಸಾಧ್ಯತೆ ಇದೆ. ಅಕ್ಕಪಕ್ಕದಲ್ಲಿರುವ ಜನರೊಡನೆ ನಾವು ಮಾತನಾಡುವುದು ಕಡಿಮೆ ಆಗಿದೆ. ಅವರ ಸುಖದುಃಖ ಹಂಚಿಕೊಂಡು ಅವರೊಡನೆ ಬೆರೆತು ಬಾಳುವ ಗುಣ ಕ್ಷೀಣಿಸುತ್ತಿದೆ. ಜನಸಾಮಾನ್ಯರಿಂದ ಅಲೂಫ್ (aloof) ಆಗಿರುವುದು ಸಮಾಜದ ಹಿತದ ದೃಷ್ಟಿಯಿಂದ ಒಳ್ಳೆಯದಲ್ಲ. ಸಮಾಜ ದ್ವೀಪಗಳಂತಾದರೆ ಅದು ಕ್ಷೇಮಕರವಲ್ಲ. ನಾವೇ ಒಂದು ಪ್ರಪಂಚವಾಗುವುದಕ್ಕಿಂತ, ಪ್ರಪಂಚದಲ್ಲಿ ನಾವು ಒಬ್ಬರಾಗಿ ಇರುವುದು ಉತ್ತಮ.

**ಹಾಲಾಡಿ ಮಾರುತಿ ರಾವ್**
೧೮೦/೨೮, 'ಇಂಚರ', ೧೫ನೇ ಮುಖ್ಯರಸ್ತೆ, ಕುರುಬರಹಳ್ಳಿ,
ಬೆಂಗಳೂರು - ೫೬೦ ೦೮೬

## ಮರ್ಯಾದೆ ಮುಖ್ಯ !

**ಹ**ಕಲ್‌ಬೆರಿ ಫಿನ್ ಆ ಪುಟ್ಟ ಊರಿನ ಚಿಕ್ಕ ಸಮಾಜದಲ್ಲೂ ಬಹಿಷ್ಕೃತ ಅಲೆಮಾರಿ ಅನಾಥ ಹುಡುಗ. ಚಿಂದಿ ಉಟ್ಟು, ಒಂದಿಷ್ಟು ನಯ ನಾಜೂಕು ತಿಳಿಯದೆ, ತಲೆ ಕೂದಲು ಬಾಚದೆ, ಸ್ನಾನ ಮಾಡದೆ, ಹೀಗೆಲ್ಲಾ. ಸತ್ತ ಬೆಕ್ಕು, ಇಲಿಗಳು, ಕವಣೆ, ಕಾಡು-ಮೇಡು, ನದಿ-ಬೆಟ್ಟಗಳಲ್ಲಿ ಸ್ವೇಚ್ಛೆಯಾಗಿ ಆಡಿಕೊಂಡಿರುವ ಇವನಿಗೆ ಅಕ್ಷರವೂ ಇಲ್ಲ, ಚರ್ಚ್ ಅದಕ್ಕೆ ಮೊದಲೇ ಇಲ್ಲ. ಥಾಮಸ್ ಸಾಯರ್ ಬಡವನೇ, ಅನಾಥನೂ. ಪಾಲಿ ಅಜ್ಜಿ ಅವನನ್ನು ಪೋಷಿಸುತ್ತಾಳೆ, ಶಿಕ್ಷಿಸುತ್ತಾಳೆ, ಶಾಲೆಗೆ ಕಳುಹಿಸುತ್ತಾಳೆ, ಚರ್ಚ್‌ಗೆ ಕರೆದೊಯ್ಯುತ್ತಾಳೆ. ಈ ಟಾಮನಿಗೂ, ಹಕಲ್‌ಗೂ ಸ್ನೇಹವೆಂದರೆ ಸ್ನೇಹ! ವಿಚಿತ್ರವೆಂದು ಯಾರಿಗೆ ಅನ್ನಿಸಿದರೆ ಏನು, ಆ ಹಸು ಮಕ್ಕಳಿಗೆ ಅದರ ಪರಿವೆಯೇ ಇಲ್ಲ. ಇವರಿಬ್ಬರೂ ಸೇರಿ ಊರಿನವರನ್ನೆಲ್ಲಾ ಭಯಗ್ರಸ್ತರನ್ನಾಗಿ ಕಾಡಿಸುತ್ತಿದ್ದ ಕಡಲುಗಳ್ಳ, ದರೋಡೆಕೋರ ಇಂಜಿನ್ ಜೋನ್ ದುಷ್ಟಕೂಟದ ಪ್ರಕರಣವನ್ನು ಪತ್ತೆಹಚ್ಚಲು ನೆರವಾಗುವುದೇ ಅಲ್ಲದೆ ಅವನು ಹೂತಿಟ್ಟಿದ್ದ ಅಪಾರನಿಧಿಗೂ ವಾರಸುದಾರರಾಗುವ ರೋಚಕ ಸಾಹಸಕಥೆಯೇ ವಿಖ್ಯಾತ ಬರಹಗಾರ ಮಾರ್ಕ್ ಟ್ವೇನ್‌ನ, ಸಾರ್ವಕಾಲಿಕವಾಗಿ ಮಕ್ಕಳಿಗೂ ಹಿರಿಯರಿಗೂ ಮುದನೀಡುತ್ತಿರುವ ಶತಮಾನಕ್ಕೂ ಮೀರಿದಷ್ಟು ಹಳೆಯದಾದ ಕೃತಿ 'ಟಾಮ್ ಸಾಯರ್ ಮತ್ತು ಹಕಲ್‌ಬೆರಿ ಫಿನ್‌ರ ಸಾಹಸದ' ಕಥೆ.

ನಿಧಿ ಸಿಕ್ಕ ಮೇಲೆ ಹಕಲ್‌ಬೆರಿ ಫಿನ್ನನ್ನು ಒಬ್ಬಂಟಿ ವಿಧವೆ ಡೆಗ್ಲಾಸ್ ನೋಡಿಕೊಳ್ಳುವುದು, ಅವನು ಶಾಲೆಗೆ ಹೋಗುವುದು, ಚರ್ಚಿಗೆ ಹೋಗುವುದು, ಒಟ್ಟಿನಲ್ಲಿ ಅವನನ್ನು 'ಮರ್ಯಾದಸ್ತ'ನನ್ನಾಗಿಸುವ 'ಹುನ್ನಾರ' ಅವನಿಗೆ ಅಷ್ಟಾಗಿ ಒಗ್ಗುತ್ತಿಲ್ಲ. ಒಂದೇ ಮುಜುಗರ. ''ಇದೇನಿದು ನಿತ್ಯ ಮೈತಿಕ್ಕಿ ಸ್ನಾನ ಮಾಡಿಸುತ್ತಾಳೆ, ತಲೆ ಬಾಚಲೇ ಬೇಕು. ಟಾಮ್, ನನ್ನಿಂದ ಸಾಧ್ಯ ಇಲ್ಲಪ್ಪ ಇದು, ಸಾಕೋಸಾಕು; ಕೈಲಿ ತಿನ್ನೋ ಹಂಗಿಲ್ವಂತೆ! ಚಾಕು, ಫೋರ್ಕ್ ಯಾಕಪ್ಪ ಇದಕ್ಕೆ!''

ಕೊನೆಗೂ ಒಂದು ದಿನ ಟಾಮ್ ಹತ್ತಿರ ತನ್ನ ನಿರ್ಧಾರ ಹೇಳೇಬಿಟ್ಟ. ''ಟಾಮ್! ನಾನು ಕಟು ನಿರ್ಧಾರಕ್ಕೆ ಬಂದಿದ್ದೀನಿ. ನಾನು ಖಂಡಿತ ಶ್ರೀಮಂತ ಆಗೋಲ್ಲ. ಮೊದಲಿಗೆ ನನಗೆ ಅವರ ಬಿಲಗಳಂತಹ ಮನೆಯೇ ಹಿಡಿಸೋಲ್ಲ. ನನ್ನನ್ನು ಒಯ್ಯಿ ಬೇಕಾದರೆ, ನಾನು ಶ್ರೀಮಂತ ಆಗೋಲ್ಲ. ನಮ್ಮ ಆ ಗುಹೆ, ಬದುಕು, ನದಿತಟ, ಕಡಲುಗಳ್ಳತನ ಮಾಡಿಕೊಂಡು ಆರಾಮವಾಗಿರಬಹುದಿತ್ತು. ಹೀಗೆಂದುಕೊಂಡಿದ್ದಕ್ಕೆ ಇದೇನೀ ಮೂರ್ಖತನ ಆವರಿಸಿಕೊಂಡು ನನ್ನ ಪ್ಲ್ಯಾನ್ ಎಲ್ಲಾ ಹಾಳಾಯ್ತಲ್ಲ!''

ಟಾಮ್‌ಗೆ ಇದೇನೂ ಸರಿ ಎನಿಸಲಿಲ್ಲ. ಫಿನ್ನನ ಮನ ಒಲಿಸಲು ಯೋಚಿಸುತ್ತಲೇ ಇದ್ದ. ಈಗ ಅವನಿಗೆ ಅವಕಾಶ ಸಿಕ್ಕಿತು. ''ಹಕಲ್ ನೋಡಪ್ಪಾ! ನಾನು ನನ್ನ ಮಟ್ಟಿಗೆ ಶ್ರೀಮಂತನಾದರೂ ಕಳ್ಳತನ ಮಾಡುವುದನ್ನೇನೂ ನಿಲ್ಲಿಸಬೇಕಾಗಿಲ್ಲ.''

ಹಕಲ್‌ನಿಗೆ ಅರ್ಥವಾಗಲಿಲ್ಲ. ''ಏ! ಹಾಗಂದ್ರೇನೋ? ನಿಜವಾಗ್ಲೂ ಹೀಗೇ ಹೇಳ್ತಿದೀಯಾ ?''

''ಹೌದಯ್ಯ! ಸತ್ಯವಾಗಿಯೂ ಹೇಳ್ತಿದೀನಿ. ಆದರೆ ಒಂದ್ವಿಶ್ಯ. ನಮ್ಮ ಕಳ್ಳರ ಗುಂಪಿಗೆ ನಿನ್ನನ್ನು ಸೇರಿಸಿಕೊಳ್ಳೋಕೆ ಆಗೋಲ್ಲಮ್ಮ. ನೋಡು ನೀನು ಗೌರವಸ್ಥ ಅನ್ನಿಸ್ಕೋಳ್ಳೊದು ಮುಖ್ಯ, ಅದಕ್ಕೆ.''

ಹಕಲ್‌ಗೆ ಮತ್ತೂ ಗಲಿಬಿಲಿ. ಗೌರವಸ್ಥ, ಕಳ್ಳತನ ಹೀಗೆ ಎರಡೂ ಅಂತ! ಟಾಮ್ ಮುಂದುವರಿದ, ''ನೋಡು ಫಿನ್! ಕಡಲುಗಳ್ಳತನ, ಸುಲಿಗೆ ಅಂದರೆ ಒಂಥರ. ಅದಕ್ಕೇ ಸಾಧಾರಣವಾಗಿ 'ಕಳ್ಳ' ಎಂಬ ಪದಕ್ಕಿರುವ ಮರ್ಯಾದೆ ಬರೋಲ್ಲ. ಇಂಥ ಕಳ್ಳರೇ ಬಹಳ ದೇಶಗಳಲ್ಲಿ ಕುಲೀನಸ್ಥರೆಂಬ ಶ್ರೇಣಿಯಲ್ಲಿ ಅತ್ಯುನ್ನತ ಮಟ್ಟವನ್ನು ತಲುಪುತ್ತಾರೆ – ಮಂತ್ರಿಗಳು, ಗವರ್ನರುಗಳು, ಜಾಗೀರುದಾರರು ಮುಂತಾಗಿ. ಅಂದ್ರೆ ಅರ್ಥವಾಯ್ತು. ಹಕಲ್! ಮರ್ಯಾದಸ್ಥ ಅಂತ ಅನ್ನಿಸಿಕೊಳ್ಳೊದು, ಹಾಗಿರುವುದೇ ಮುಖ್ಯ ನೋಡು!''

ಟಾಮ್‌ನ ಈ ವಿವೇಕಯುತ ನಿವೇದನೆಯನ್ನು ಕೇಳುತ್ತಾ, ಒಂದು ನಿಮಿಷ ಬೆಕ್ಕಸಬೆರಗಾಗಿ ನೋಡುತ್ತಿದ್ದ ಹಕಲ್, ಸಾವರಿಸಿಕೊಂಡು ಹೇಳಿದ, ''ನಾನು ಮನಸ್ಸು ಬದಲಾಯಿಸ್ದೀನಿ ಟಾಮ್. ನಾನು ಈ ವಿಧವೆ ಆಶ್ರಯದಲ್ಲೇ ಸಾಯೋವರೆಗೂ ಇರಲು ಒಪ್ಪಿಗೆ ಆಯ್ತು. ಪ್ರತಿಯೊಬ್ಬರೂ ಗಮನಿಸಿ ಮಾತನಾಡಿಕೊಳ್ಳೋ ರೀತಿಯಲ್ಲಿ ಕಳ್ಳನೆಂಬ ಕೀರ್ತಿ ಸಂಪಾದಿಸಿಯೇ ಸಂಪಾದಿಸುತ್ತೇನೆ. ನನ್ನನ್ನು ಅನಾಥ ಅಲೆಮಾರಿತನದಿಂದ ಕೈಹಿಡಿದೆತ್ತಿ ಸಲಹಿದ್ದು ಸಾರ್ಥಕವಾಯ್ತು ಅಂತ ಹೆಮ್ಮೆಯಾದರೆ ಆಕೆಗೆ ನಾನೇ ಧನ್ಯ!''

ಮಾರ್ಕ್ ಟ್ವೇನ್‌ನ 'ಅಡ್ವೆಂಚರ್ಸ್ ಆಫ್ ಟಾಮ್ ಸಾಯರ್'ನಿಂದ

ಕನ್ನಡಕ್ಕೆ : **ಕೆ. ಎಸ್. ಪಾರ್ಥಸಾರಥಿ**
ಸಿ-೨, 'ಐಕ್ಯತಾ', ೬೦/೨, ೧೭ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫





## ಲೋಕಾಯತ ದರ್ಶನ

ಎಸ್. ಎಸ್. ಹಿರೇಮಠ

**ಪುಟ :** xvi+೧೧೬ **ಬೆಲೆ : ರೂ. ೯೦**

**ಸಮತಾ ಪ್ರಕಾಶನ,** ಕೊಟ್ಟೂರು, ಕೂಡ್ಲಿಗಿ ತಾ। ಬಳ್ಳಾರಿ ಜಿ।

ಭಾರತದಲ್ಲಿ ತುಂಬ ಪ್ರಾಚೀನಕಾಲದಿಂದಲೂ ಪ್ರಚಲಿತವಿದ್ದ ಜನತೆಯ ತತ್ವಜ್ಞಾನವೇ 'ಲೋಕಾಯತ'. ಪರಂಪರೆ ಅದನ್ನು ಮುಖ್ಯವಾಗಿ 'ದರ್ಶನ'ವೆಂದು ಗುರುತಿಸುತ್ತ ಬಂದಿದೆ. 'ಲೋಕಾಯತ'ದ ಬಗ್ಗೆ ದೇವಿಪ್ರಸಾದ ಚಟ್ಟೋಪಾಧ್ಯಾಯರು 'ಭಾರತದ ತತ್ವಜ್ಞಾನದ ಚರಿತ್ರೆ ೨೫೦೦ ವರ್ಷಗಳಷ್ಟು ದೀರ್ಘಕಾಲದ್ದು. ಕ್ರಿ.ಪೂ. ೭-೮ನೇ ಶತಮಾನದಲ್ಲಿದ್ದ ಉಪನಿಷತ್ತುಗಳಿಂದ ಪ್ರಾರಂಭವಾಗಿ ೧೭ನೇ ಶತಮಾನದ ಗದಾಧರನ ವರೆಗೆ ಭೌತವಾದ ಮತ್ತು ಅಧ್ಯಾತ್ಮವಾದಗಳ ನಿರಂತರ ಸಂಘರ್ಷದ ಚರಿತ್ರೆಯಲ್ಲಿ 'ಅಧ್ಯಾತ್ಮವಾದ', ಅನುಭಾವಿಕತೆ, ನಿಗೂಢತೆ ಮತ್ತು ಪವಿತ್ರ ಗ್ರಂಥಗಳಿಗೆ ಅಂಟಿಕೊಳ್ಳುವ ಲಕ್ಷಣಗಳನ್ನು ತೋರ್ಪಡಿಸಿವೆ. ಈಗಲೂ ಈ ಹೋರಾಟ ನಿಂತಿಲ್ಲ' ಎನ್ನುತ್ತಾರೆ. ಹಿರೇಮಠರು ಹೇಳುವಂತೆ ಈ ಮಾತು ಇಡೀ ದೇಶವನ್ನು ದೃಷ್ಟಿಕೋನದಲ್ಲಿಟ್ಟುಕೊಂಡು ಹೇಳಿರುವಂಥವು. ಇಂಥ ವಿಚಾರಗಳ ಹಿನ್ನೆಲೆಯಲ್ಲಿ ಕರ್ನಾಟಕದ ದೇಸೀ ನೆಲೆಯಲ್ಲಿ ನಡೆಯುತ್ತಿದ್ದ ಸಂಘರ್ಷದ ಸ್ವರೂಪ ಎಂಥದ್ದು? ಈ ಕೃತಿ ತುಂಬ ಸಮರ್ಥವಾಗಿ ವಿಶ್ಲೇಷಿಸಿದೆ. ಕನ್ನಡ ಲಿಖಿತ ಪರಂಪರೆಯಲ್ಲಿ ಲೋಕಾಯತ, ಕನ್ನಡ ಶಾಸನಗಳಲ್ಲಿ ಲೋಕಾಯತ, ಲೋಕಾಯತದಲ್ಲಿ ಸತ್ಯದ ಪರಿಕಲ್ಪನೆ... ಹೀಗೆ ಅಧ್ಯಯನದ ಹರವು ಇದೆ.



## ಅತಂತ್ರ

ಗುರುರಾಜ ಮಾರ್ಪಳ್ಳಿ

**ಪುಟ :** ೧೬೮ **ಬೆಲೆ : ರೂ. ೫೦**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

'ಕಾದಂಬರಿಯಲ್ಲಿ ತಿಳುವಳಿಕೆಯ ಜತೆ ಅಜ್ಞಾನಕ್ಕೂ ಅವಕಾಶ ಇರುವುದರಿಂದ ಅರ್ಥಶಾಸ್ತ್ರದ ವಿಚಾರಗಳನ್ನು ಒಬ್ಬ ಕವಿಯ ಬದುಕಿನಲ್ಲಿ ನಾನು ತರಲು ಸಾಧ್ಯವಾಗಿದೆ. ಅದೊಂದು ಸಂಕೇತ ಮಾತ್ರ' – ತಮ್ಮ ಕಾದಂಬರಿಯ ಬಗೆಗೆ ಗುರುರಾಜ ಮಾರ್ಪಳ್ಳಿ ಯವರು ಮುನ್ನುಡಿಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ. ಈ ಮಾತು ಮಾರ್ಗಸೂಚಿ ಯಾಗಿದೆ. ಬೆನ್ನುಡಿ ಬರೆದಿರುವ ಜಯಂತ ಕಾಯ್ಕಿಣಿಯವರು 'ಅವರ ಖಯಾಲಿ ಪಯಣದ ಟಿಪ್ಪಣಿ ಪುಸ್ತಕದಂತಿದೆ' ಎಂದಿದ್ದಾರೆ. ನಟ, ವರ್ಣಚಿತ್ರಗಾರ, ರಂಗಕರ್ಮಿ, ಕವಿ, ಕತೆಗಾರ, ನೃತ್ಯಪಟು, ಹಾಡುಗಾರ, ಅರ್ಥಧಾರಿ... ಹೀಗೆ ಎಲ್ಲವೂ ಆಗಿ ಬಹುರೂಪಿ ಪ್ರತಿಭಾವಿಲಾಸಿಯಾಗಿರುವ ಗುರುರಾಜ ಮಾರ್ಪಳ್ಳಿಯವರು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿರುವ ಜೀವನದ ಹರವು ವಿಶಿಷ್ಟವಾದದ್ದು. 'ಒತ್ತಡಗಳಲ್ಲಿ ಹಣ್ಣಾದ ಮನಸ್ಸಿನ ಕಥನ ಇದು, ಇಲ್ಲಿ ಹಣ್ಣಾಗುವುದು ಪಕ್ವತೆಯೂ ಹೌದು, ಗಾಯಗೊಂಡ ಜೀವದ ದಣಿವೂ ಹೌದು' – ಜಯಂತರ ಈ ಮಾತುಗಳು ಕಾದಂಬರಿಯನ್ನು ಗ್ರಹಿಸಲಿಕ್ಕೆ ಅನುವು ಮಾಡಿಕೊಡುತ್ತವೆ.



## ನುಡಿಗವಳ (ಮಹಿಳೆಯರ ಸೃಜನೇತರ ಸಾಹಿತ್ಯದ ಅವಲೋಕನ)

ಡಾ॥ ಸಬಿಹಾ ಭೂಮಿಗೌಡ

**ಪುಟ :** xiv+೧೩೦ **ಬೆಲೆ : ರೂ. ೪೫**

**ಕನ್ನಡ ಸಾಹಿತ್ಯ ಪರಿಷತ್ತು,** ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಒಂದು ಶತಮಾನದಲ್ಲಿ ಮಹಿಳೆಯರಿಂದ ರಚಿತವಾದ ಸೃಜನೇತರ ಕೃತಿಗಳ ಸಮೀಕ್ಷೆಯನ್ನು ಡಾ॥ ಸಬಿಹಾ ಭೂಮಿಗೌಡ ಮಂಡಿಸಿದ್ದಾರೆ. ಮಹಿಳೆಯರು ಕಥೆ, ಕಾದಂಬರಿ, ಕಾವ್ಯ ಕ್ಷೇತ್ರದಲ್ಲಿ ಮಾಡಿರುವ ಸಾಧನೆಯನ್ನು ಈಗಾಗಲೇ ಒಪ್ಪಿಕೊಂಡಿದೆ; ಆದರೆ ವಿಮರ್ಶೆ, ಸಂಶೋಧನೆ, ಸಂಪಾದನೆ ಮತ್ತು ಅನ್ಯಜ್ಞಾನಗಳ ವಲಯದ ಮಹಿಳೆಯ ಸಾಧನೆಯನ್ನು ಗುರುತಿಸುವ ಪ್ರಯತ್ನ ನಡೆದದ್ದೇ ವಿರಳ. ಹಾಗಾಗಿ ಕರ್ನಾಟಕದ ವಿವಿಧ ಪ್ರದೇಶಗಳ ಸೃಜನೇತರ ಬರವಣಿಗೆಯಲ್ಲಿ ತೊಡಗಿರುವ ಲೇಖಕಿಯರಿಗೆ ಪತ್ರ ಬರೆದು, ಕೃತಿಗಳನ್ನು ಒದಗಿಸಲು ಕೋರಿ, ಕನ್ನಡದ ವಿಮರ್ಶಕಿಯರನ್ನು ಗಮನಿಸಿಕೊಂಡು, ದಾಖಲಾತಿಗೆ ಸಂಬಂಧಿಸಿದ ಅಭಿಪ್ರಾಯಗಳನ್ನು ಪತ್ರಮುಖೇನ ತಿಳಿದುಕೊಂಡು ಎಲ್ಲವನ್ನೂ ಇಲ್ಲಿ ಅಚ್ಚುಕಟ್ಟಾಗಿ ಸಂಗ್ರಹಿಸಿಕೊಟ್ಟಿದ್ದಾರೆ.



## ಶಾಲೆಗಾಗಿ ಮಕ್ಕಳ ನಾಟಕ ಮಾಲೆ (ಸಂಪುಟ ೧-೬)

ಸಂ. ಡಾ॥ ಬಿ. ವಿ. ರಾಜಾರಾಂ

**ಪುಟ :** ೧೨೮ **ಬೆಲೆ : ರೂ. ೬೦**

**ಭಾಗ್ಯಲಕ್ಷ್ಮೀ ಪ್ರಕಾಶನ,** ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂ - ೮೫

ಮಕ್ಕಳಲ್ಲಿ ಮನೋರಂಜನೆಯ ಜೊತೆಗೆ ಮನೋವಿಕಾಸಕ್ಕೆ ಅನುವು ಮಾಡಿಕೊಡುವ ಕ್ಷೇತ್ರವೆಂದರೆ ರಂಗಭೂಮಿ. ಹೀಗಾಗಿ ಇಂದು ರಂಗಮುಖೇನ ಶಿಕ್ಷಣ, ರಂಗಾಂಶಗಳಿಂದ ಕೂಡಿದ ತರಗತಿಯ ಪಾಠಗಳು, ರಂಗಕಲಿಕೆಯೊಂದಿಗೆ ವಿದ್ಯಾಕಲಿಕೆ, ರಂಗಶಿಬಿರಗಳು, ಶಿಕ್ಷಕರು-ಮಕ್ಕಳು-ಪೋಷಕರು ಜೊತೆಯಾಗಿ ನಡೆಸುವ ಪ್ರದರ್ಶನಗಳು, ಪ್ರಯೋಗಗಳು – ಹೀಗೆ ಹತ್ತಾರು ರೀತಿಯಲ್ಲಿ ಶಾಲೆಯಲ್ಲಿ ಮಕ್ಕಳನ್ನು ರಂಗಚಟುವಟಿಕೆಗಳಲ್ಲಿ ತೊಡಗಿಸಲಾಗುತ್ತಿದೆ. ಆದರೂ ರಂಗಕೃತಿಗಳು ಆಯಾ ಸಂದರ್ಭಗಳಲ್ಲಿ ಸಿದ್ಧಗೊಂಡು, ಪ್ರದರ್ಶನಗೊಂಡು, ಹಸ್ತಪ್ರತಿಗಳ ರೂಪದಲ್ಲಿಯೇ ಉಳಿದುಬಿಡುತ್ತವೆ. ಹಾಗಾಗಿ ಶಾಲೆಗಳಲ್ಲಿ ಮಕ್ಕಳ ನಾಟಕಗಳನ್ನು ಪ್ರದರ್ಶಿಸುವಾಗ ರಂಗಕೃತಿಗಳಿಗಾಗಿ ಪರದಾಡುವ ಸ್ಥಿತಿ ಒದಗಿಬರುತ್ತಿರುತ್ತದೆ. ಈ ಕೊರತೆ ನೀಗಲು ಮಕ್ಕಳ ನಾಟಕಗಳನ್ನು ಆರು ಸಂಪುಟಗಳಲ್ಲಿ ಹೊರತರಲಾಗಿದೆ.



## ಉರಿವ ಒಲೆಗಳ ಮುಂದೆ (ಕವನ ಸಂಕಲನ)

ಆರ್. ನಿರ್ಮಲ

**ಪುಟ :** ೫೨ **ಬೆಲೆ : ರೂ. ೨೫**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

'ಚಲ್ ಮೇರಿ ಲೂನಾ' ಪ್ರಬಂಧ ಸಂಕಲನಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ಪುಸ್ತಕ ಬಹುಮಾನ ಪಡೆದಿರುವ ಆರ್. ನಿರ್ಮಲರವರ ಚೊಚ್ಚಲ ಕವನ ಸಂಕಲನ ಇದು. ಜಿ. ಎಸ್. ಶಿವರುದ್ರಪ್ಪನವರು ತಮ್ಮ ಮುನ್ನುಡಿ ಕವಿತೆಯಲ್ಲಿ ಹೇಳಿರುವಂತೆ – 'ಈ ದೇಶದ ಮಹಿಳೆಯರ ಚರಿತ್ರೆಗೆ/ಉರಿಯುವುದು ಬರಿ ಒಲೆಯಲ್ಲ ಅವಳೂ ಕೂಡ ಎಂಬ ವಾಸ್ತವಕ್ಕೆ' – ಇದನ್ನು ರೂಪಕವಾಗಿ ಗ್ರಹಿಸಿದ್ದಾರೆ. ಹಾಗೆಯೇ 'ಮೃದುವಾಗಿ ಎದೆಯ ಕದ ತಟ್ಟುವೀ ಕವಿತೆಯೊಳಗಿರುವ ಈ ಮನಸ್ಸು ಜೀವನಪ್ರೀತಿಯನ್ನು ನಿರಂತರವಾಗಿ ಉಳಿಸಿಕೊಂಡಿರಲಿ' ಎಂದು ಹರಸಿದ್ದಾರೆ. ಕವಿತೆಯನ್ನು ಸಂಕೀರ್ಣಗೊಳಿಸದೆ ಸರಳ ಬಂಧದಲ್ಲಿ ಮನ ಕಲಕುವಂಥದ್ದನ್ನು ತುಂಬಿಸುವುದು ನಿರ್ಮಲಾರ ಕವಿತೆಗಳ ವೈಶಿಷ್ಟ್ಯ. ಹೆಣ್ಣು ತನ್ನ ಜೀವದ ಜಂಜಾಟದಲ್ಲಿ ಹೇಳದೆ ಹೋಗಬಹುದಾದ ಮಾತುಗಳನ್ನು ಮೊದಲಿಗೆ ಒಳಗೊಳಗೆ ಧ್ವನಿಸಿಕೊಂಡು ನಂತರ ಅದನ್ನು ಅಕ್ಷರ ರೂಪಕ್ಕಿಳಿಸಿದ್ದಾರೆ.



## ನೂರು ಗೋರಿಯ ದೀಪ (ಕವನ ಸಂಕಲನ)

ಡಾ॥ ವಿನಯಾ

**ಪುಟ :** xvi+೫೮ **ಬೆಲೆ : ರೂ. ೩೫**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

'ಬಾಯಾರಿಕೆ' ಕವನ ಸಂಕಲನದಿಂದ ಕಾವ್ಯಾಸಕ್ತರ ಗಮನ ಸೆಳೆದಿದ್ದ ಡಾ॥ ವಿನಯಾರ ಎರಡನೆಯ ಕವನ ಸಂಕಲನ ಇದು. 'ಕವಿತೆ ಮನಸ್ಸಿಗೆ ಮಡಿಲಿದ್ದಂತೆ. ಎಂಥ ಜೋಭದ್ರಗಳಿಗೆಯಲ್ಲೂ 'ನಾನಿದ್ದೇನೆ' ಎಂದು ಆಸರಾಗುತ್ತದೆ. ನನ್ನೊಳಗಿನ ನಾನು ಅನವರತ ಸಾಯುವ, ಹುಟ್ಟು ಚೋದ್ಯಕ್ಕೆ ನಾನೇ ಸಾಕ್ಷಿಯಾಗಿರುವ ವಿಸ್ಮಯವನ್ನು ಕವಿತೆ ನನಗೆ ನೀಡಿದೆ' ಎಂದು ಹೇಳಿಕೊಂಡಿರುವ ಡಾ॥ ವಿನಯಾರ ಕವಿತೆಗಳಲ್ಲಿ ತೀವ್ರ ಸ್ಪಂದನಗಳಿವೆ. 'ಭಾವತೀವ್ರತೆಯನ್ನು ಎಂದಿಗೂ ಕಳೆದುಕೊಳ್ಳದ ನಿರೂಪಣೆ ಇಲ್ಲಿನ ಮುಖ್ಯ ಗುಣ' ಎಂದು ಮುನ್ನುಡಿಯಲ್ಲಿ ಡಾ॥ ಎಚ್.ಎಸ್.ಆರ್. ಗುರುತಿಸಿದ್ದಾರೆ. ಡಾ॥ ವಿನಯಾರ ಕವಿತೆಗಳಲ್ಲಿ ನೂರಾರು ಹೆಣ್ಣುಗಳ ಸಾವಿರಾರು ನೋವುಗಳು ಬಿಡುಗಡೆಗಾಗಿ ಹಾತೊರೆಯುವುದನ್ನು ಗುರುತಿಸಬಹುದು.

– ಎನ್. ಸಿ. ಮಹೇಶ್, ಸೇಂಟ್ ಆ್ಯನ್ಸ್ ವುಮೆನ್ಸ್ ಪ್ರಥಮ ದರ್ಜೆ ಕಾಲೇಜು,
ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮

# ಪಾದ ನಮಸ್ಕಾರ

• ಬಸವರಾಜ ಹೂಗಾರ

ಕಿರಿಯ ಕಲಾವಿದರು ಹಿರಿಯ ಕಲಾವಿದರ ಪಾದಕ್ಕೆ ಹಣೆಹಚ್ಚಿ ನಮಸ್ಕರಿಸುತ್ತಾರೆ. ಹೊಸದಾಗಿ ನೌಕರಿ ಸೇರಲು ಊರು ಬಿಡುವಾಗ ಓಣಿಯ ಎಲ್ಲ ಹಿರಿಯರ ಪಾದಕ್ಕೂ ನಾನು ಹಣೆಹಚ್ಚಿ ನಮಸ್ಕರಿಸಿದೆ. ಗಂಡ ಬಿಟ್ಟರೂ, ಒಂದು ಎಮ್ಮೆ ಸಾಕಿ ದಿಬ್ಬದ ಮೇಲೆ ಮನೆ ಕಟ್ಟಿ ಹೈನಾಮಾಡಿ ಜೀವನ ಸಾಗಿಸುವ ಬಾಳವ್ವತ್ತಿಯ ಪಾದಕ್ಕೂ ಯಾಕೋ ನನ್ನ ಹಣೆ ಹಚ್ಚಬೇಕೆನಿಸಿತು. ಇದೊಂದು ರೀತಿಯ ಧನ್ಯತೆಯ ಭಾವ. ಬಾಗುವುದು ನಮ್ಮಲ್ಲಿ ಆತ್ಮ ವಿಶ್ವಾಸವನ್ನು ಹುಟ್ಟಿಸಬೇಕು. ತಲೆ ಎತ್ತಿ ನಡೆಯುವದನ್ನು ಕಲಿಸಬೇಕು. ಮೊನ್ನೆ ಸರಕಾರದ ಉನ್ನತ ಹುದ್ದೆಯಲ್ಲಿದ್ದ ನನ್ನ ಮಿತ್ರನೊಬ್ಬ ೨೦ ವರ್ಷಗಳ ನಂತರ ಧಾರವಾಡ ಜಿಲ್ಲೆಯ ಅವನ ಹುಟ್ಟೂರಿಗೆ ಹೋದಾಗ ದ್ಯಾಮವ್ವನ ಹಾಳು ಗುಡಿಯಲ್ಲಿ ಅರೆಪ್ರಜ್ಞಾವಸ್ಥೆಯಲ್ಲಿ ಕೆಮ್ಮುತ್ತಾ ಕುಳಿತ ಅವರ ದೊಡ್ಡಪ್ಪನ ಪಾದಕ್ಕೆ ಹಣೆಹಚ್ಚಿ ನಮಸ್ಕರಿಸಿದ.

ಬಾಗುವದು ಗುಲಾಮಗಿರಿಯ ಸಂಕೇತ ಎಂದು ಎಷ್ಟೇ ವೈಚಾರಿಕವಾಗಿ ನಾವು ಪ್ರತಿಪಾದಿಸಿದರೂ ಇಂಥ ಸಂಗತಿಗಳನ್ನು ಅಷ್ಟು ಬೇಗ ತಿರಸ್ಕರಿಸಲಾಗುವದಿಲ್ಲ. ಇದೊಂದು ಮೂಡ್. ಭಾರತೀಯ ಸಂಸ್ಕೃತಿಯಲ್ಲಿ ಕಂಡುಬರುವ ಶಿಷ್ಟಾಚಾರ. ತುಂಬಿದ ಸಭೆಯಲ್ಲಿ ಲತಾ ಮಂಗೇಷ್ಕರ್, ಬಿಸ್ಮಿಲ್ಲಾ ಖಾನ್‌ರ ಪಾದ ಮುಟ್ಟಿ ನಮಸ್ಕರಿಸುವದು ಇಡೀ ಸಭಾಂಗಣದ ಮನಃಸ್ಥಿತಿಯನ್ನೇ ಬದಲಾಯಿಸಬಲ್ಲದು. ಚಿತ್ರರಂಗದಲ್ಲಿ ಆರ್. ಎನ್. ಜಯಗೋಪಾಲರಿಗಿಂತ ಹೆಚ್ಚು ಹೆಸರು ಪಡೆದವರು ಎಸ್. ಜಾನಕಿ. ರಾಜಕುಮಾರರಂತಹ ಒಬ್ಬ ನಟ ನಮ್ಮ ಸಾಂಸ್ಕೃತಿಕ ಬದುಕಿನಲ್ಲಿ ಯಾವ ಪ್ರಭಾವವನ್ನು ಬೀರಲಿಕ್ಕೆ ಸಾಧ್ಯವಾಗಿದೆಯೊ ಹೆಚ್ಚು ಕಡಿಮೆ ಅಷ್ಟೇ ಪ್ರಮಾಣದಲ್ಲಿ ಒಂದು ದನಿಯ ಮುಖಾಂತರ ಆ ಕೆಲಸ ಮಾಡಿದವರು ಎಸ್. ಜಾನಕಿ. ಸನ್ಮಾನ ಸಮಾರಂಭವೊಂದರಲ್ಲಿ ಎಸ್. ಜಾನಕಿ, ಜಯಗೋಪಾಲರ ಪಾದಗಳಿಗೆ ನಮಸ್ಕರಿಸುವುದು ಏಕಕಾಲಕ್ಕೆ ನಮ್ಮಲ್ಲಿ ಕಲೆ ಹಾಗೂ ವ್ಯಕ್ತಿಯ ಬಗ್ಗೆ ಔನ್ನತ್ಯದ ಭಾವವನ್ನು ಹುಟ್ಟಿಸಬಲ್ಲದು.

ರಾಷ್ಟ್ರಪತಿ ಎ.ಪಿ.ಜೆ. ಅಬ್ದುಲ್ ಕಲಾಂ ಸುಬ್ಬುಲಕ್ಷ್ಮಿಯ ಶವದ ಮುಂದೆ ಬಾಗಿ ನಿಲ್ಲುವ ದೃಶ್ಯ ನಮ್ಮ ಎದೆಯಲ್ಲಿ ಥಟ್ಟನೆ ಸಾರ್ಥಕತೆಯ ಸಂಚಲನೆಯನ್ನೇ ಮೂಡಿಸ ಬಲ್ಲದು. ಇವು ನಾವು ನಮ್ಮೊಳಗೆ ಖಂಡಿತವಾಗಿ ತುಂಬಿ ಕೊಳ್ಳಲೇಬೇಕಾದ ಭಾರತೀಯ ಬದುಕಿನ ಸಾಂಸ್ಕೃತಿಕ ಶಿಷ್ಟಾಚಾರಗಳು. ಇವು ಅಹಂನ್ನು ಹುಟ್ಟಿಸದೇ ವ್ಯಕ್ತಿ ಹಾಗೂ ಸಮೂಹದಲ್ಲಿ ನೈತಿಕ ಜವಾಬ್ದಾರಿಯನ್ನು ಹೆಚ್ಚಿಸಲು ಸಹಾಯಕವಾಗುತ್ತವೆ.

ನಮ್ಮ ಅಹಂಅನ್ನು ಕರಗಿಸಲು 'ಎನಗಿಂತ ಕಿರಿಯರಿಲ್ಲ' ಎನ್ನುವ ಭಾವ ಮೂಡಿಸಲು ಬಹುಶಃ ದೇವರು - ಧರ್ಮಗಳಂಥ ಆಚರಣೆಗಳೂ ಇಂಥ ನೆಲೆ ಯಲ್ಲಿಯೇ ಮೂಡಿಬಂದಿರಬೇಕು : ಅಲ್ಲೊಂದು ಧ್ಯಾನದ ಕಲ್ಪನೆ ಹುಟ್ಟಿಕೊಂಡಿರಬೇಕು : ಅಧ್ಯಾತ್ಮ ಬೆಳೆದಿರಬೇಕು ; ಇವುಗಳ ನಡುವೆಯೇ ಪಾದ ನಮಸ್ಕಾರ ಒಂದು ಸಮೂಹಸನ್ನಿಯಾಗಿ, ಧ್ಯಾನ ಮತ್ತು ಅಧ್ಯಾತ್ಮವನ್ನು ಮೀರಿ ಬೆಳೆಯಿತು. ಮಠಾಧೀಶರು, ಧರ್ಮಗುರುಗಳು, ಪಾದ ನಮಸ್ಕಾರಗಳಿಂದಲೇ ದೊಡ್ಡವರಾದರು. ಸ್ವಾರ್ಥ ಸಾಧಿಸಿ ಕೊಳ್ಳುವದಕ್ಕಾಗಿ ಜನತೆಯನ್ನು ಮೌಢ್ಯತೆಯ ಪರಾಕಾಷ್ಠೆಗೆ ಒಯ್ಯಲು ಪಾದ ನಮಸ್ಕಾರ ಒಂದು ಸಾಧನವಾಯಿತು. ಅಡ್ಡಬಿದ್ದ ಎಲ್ಲ ಮನಸ್ಸುಗಳ ಮೇಲೆ ಗುಲಾಮಗಿರಿ ತನ್ನ ಮುದ್ರೆಯನ್ನೊತ್ತಲು ಪ್ರಾರಂಭಮಾಡಿತು. ಇದು ಎಲ್ಲಿಯ ವರೆಗೆ ಹೋಯಿತೆಂದರೆ, ಸಮಾಧಾನ, ಅಧ್ಯಾತ್ಮ ಹಾಗೂ ಧ್ಯಾನಕ್ಕಾಗಿ ಒಂದು ಮಠಕ್ಕೆ ಹೋದರೆ ಕಾಲಿಗೆ ನಮಸ್ಕಾರ ಮಾಡದೇ ಇರುವ ವ್ಯಕ್ತಿಯನ್ನು ಕೆಕ್ಕರಗಣ್ಣಿನಿಂದ ನೋಡುವ ಪರಿಪಾಠ ಶುರುವಾಯಿತು. ಪಾದಕ್ಕೆ ಹಣೆಹಚ್ಚದಿದ್ದರೂ ವ್ಯಕ್ತಿಗತವಾಗಿ ಗೌರವ ಕೊಡುವ ಸ್ವಾಮಿಗಳೂ ನಮ್ಮಲ್ಲಿ ಇದ್ದಾರೆ ಎನ್ನುವದೊಂದು ದೊಡ್ಡ ಸಮಾಧಾನ. ವ್ಯಕ್ತಿಗೆ ವೈಯಕ್ತಿಕವಾಗಿ ಆ ವ್ಯಕ್ತಿಯಲ್ಲಿ ಗೌರವ ಹುಟ್ಟಬೇಕು. ಇದೊಂದು ಒತ್ತಾಯವಾಗಬಾರದು. ಸಮೂಹಸನ್ನಿ ಇಲ್ಲಿ ಕೆಲಸ ಮಾಡಬಾರದು. ಪರಸ್ಪರ ಆತ್ಮಗೌರವ ಇಲ್ಲಿ ಮುಖ್ಯವಾಗಬೇಕು. ಸುಮ್ಮ-ಸುಮ್ಮನೆ ಪಾದಕ್ಕೆ ನಮಸ್ಕಾರ ಮಾಡಿಸಿಕೊಳ್ಳುವ ಚಾಳಿ ಆತ್ಮಗೌರವಕ್ಕೆ ಧಕ್ಕೆ ತರುತ್ತದೆ. ವ್ಯಕ್ತಿಯನ್ನು ಅರಿತು ತಾನಾಗಿಯೇ ತನ್ನ ಹಣೆ ಅವರ ಪಾದಕ್ಕೆ ಹಚ್ಚುವಂತಾಗಬೇಕು. ಕಂಡವರ ಕಡೆಯಿಂದ ಸೂಳೆ ಅನ್ನಿಸಿಕೊಂಡು ಒಬ್ಬನ ಜೊತೆ ನಿಯತ್ತಾಗಿ ಬಾಳುವ ನಮ್ಮ ಶೆಲ್ಲಿಕೇರಿ ಓಣಿಯ ತಾರವ್ವತ್ತಿಯ ಪಾದಕ್ಕೆ ನಾವು ನಮಸ್ಕಾರ ಮಾಡಲು ಸಾಧ್ಯವಾಗುವದಾದರೆ, ಇಂಥ ಮಠಾಧೀಶರ ಪಾದಕ್ಕೆ ಹಣೆಹಚ್ಚಲು ಯಾಕೆ ಮನಸ್ಸಾಗುವದಿಲ್ಲ ಎಂಬುದನ್ನು ಯೋಚಿಸಬೇಕು.



"ಹೆಂಡಿ ಕಸಾ ಬಳಿಯಾಕ ಹತ್ತಿನಿ. ಹೋಗಿ ಬಾ ತಮ್ಮಾ ಕಾಲ ಸೆಗಣಿ ಆಗ್ಯಾವು" ಎಂದು ಪಕ್ಕದ ಮನೆಯ ಕಾಕಾ ಎಷ್ಟು ಹೇಳಿದರೂ, ಅವರ ಹತ್ತಿರ ಹೋಗಿ ನಮಸ್ಕರಿಸಿಯೇ, ಬೆಂಗಳೂರಿನ ಬಸ್ಸು ಹತ್ತುವ ಕಾಲೇಜೊಂದರ ಅಧ್ಯಾಪಕ, ಪಕ್ಕದಲ್ಲಿಯೇ ನಾಡಿನ ದೊಡ್ಡ ಮಠ ಇದ್ದರೂ ಅಪ್ಪಿ - ತಪ್ಪಿಯೂ ಇವತ್ತಿಗೂ ಅಲ್ಲಿಗೆ ಭೇಟಿ ಕೊಟ್ಟಿಲ್ಲ. ಇದಕ್ಕೆ ಕಾರಣವೇನು ? ಎನ್ನುವ ಪ್ರಶ್ನೆ ಹಾಕಿಕೊಂಡೇ ನಾವು ಮುಂದೆ ಸಾಗಬೇಕಿದೆ ಅಂದಾಗ ಮಾತ್ರ ಸಾಮಾಜಿಕ ಸ್ವಾಸ್ಥ್ಯ ಸಾಧ್ಯ.



ಪಾದಕ್ಕೆ ಹಣೆಹಚ್ಚಲಿಲ್ಲ ಎನ್ನುವ ಒಂದೇ ಒಂದು ಕಾರಣಕ್ಕಾಗಿ ಎಷ್ಟೋ ಮಠಾಧೀಶರು ಪ್ರಮುಖ ವ್ಯಕ್ತಿಗಳ ಜೊತೆಗೆ ಸಂಪರ್ಕ ಕಡಿದುಕೊಂಡೇಬಿಡುತ್ತಾರೆ. ಇದರಿಂದ ಯಾರಿಗೆ ಲಾಭ ? ಯೋಚಿಸಬೇಕು. ಜನಮುಖಿಯಾದ ಆಶಯಗಳನ್ನಿಟ್ಟುಕೊಂಡ ಯಾವುದೇ ಧರ್ಮಾಧಿಕಾರಿ ಇಂಥ ಸಣ್ಣ ಸಂಗತಿಗಳಿಗೆ ವಿಚಲಿತನಾಗುವುದಿಲ್ಲ. ಜನತೆಗೆ ಆತ ಮನದಟ್ಟು ಮಾಡುತ್ತಾನೆ. ನಮಸ್ಕಾರ ಮಾಡಲಿ ಬಿಡಲಿ ಸಾಮಾಜಿಕ ಆಶಯ ಅವನಿಗೆ ಮುಖ್ಯವಾಗುತ್ತದೆ. ಅವನಿಟ್ಟುಕೊಂಡ ಆತ್ಮಗೌರವದ ಪರಿಕಲ್ಪನೆಯೇ ಅವನನ್ನು ದೊಡ್ಡವನನ್ನಾಗಿ ಮಾಡುತ್ತದೆ. ಬಸವಣ್ಣ ಹರಳಯ್ಯನನ್ನು ಎದ್ದು ಹೋಗಿ ಬರಮಾಡಿ ಕೊಳ್ಳುವದು; ಚೆನ್ನಯ್ಯನ ಪಾದಕ್ಕೆ ನಮೋ ನಮಃ ಎನ್ನುವದು ; ಇಂಥ ಉದಾಹರಣೆಗಳು, ನಮ್ಮ ಸಾಂಸ್ಕೃತಿಕ ಬದುಕಿನಲ್ಲಿ ನಡೆದುಹೋದ ಆತ್ಮಗೌರವದ ಹಲವು ಬಗೆಗಳು. ಈ ರೀತಿಯ ವ್ಯಕ್ತಿಗೌರವ ನಮ್ಮಲ್ಲಿ ಧನ್ಯತೆಯ ಭಾವ ಮೂಡಿಸುತ್ತದೆ.

ಇನ್ನೊಂದು ಸಂದರ್ಭ : ನಿನ್ನೆ ಮೊನ್ನೆ ಹುಡುಗರಾಗಿ, ಗೆಳೆಯರಾಗಿ, ಇವತ್ತು ಚಿಕ್ಕವಯಸ್ಸಿನಲ್ಲಿಯೇ ಮಠಾಧೀಶರಾಗುತ್ತಿದ್ದಾರೆ. ಪಾದ ನಮಸ್ಕಾರ ಇಂಥವರಲ್ಲಿ ಥಟ್ಟನೆ ಒಂದು ಅಮಲು ಸೃಷ್ಟಿಸಿಬಿಡುತ್ತದೆ. ಏಕದಂ ಜನಸಮೂಹವೇ ಬಾಗುವದು ವ್ಯಕ್ತಿಯನ್ನು ಎಲ್ಲಿಗೆ ಒಯ್ಯಬಹುದು ? ಇಂಥದ್ದನ್ನು ಮೀರಿ ನಿಲ್ಲುವ ಆಲೋಚನಾ ಶಕ್ತಿಯೂ ಅವನಲ್ಲಿರುವದಿಲ್ಲ. ಇದರ ಅಪಾಯವನ್ನು ಮನಗಾಣಬೇಕಾದರೆ ನಿನ್ನೆ ಗೆಳೆಯರಾದ ಅವರನ್ನು ಇಂದು ಖುದ್ದಾಗಿಯೇ ನೋಡಬೇಕು.

ಇಬ್ಬರು ಮಠಾಧೀಶರು ಪರಸ್ಪರ ಭೇಟಿಯಾದಾಗ ಯಾರು ಯಾರಿಗೆ ನಮಸ್ಕರಿಸುವದು ? ಇದೊಂದು ರೀತಿಯ ಮುಜುಗರ ಹಾಗೂ ಸಮಸ್ಯೆ. ಅದಕ್ಕಾಗಿ ಪರಸ್ಪರ ಬರಿ ನಮಸ್ಕಾರ ಮಾಡುವದು ಒಳಿತು. ಇದಕ್ಕಾಗಿ ಎಲ್ಲಾ ಮಠಾಧೀಶರು ಪಾದ ನಮಸ್ಕಾರವನ್ನು ಯಾಕೆ ನಿಷೇಧಿಸಬಾರದು ? ಎನ್ನುವ ಪ್ರಶ್ನೆಯನ್ನು ಹಿಂದೆ ಮಠಾಧೀಶ ರೊಬ್ಬರು ಎತ್ತಿದ್ದರು. ಅದೊಂದು ಚಳುವಳಿಯಾಗಿ ಬೆಳೆಯುವದು ಒತ್ತಟ್ಟಿಗಿರಲಿ, ಕನಿಷ್ಠ ಸುದ್ದಿಯೂ ಆಗಲಿಲ್ಲ. ಯಾಕೆ ಆಗಲಿಲ್ಲ ಎನ್ನುವದನ್ನು ಬಿಡಿಸಿ ಹೇಳಬೇಕಿಲ್ಲ.

ಆಧುನಿಕ ತಂತ್ರಜ್ಞಾನದ ಈ ಯುಗದಲ್ಲಿಯೂ, ಜನತೆಯನ್ನು ಹಿಡಿದಿಟ್ಟುಕೊಳ್ಳುವ ಏಕೈಕ ಕಾರಣಕ್ಕಾಗಿ ಇಂಥ ಸಮೂಹಸನ್ನಿಯನ್ನು ವ್ಯವಸ್ಥಿತವಾಗಿ ಬೆಳೆಸಲಾಗುತ್ತಿದೆ. ಜಾತಿ ಹಾಗೂ ವೋಟ್‌ಬ್ಯಾಂಕ್ ರಾಜಕಾರಣ ಇದರ ಹಿಂದೆ ಕೆಲಸ ಮಾಡುತ್ತಿದೆ. ಜಗತ್ತಿಗೆ ಅವರು ಯಾರು ಎಂದು ಗೊತ್ತಿದ್ದರೂ, ರಾಜಕಾರಣಿಗಳು, ಹಿರಿಯ ಅಧಿಕಾರಿಗಳು ಅವರಿಗೆ ಬಾಗುವ ಸಚಿತ್ರ ವರದಿಗಳು ಪತ್ರಿಕೆಗಳ ಮುಖಪುಟದಲ್ಲಿ ಬರುತ್ತಲೇ ಇರುತ್ತವೆ. ಇಲ್ಲಿ ಬಾಗುವವನಿಗೆ ಧನ್ಯತೆಯ ಭಾವ ಇರುವದಿಲ್ಲ. ಆಶೀರ್ವದಿಸುವವರು ಅವಸಾನದ ಅಂಚಿನಲ್ಲಿರುತ್ತಾರೆ. ಇಂಥದ್ದರಿಂದ ಸಮಾಜದ ಕೊಳಕು ಹೆಚ್ಚುತ್ತಲೇಹೋಗುತ್ತದೆ. ಇಂಥ ಸೊಕ್ಕು ಸಂದರ್ಭಗಳೇ ಸಮಾಜದ ಸ್ವಾಸ್ಥ್ಯ ಹದಗೆಡಿಸಬಲ್ಲವು ಎನ್ನುವ ಕನಿಷ್ಠ ಜವಾಬ್ದಾರಿಯೂ ನಮ್ಮಲ್ಲಿಲ್ಲ: ಇದು ಕೇವಲ ವ್ಯಕ್ತಿಗತ ವಿಚಾರ ಅಲ್ಲ. ಇದೊಂದು ಸಾಮಾಜಿಕ ಜವಾಬ್ದಾರಿ.

''ಹೆಂಡಿ ಕಸಾ ಬಳಿಯಾಕ ಹತ್ತಿನಿ. ಹೋಗಿ ಬಾ ತಮ್ಮಾ ಕಾಲ ಸೆಗಣಿ ಆಗ್ಯಾವು'' ಎಂದು ಪಕ್ಕದ ಮನೆಯ ಕಾಕಾ ಎಷ್ಟು ಹೇಳಿದರೂ, ಅವರ ಹತ್ತಿರ ಹೋಗಿ ನಮಸ್ಕರಿಸಿಯೇ, ಬೆಂಗಳೂರಿನ ಬಸ್ಸು ಹತ್ತುವ ಕಾಲೇಜೊಂದರ ಅಧ್ಯಾಪಕ, ಪಕ್ಕದಲ್ಲಿಯೇ ನಾಡಿನ ದೊಡ್ಡ ಮಠ ಇದ್ದರೂ ಅಪ್ಪಿ- ತಪ್ಪಿಯೂ ಇವತ್ತಿಗೂ ಅಲ್ಲಿಗೆ ಭೇಟಿ ಕೊಟ್ಟಿಲ್ಲ. ಇದಕ್ಕೆ ಕಾರಣವೇನು ? ಎನ್ನುವ ಪ್ರಶ್ನೆ ಹಾಕಿಕೊಂಡೇ ನಾವು ಮುಂದೆ ಸಾಗಬೇಕಿದೆ ಅಂದಾಗ ಮಾತ್ರ ಸಾಮಾಜಿಕ ಸ್ವಾಸ್ಥ್ಯ ಸಾಧ್ಯ.

**ಬಸವರಾಜ ಹೂಗಾರ**
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ನಾಲ್ವಡಿ ಕೃಷ್ಣರಾಜ ಒಡೆಯರ್ ಕಲಾ ಮಂದಿರ
ವಿ. ವಿ. ನಗರ, ಮಂಡ್ಯ - ೫೭೧ ೪೦೧

## ನಾನು ಕವನ ಬರೆಯುತ್ತೇನೆ !

ಎಸ್. ಆರ್. ಗುರುನಾಥ್
೧೧ನೇ ಕ್ರಾಸ್
ಐ.ಯು.ಡಿ.ಪಿ. ಬಡಾವಣೆ
ಚಿತ್ರದುರ್ಗ - ೫೭೭ ೫೦೧

ಎದುರು ಮನೆಯ ಜೋಸೆಫ್
ರಿಕ್ಷಾ ಓಡಿಸುತ್ತಾನೆ.
ಪಕ್ಕದ ಗುಡಿಸಲ ವಲ್ಲೀಸಾಬ
ಹಣ್ಣು ಹೊತ್ತು ಮಾರುತ್ತಾನೆ.
ಹಿಂದುಗಡೆಯ ದಾಸಪ್ಪ
ಚಪ್ಪಲಿ ಹೊಲಿಯುತ್ತಾನೆ.
ನಾನು ಕವನ ಬರೆಯುತ್ತೇನೆ !

ದೇಹ ದಣಿಸಿದ ನನ್ನ ಒಕ್ಕಲು
ತಂದು ಮನೆಗೆ ಸುರಿದಂತೆ
ಒಳಗಿನ ತೊತ್ತುಗಳು
ಹೊತ್ತಿಗೆ ಸರಿಯಾಗಿ ಮಾಡಿ ಬಡಿಸಿದರೆ
ಇನ್ನೇನು ಚಿಂತೆ ? ನೆಮ್ಮದಿಯಾಗಿ
ನಾನು ಕವನ ಬರೆಯುತ್ತೇನೆ !



ಅಮ್ಮಾ ಸೊಪ್ಪು ... ತರಕಾರಿ...
ಹಾಗೆಯೇ ಜನ್ನಿಗೆ ಮನೆಯ ಬಾಗಿಲಿಗೆ.
ದುಡ್ಡಿದ್ದರೇನು ಕೊರತೆ ?
ಖುಷಿ ಖುಷಿಯಾಗಿ ಕುಳಿತು
ನಾನು ಕವನ ಬರೆಯುತ್ತೇನೆ !

ಬಟ್ಟೆ ಬರೆ ಒಗೆದು
ಪಾತ್ರೆ ಪಗಡಿ ತೊಳೆದು
ಗುಡಿಸಿ ಸಾರಿಸಿದ ಹೆಣ್ಣಾಳು,
ಮನೆವಾರ್ತೆಯಲಿ ಮುಳುಗಿರುವ ಮಡದಿ
ನಿಟ್ಟುಸಿರು ಬಿಡುವಾಗ
ಉಕ್ಕಿದ ಸ್ಫೂರ್ತಿಯಲಿ
ನಾನು ಕವನ ಬರೆಯುತ್ತೇನೆ !

ಬೇಸಿಗೆಯ ಬೇಗೆಯಲಿ ?
ಶೈತ್ಯಕಾರಕಗಳು ಇದ್ದೇ ಇವೆಯಲ್ಲ!
ಕಾರ್ಗಾಲದ ಚಳಿಯಲ್ಲಿ ?
ಸನ್ಮಾನದ ಶಾಲು ಹೊದ್ದು
ಕಾಫಿಗೀಫಿ ಸೀಪುತ್ತಾ
ನಾಲ್ಕು ಗೋಡೆಗಳ ನಡುವೆ
ನಾನು ಕವನ ಬರೆಯುತ್ತೇನೆ !



# ಮುಪ್ಪು – ಒಂದು ಲಘು ಬರಹ

**ದುಂ**ಚಪ್ಪನಿಗೆ ಈಗ ೮೦ರ ಮುಪ್ಪು. ಆದರೆ ಚಾಪೆ ಹಿಡಿದಿಲ್ಲ. ನೋಟಕ್ಕೆ ಆರೋಗ್ಯವಂತನಾಗಿದ್ದಾನೆ. ಅಂತೂ ನೆರೆತ ಕೂದಲು ಮತ್ತು ಬಿಳಿ ಗಡ್ಡ ಮೀಸೆ (ಶೇವ್ ಮಾಡದ ದಿನಗಳಲ್ಲಿ) ಆತ ಒಬ್ಬ ಅಜ್ಜನಾಗಿದ್ದಾನೆ ಎಂಬ ನಿಜವನ್ನು ಬಯಲು ಮಾಡುತ್ತವೆ. ಅಜ್ಜ ಮಾತ್ರವಲ್ಲ; ಆತನೊಬ್ಬ ಹಿರಿಯ ನಾಗರಿಕ ಎಂಬ ಪಟ್ಟಕ್ಕೆ ಏರಿದವನಾಗಿದ್ದಾನೆ. ಆ ಪಟ್ಟ ಆತನಿಗೆ ಕೆಲವು ವರ್ಷಗಳ ಹಿಂದೆಯೇ ದೊರಕಿದೆ. ಆ ಸ್ಥಾನದಲ್ಲಿರುವುದು ಆತನಿಗೊಂದು ವಿಶೇಷ ಅನುಭವ. ದಾರಿಯಲ್ಲಿ ಭೇಟಿಯಾಗುವ, ಅವನಂತೆ ಕಾಣಿಸಿಕೊಳ್ಳುವ ಹಿರಿಯ ನಾಗರಿಕರು, ಈತನು ತಮ್ಮವರಲ್ಲಿ ಒಬ್ಬನು ಎಂದು ಆದರದಿಂದ ನೋಡುತ್ತಿರುವ ಆ ಸ್ನೇಹಪರ ನೋಟ, ದಾರಿ ಬಿಟ್ಟುಕೊಡುವ ಇತರ ನಾಗರಿಕರ ಸಜ್ಜನಿಕೆ, ಬಸ್ ಹತ್ತಿದಾಗ ಕೂತುಕೊಳ್ಳಲು ಸೀಟಿಗಾಗಿ ಪರದಾಡುತ್ತಿರುವಾಗ ಒಮ್ಮೊಮ್ಮೆ ಒಬ್ಬ ಅಜ್ಜನಿಗಾಗಿ ತನ್ನ ಸೀಟನ್ನು ಬಿಟ್ಟುಕೊಡುವ ಯುವಕನೊಬ್ಬನ ತ್ಯಾಗ, ಅಲ್ಲದೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ವೀಕ್ಷಿಸಲು ಸಭಾಂಗಣಕ್ಕೆ ಹೋದಾಗ, ''ನೀವು ಹಿರಿಯರು, ಮುಂದೆ ಕೂತುಕೊಳ್ಳಿ'' ಎಂದು ವಯೋವೃದ್ಧನಾದ ಅವನನ್ನು ಮುಂದಿನ ಸಾಲಿನ ಸೀಟಿಗೆ ಕರೆದುಕೊಂಡು ಹೋಗುವ ಸ್ವಯಂಸೇವಕರ ವಿನಯಶೀಲತೆ – ಮುಂತಾದವು ಆ ಸವಿ ಅನುಭವಕ್ಕೆ ಸೇರಿವೆ. ಇದು ಮನೆಯ ಹೊರಗಡೆಯ ಅನುಭವವಾದರೆ, ಮನೆಯಲ್ಲಿ ಅಜ್ಜನಿಗೆ ಎಲ್ಲರಿಗೂ ಮುಂಚಿತವಾಗಿ ಮೊಮ್ಮಕ್ಕಳ ಸರತಿಯಲ್ಲಿ ಊಟ; ಬೇಕೆನಿಸಿದಾಗ ನಿದ್ರೆ ಮತ್ತು ಕಣ್ಣು ಕೂರುವುದು. ಆತನ ಬೇಕು ಬೇಡಗಳು ಈ ತರ ದಿನೇ ದಿನೇ ಕಡಿಮೆಯಾಗುತ್ತಿದ್ದುವು. ಇದ್ದುದರಲ್ಲಿಯೇ ತೃಪ್ತಿ. ಇತ್ತೀಚಿಗೆ ಅಧ್ಯಾತ್ಮ ಚಿಂತನೆಗೆ ಒಲವು ತೋರಿಸುತ್ತಿರುವ ದುಂಚಪ್ಪನು, ''ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ ಪದುಮನಾಭನ ಕೃಪೆ...'' ಎಂಬ ದಾಸರ ಹಾಡನ್ನು ತನ್ನ ಮನಸ್ಸಿನಲ್ಲಿ ಗುಣುಗಾಡುತ್ತಿದ್ದನು. ಈ ರೀತಿ ಎಲ್ಲವೂ ಆರಾಮವೆಂದು ತೃಪ್ತಿಹೊಂದಿದ ದುಂಚಪ್ಪನು ಈ ಇಳಿ ವಯಸ್ಸಿನಲ್ಲಿ ತನ್ನ ಜೀವನದ ಗುಣಮಟ್ಟ ಎಷ್ಟರಮಟ್ಟಿಗೆ ಕುಸಿದು ಜಡವಾಗಿದೆ ಎಂಬ ಪ್ರಜ್ಞೆಯನ್ನು ಕಳೆದುಕೊಂಡಂತಿದೆ. ಆದರೂ ಆ ಪ್ರಜ್ಞೆ ಒಮ್ಮೊಮ್ಮೆ ಹಠಾತ್ತಾಗಿ ಚೇತರಿಸಿಕೊಂಡು ಆತನನ್ನು ಹತಾಶನನ್ನಾಗಿಸುವ ಘಟನೆಗಳು ಮತ್ತು ಸನ್ನಿವೇಶಗಳು ಅಪರೂಪವೇನೂ ಅಲ್ಲ!

ತನ್ನ ರಜಾ ದಿನಗಳ ಕೆಲವಂಶವನ್ನು ಅಜ್ಜಿಯ ಮನೆಯಲ್ಲಿ ಕಳೆದು ಬೆಂಗಳೂರಿನಲ್ಲಿರುವ ತನ್ನ ತಾಯಿ ಮನೆಗೆ ಹಿಂತಿರುಗಿಹೋಗುತ್ತಿರುವ ೧೨ ವರ್ಷದ ಕಿಶೋರಿ ಮೊಮ್ಮಗಳ ಸಂಗಡಿಗನಾಗಿ ಮತ್ತು ರಕ್ಷಕನಾಗಿ ಹೊರಟ ದುಂಚಪ್ಪನು, ಅವಳೊಡನೆ ಬಸ್ಸಿಗಾಗಿ ಹತ್ತಿರದ ಹೆದ್ದಾರಿಯ 'ರಿಕ್ವೆಸ್ಟ್' ಬಸ್ ನಿಲ್ದಾಣದಲ್ಲಿ ಬಸ್ಸಿಗಾಗಿ ಕಾದು ನಿಂತಿದ್ದ. ಇಂತಹ 'ರಿಕ್ವೆಸ್ಟ್' ನಿಲ್ದಾಣಗಳಲ್ಲಿ ಬಸ್ಸನ್ನು ಏರುವ ಪರಿ ಏನೆಂದು ಬೇರೆ ಹೇಳಬೇಕಾಗಿಲ್ಲ! ಬಸ್ಸು ಎಷ್ಟೇ ತಡವಾಗಿಬಂದರೂ, ಪ್ರಯಾಣಿಕರು ತರಾತುರಿಯಿಂದ ಹತ್ತಬೇಕು. ಇಲ್ಲದಿದ್ದರೆ ಕಂಡಕ್ಟರನು ರೇಗುತ್ತಾನೆ. ಹಾದುಹೋಗುತ್ತಿರುವ ಹಲವಾರು ಬಸ್ಸುಗಳಲ್ಲಿ, ತಾನು ಮುಂಚಿತವಾಗಿ ಖರೀದಿಸಿ ಸೀಟು ಕಾದಿರಿಸಿದ್ದ ಬಸ್ಸನ್ನು ದೂರದಲ್ಲಿಯೇ ಗುರುತಿಸಿ ಅದು ಸಮೀಪಿಸಿದ ಕೂಡಲೇ ಹತ್ತಬೇಕು. ಬಸ್ಸಿನ ಮೇಲೆ ಮುದ್ರಿಸಿದ್ದ ಅದರ ಅಂಕಿತನಾಮ ಅಥವಾ ಕಂಡಕ್ಟರನ ಕೂಗಿನಲ್ಲಿರುವ ಸಂಕೇತವನ್ನು ಗುರುತಿಸಿ, ಕ್ಷಣಗಳಲ್ಲಿ ಸ್ಪಂದಿಸಲು ಪ್ರಯಾಣಿಕನು ವಿಫಲನಾದರೆ ಆ ಬಸ್ ಆತನನ್ನು ಬಿಟ್ಟುಹೋಗುವಂತಹ ಪ್ರಮಾದಕ್ಕೆ ಒಳಗಾಗಬಹುದು. ಇಳಿವಯಸ್ಸಿನ ಆ ದಿನಗಳಲ್ಲಿ ಈ ತರದ ಸ್ಪಂದನೆ ದುಂಚಪ್ಪನಿಗೆ ಅಸಾಧ್ಯವಾಗಿತ್ತು. ಆದರೂ ಬರುತ್ತಿರುವ ಬಸ್ಸೊಂದು ತಮ್ಮದೇ ಆಗಿರಲೂಬಹುದೆಂದು ಒಂದು ಕೈಯಲ್ಲಿ 'ಬ್ಯಾಗ್' ಮತ್ತೊಂದು ಕೈಯಲ್ಲಿ ಮೊಮ್ಮಗಳ ಕೈ ಹಿಡಿದುಕೊಂಡು ಬಸ್ ಹತ್ತಲು ತಯಾರಿ ಮಾಡುತ್ತಿರುವಾಗ, ಮೊಮ್ಮಗಳು ಆತನನ್ನು ಹಲವು ಬಾರಿ ತಡೆದು ನಿಲ್ಲಿಸಿ, ''ಇದು ನಮ್ಮ ಬಸ್ ಅಲ್ಲ ಅಜ್ಜ'' ಎನ್ನುತ್ತಿದ್ದಳು. ನಂತರ ಒಮ್ಮೆ ಬಂದ ಒಂದು ಬಸ್ಸು ಸರಿಯಾದದ್ದೇ ಎಂದು ಆಕೆ ದೂರದಲ್ಲಿಯೇ ಗುರುತಿಸಿ, ಅಷ್ಟರಲ್ಲಿ ಬೇಸತ್ತುಹೋಗಿದ್ದ ಆತನನ್ನು ಯಾವ ತೊಂದರೆಗೂ ಒಳಗಾಗದ ರೀತಿಯಲ್ಲಿ ಬಸ್ ಏರಿಸಿದಳು. ತಾನೂ ಹಿಂಬಾಲಿಸಿದಳು, ಸೀಟು ಕಂಡು ಹುಡುಕಿ ಆತನನ್ನು ಕೂರಿಸಿದಳು. ಎಲ್ಲವೂ ನೆಟ್ಟಗಾಯಿತು ಎಂದು ದುಂಚಪ್ಪನು ನಿಟ್ಟುಸಿರುಬಿಟ್ಟನು. ರಾತ್ರಿ ಹೊತ್ತಾದರೂ ಆತನ ಕಣ್ಣಿಗೆ ನಿದ್ರೆ ಹತ್ತುತ್ತಿರಲಿಲ್ಲ. ಆದರೆ ಮೊಮ್ಮಗಳು ಆತನಿಗೊರಗಿ ಹಾಯಾಗಿ ನಿದ್ರಿಸಿದಳು. ಆಗ ನೋಟಕ್ಕೆ ಹೊಸ ಚಿಗುರು ಹಳೆ ಬೇರನ್ನು ಆಶ್ರಯಿಸಿದಂತಿತ್ತು. ನಿಜಸ್ಥಿತಿ ತದ್ವಿರುದ್ಧವಾಗಿತ್ತು ಎಂಬ ಪ್ರಜ್ಞೆ ಆತನಿಗೆ ಹೊಳೆಯದೇ ಇರಲಿಲ್ಲ. ಹಳೇ ಬೇರು ಹೊಸ ಚಿಗುರನ್ನು ಅವಲಂಬಿಸಿತ್ತು. ಆ ಸಂದರ್ಭದಲ್ಲಿ ಮೊಮ್ಮಗಳೇ ಆತನ ಕಣ್ಣು ಮತ್ತು ಕಿವಿಯಾಗಿ ಬಿಟ್ಟಿದ್ದಳು. ಈ ತರಹದ ಪರಾವಲಂಬನೆ ಹೊಸ ಚಿಗುರಿಗೆ ಹೆಚ್ಚು ದಿನಗಳವರೆಗೆ ಒಂದು ಹೊರೆಯಾಗದಿರಲಿ ಎಂಬುದು ಅವನ ಹಂಬಲವಾಗಿತ್ತು.

ದುಂಚಪ್ಪನು ತಾನು ಈ ಇಳಿ ವಯಸ್ಸಿನಲ್ಲಿ ಕಳೆದುಕೊಂಡಿದ್ದು ಬರೇ ಶ್ರವಣ ಶಕ್ತಿ ಮತ್ತು ದೃಷ್ಟಿಯ ಗುಣಮಟ್ಟವನ್ನು ಮಾತ್ರವಲ್ಲ; ಅವನ ಇತರ ಇಂದ್ರಿಯಗಳ ಕಾರ್ಯಕ್ಷಮತೆಯೂ ಕುಸಿದುಬಿದ್ದಿತ್ತು ಎಂಬ ಮನವರಿಕೆ ಅವನಿಗಾಗುತ್ತಿತ್ತು. ತಾನು ಎಳೆಯವನಾಗಿದ್ದ ದಿನಗಳಲ್ಲಿ ಅಷ್ಟಮಿ ಚೌತಿ ಹಬ್ಬ ಹರಿದಿನಗಳ ವಿಶೇಷ ಊಟದೊಂದಿಗೆ ಬಡಿಸಲಾಗುತ್ತಿದ್ದ ಹುರಿದ ಹಪ್ಪಳಕ್ಕಿದ್ದ ಪರಿಮಳ – ಮೂಗಿಗೆ ಬಡಿಯುವ ಆ 'ಘಾಟು' ಮತ್ತು ನಾಲಿಗೆಯನ್ನು ಚುರುಕುಗೊಳಿಸುವ ಆ ಹರಿತವಾದ ಸ್ವಾದ ಈಗಿನ ಹಪ್ಪಳಕ್ಕೆಲ್ಲಿದೆ ? ಎಂದು ತನ್ನ ಹಳೆಯ ದಿನಗಳ ಸವಿನೆನಪನ್ನು ಊಟದ ಸಮಯದಲ್ಲಿ ಪ್ರಸ್ತಾಪಿಸುತ್ತಿದ್ದನು. ''ಅಂದು ಹಬ್ಬಗಳ ಸಂದರ್ಭದಲ್ಲಿ ಮನೆಯಲ್ಲಿಯೇ ಹಪ್ಪಳ ತಟ್ಟಿ ಒಣಗಿಸುತ್ತಿದ್ದರೋ ಏನೋ ? ಈಗ ನಾವು ಮಾರ್ಕೆಟಿನಲ್ಲಿಯೇ ಮಾರಾಟಕ್ಕಿಟ್ಟಿದ್ದ ಹಪ್ಪಳ ಖರೀದಿಸಿ ತರುತ್ತಿದ್ದೇವಲ್ಲವೆ ? ನಾನೂ ಸಹ ನಿಮಗಾಗಿ ಮನೆಯಲ್ಲಿಯೇ ಒಂದು ಬಾರಿ ಹಪ್ಪಳ ತಯಾರಿಸಿ ಬಡಿಸುತ್ತೇನೆ, ನೋಡುವಾ !''

**ಟಿ. ಸಿ. ಶ್ರೀಯಾನ್**

ಎಂದುಕೊಂಡು ಉತ್ಸಾಹಿಯಾದ ಕಿರಿಯ ಮಗಳು ಪ್ರಯಾಸಪಟ್ಟು ತಾನೇ ಹಪ್ಪಳ ಮಾಡಿ ಅವನ್ನು ಹುರಿದು ಊಟದ ಹೊತ್ತಿಗೆ ಎಲ್ಲರಿಗೂ ಬಡಿಸಿದಳು. ''ಹಪ್ಪಳ ಚೆನ್ನಾಗಿದೆ'' ಎಂದು ತಿಂದವರೆಲ್ಲ ಅದರ ಕರ್ತೃವನ್ನು ಹೊಗಳಿದರೇನೋ ನಿಜ, ಆದರೆ ಆ ಹಪ್ಪಳಕ್ಕೂ ಮಾರ್ಕೆಟ್ ಹಪ್ಪಳಕ್ಕೂ ಹೆಚ್ಚಿನ ವ್ಯತ್ಯಾಸವಿರಲಿಲ್ಲ ಎಂಬ ಸತ್ಯವನ್ನು ಅವರಿಂದ ಬಚ್ಚಿಡಲಿಕ್ಕೆ ಸಾಧ್ಯವಾಗಿರಲಿಲ್ಲ. ನೈಸರ್ಗಿಕವಾಗಿ ದೊರೆಯುತ್ತಿರುವ ದವಸಧಾನ್ಯಗಳ ಹಿಟ್ಟಿನಿಂದ ಮಾಡಿದ ಹಪ್ಪಳ ಅಂದಿಗೂ ಇಂದಿಗೂ ಒಂದೇ! ಆದರೆ ವ್ಯತ್ಯಾಸವೆಲ್ಲಿ ಅಡಗಿದೆ? ವ್ಯತ್ಯಾಸ ೮೦ ವರ್ಷಗಳ ಹಿಂದೆ ದುಂಚಪ್ಪನ ನಾಲಿಗೆಗಿದ್ದ ಸಾಮರ್ಥ್ಯ ಮತ್ತು ಇಂದು ಕೆಟ್ಟುಹೋಗಿದ್ದ ಅದರ ಗುಣಮಟ್ಟದ ನಡುವೆ ಅಡಗಿತ್ತು. ಇಂದು ನಾಲಿಗೆಯ ರುಚಿ ಕೆಟ್ಟುಹೋಗಿದೆ ಮತ್ತು ಮೂಗು ತಿಂಡಿತೀರ್ಥಗಳ ಕಂಪನ್ನು ಆಘ್ರಾಣಿಸುವುದರಲ್ಲಿ ವೈಫಲ್ಯವನ್ನೂ ಹೊಂದಿದೆ ಎಂಬುದು ಸತ್ಯವಾಗಿತ್ತು. ಹಸಿವು ಬಾಯಾರಿಕೆಗಳಲ್ಲಿ ಗಣನೀಯವಾದ ಕುಸಿತವಿಲ್ಲದಿದ್ದರೂ ದುಂಚಪ್ಪನ ನಾಲಿಗೆಯು ತನ್ನ ರುಚಿಯ ಹರಿತವನ್ನು ಕಳೆದುಕೊಂಡಿದೆ ಎಂಬುದು ವಸ್ತುಸ್ಥಿತಿಯಾಗಿತ್ತು.




ಸಾಯಂಕಾಲ ಗಾಳಿಗೆ ಮೈಯೊಡ್ಡಿ ಹೊರ ಅಂಗಳದಲ್ಲಿ ಆಸೀನನಾಗಿದ್ದಾಗ ತನ್ನ ಸುಕ್ಕುಗಟ್ಟಿದ ಮೈ ಚರ್ಮದ ಮೇಲೆ ಹಾರಿಬಂದು ಎರಗಿದ ನುಸಿಯೊಂದು ತನ್ನ ನೆತ್ತರನ್ನು ಹೀರುತ್ತಿದೆ ಎಂಬ ಅರಿವು ಅವನಿಗಾಗುವುದು ಆ ಕೃತ್ಯವನ್ನು ಕಂಡ ಯಾರಾದರೊಬ್ಬರು ತನ್ನ ಅಂಗೈಯಿಂದ ಅದಕ್ಕೊಂದು ಚಟಿಲೆಂದು ಏಟು ಬಾರಿಸಿದ ನಂತರವೇ! ಅವನ ಸ್ಪರ್ಶೇಂದ್ರಿಯದ ಕುಸಿತವೇ ಇದಕ್ಕೆ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ.

ಅಂದೊಮ್ಮೆ ಹೆಂಡತಿ ಚಂದ್ರಾವತಿಯು ಮನೆಯೊಳಗಿನಿಂದ ಯಾತಕ್ಕೆ ತನ್ನನ್ನು ಕರೆಯುತ್ತಿದ್ದಳು ಎಂದು ದುಂಚಪ್ಪನಿಗೆ ಸ್ಪಷ್ಟವಾಗುತ್ತಿರಲಿಲ್ಲ. ಅವನ ಪೇಚಾಟವನ್ನು ಗಮನಿಸಿದ ಮೊಮ್ಮಗ, ''ಅಜ್ಜ, ನಿಮ್ಮನ್ನು ಅಜ್ಜಿ ಊಟಕ್ಕೆ ಕರೆಯುತ್ತಿದ್ದಾರೆ'' ಎಂದು ಅಜ್ಜನ ಹತ್ತಿರ ಬಂದು ಅವನ ಕಿವಿಗೆ ನೇರವಾಗಿ ಮತ್ತು ಗಟ್ಟಿಯಾಗಿ ಉಸುರಿದಾಗ ದುಂಚಪ್ಪನು ದಡಬಡಿಸಿದನು. ಮೊಮ್ಮಗ ನಕ್ಕನು. ಇವರಿಬ್ಬರ ಆಟದ ನೋಟವನ್ನು ಗಮನಿಸಿದ ಚಂದ್ರಾವತಿಯು ನಕ್ಕಳು. ಘಟನೆಯನ್ನು ಸ್ಮರಿಸಿ ಆಕೆ ಇನ್ನೊಮ್ಮೆ ಹೊಟ್ಟೆ ಹುಣ್ಣಾಗುವಂತೆ ನಗಾಡಿದಳು. ದುಂಚಪ್ಪನ ಕಿವುಡುತನ (ಕಿವಿದೂರ) ಮತ್ತು ಮರೆವು ಹಲವು ಹಾಸ್ಯಾಸ್ಪದ ಘಟನೆಗಳಿಗೆ ಮತ್ತು ವಿಡಂಬನೆಗಳಿಗೆ ಕಾರಣವಾಗಿದ್ದವು. ಚಂದ್ರಾವತಿಯ ಕೈಯಲ್ಲಿ ಅವುಗಳ ಅದೊಂದು ಭಂಡಾರವೇ ಇತ್ತು ಎನ್ನಬಹುದು. ಆ ಭಂಡಾರದಿಂದ ಅವಳು ಆಗಾಗ್ಗೆ ಒಂದೊಂದನ್ನೂ ಬಿಚ್ಚಿ ಮನೆಮಂದಿಯ ಮುಂದೆ ಇಡುತ್ತಿದ್ದಳು. ಈ ತರಹ ದುಂಚಪ್ಪ ಅವರ ನಗೆಪಾಟಲಿಗೆ ಒಳಗಾಗುತ್ತಿದ್ದನು. ಆದರೆ ಅವನು ಅದರಿಂದ ಕುಪಿತನಾಗುತ್ತಿರಲಿಲ್ಲ. ಬದಲಾಗಿ ಅವರೊಡನೆ ತಾನೂ ಸೇರಿ ಮುಗುಳ್ನಗುತ್ತಿದ್ದನು, ಚಂದ್ರಾವತಿಯ ಹಾಸ್ಯಪ್ರಜ್ಞೆಯನ್ನು ಮೆಚ್ಚುತ್ತಿದ್ದನು.

ಟಿ.ವಿ. ಪರದೆಯ ಮೇಲಿನ ಚಿತ್ರವನ್ನು ಹತ್ತಿರದಲ್ಲಿದ್ದುಕೊಂಡು ನೋಡುವುದು ದೃಷ್ಟಿಮಾಂದ್ಯಕ್ಕೆ ಕಾರಣವಾಗುತ್ತದೆ; ಆದುದರಿಂದ ಅದನ್ನು ಸಾಕಷ್ಟು ದೂರದಿಂದ ನೋಡಬೇಕೆಂಬುದು ವೈದ್ಯರು ವಿಧಿಸಿದ ನಿಯಮ. ಆದರೆ ಈ ನಿಯಮದಿಂದ ದುಂಚಪ್ಪನಿಗೆ ವಿನಾಯಿತಿ ಇದೆ. ಯಾಕೆಂದರೆ, ಅವನು ಈಗಾಗಲೇ ದೃಷ್ಟಿಮಾಂದ್ಯ ಮಾತ್ರವಲ್ಲದೆ ಶ್ರವಣ ಮಾಂದ್ಯಕ್ಕೂ ಒಳಗಾಗಿದ್ದವನಾಗಿದ್ದಾನೆ. ಆದುದರಿಂದ ಅವನು ಎಲ್ಲರಿಗಿಂತಲೂ ಮುಂಚೆ ಟಿ.ವಿ. ಮುಂದೆ ಕೂತು ನೋಡುತ್ತಾನೆ. ಅಲ್ಲಿ ಕ್ಷಣಿಕವಾಗಿ ಮಿಂಚಿ ಮಾಯವಾಗುತ್ತಿರುವ ಜಾಹೀರಾತುಗಳು ಏನನ್ನು ಜಾಹೀರುಪಡಿಸಿದವು ಎಂಬ ಅರಿವು ಅವನಿಗೆ ಆಗುತ್ತಿರಲಿಲ್ಲ. ಆ ಸಂವೇದನಾ ಶಕ್ತಿಯನ್ನು ಅವನು ಕಳೆದುಕೊಂಡಿದ್ದಾನೆ. ಅದಲ್ಲದೆ ಮಿಕ್ಕ ವೀಕ್ಷಕರು ಯಾತಕ್ಕಾಗಿ ಪರದೆಯನ್ನು ನೋಡಿ ನಗಾಡಿದರು, ಆ ರೀತಿ ಪ್ರತಿಕ್ರಿಯಿಸಿದರು ಎಂದು ಅವನಿಗೆ ತಿಳಿಯುತ್ತಿರಲಿಲ್ಲ. ಅವನ ವೀಕ್ಷಣೆ ಬರೇ ಯಾಂತ್ರಿಕವಾಗಿತ್ತು ಮತ್ತು ಅದರಿಂದ ಪಡೆಯುವ ಲಾಭ ಆಂಶಿಕವಾಗಿತ್ತು. ಟಿ.ವಿ. ನೋಡುತ್ತಿರುವಾಗ ಮಧ್ಯೆ ಮಧ್ಯೆ ಕಣ್ಣು ಕೂರುವುದುಂಟು.

ಅದನ್ನು ಒಮ್ಮೆ ಗಮನಿಸಿದ ಮೊಮ್ಮಗ, ''ಅಜ್ಜ ನೀವು ಟಿ.ವಿ. ನೋಡುವುದಾ ಅಥವಾ ನಿದ್ದೆ ಮಾಡುವುದಾ'' ಎಂದು ಗಹಗಹಿಸಿ ನಕ್ಕು ಮೈದಡವಿದಾಗ ದುಂಚಪ್ಪನು ಪೂರ್ಣ ಎಚ್ಚರಹೊಂದಿ ಎದ್ದು ಒಳಕೋಣೆಗೆ ಹೋಗಿ ಹಾಸಿಗೆಯ ಮೇಲೆ ಪವಡಿಸುತ್ತಿದ್ದನು.

ದುಂಚಪ್ಪನ ಸಹಪಾಠಿಗಳಾಗಿ ಆ ವಿದ್ಯಾಲಯದಿಂದ ಅಂದು ಹೊರಬಂದಿದ್ದ ೩೫ ಮಂದಿಗಳಲ್ಲಿ ಕೆಲವರು ಉತ್ತಮ ವೈದ್ಯಕೀಯ ಸೇವಾಸೌಲಭ್ಯವಿದ್ದರೂ, ತಮ್ಮ ೬೦ರ ಮತ್ತು ೭೦ರ ವಯಸ್ಸಿನ ಮಧ್ಯದಲ್ಲಿಯೇ ಮುದುಕರಾಗಿ ತೀರಿದ್ದರು. ಕೆಲವರು ೮೦ರ ತನಕ ಬದುಕಿದ್ದರು. ಮಿಕ್ಕುಳಿದ ೩ ಯಾ ೪ ಮಂದಿ ಇನ್ನೂ ಬದುಕಿದ್ದಾರೆ. ಅವರಲ್ಲಿ ಒಬ್ಬಿಬ್ಬರು ಶತಾಯುಷಿಗಳಾಗುವ ತನಕವೂ ಬದುಕಬಹುದು. ಆದರೆ ''ನಾವೆಲ್ಲ ಈ ತರ ಬೇರೆ ಬೇರೆ ಯಾಕೆ'' ಎಂಬುದು ದುಂಚಪ್ಪನ ಎಣಿಕೆಗೆ ಬಾರದು.

'ಹಿರಿಯ ನಾಗರಿಕರಿಗೆ ಸರಕಾರವು ಕೊಡುತ್ತಿರುವ ಸೇವಾಸೌಲಭ್ಯ ಮತ್ತು ರಿಯಾಯಿತಿಗಳು ದೇಶದ ಅರ್ಥ ವ್ಯವಸ್ಥೆಗೆ ತೊಡಕಾಗಿವೆ, ಅವರು ಸಮಾಜಕ್ಕೆ ಹೊರೆಯಾಗಿದ್ದಾರೆ. ಆದುದರಿಂದ ೬೦ ಮೀರಿದವರ ಸಂಖ್ಯೆಯನ್ನು ತಮ್ಮ ದೇಶದಲ್ಲಿ ಹೇಗೆ ಕಡಿಮೆ ಮಾಡಬಹುದು ಎಂಬುದಾಗಿ ಪರದೇಶವೊಂದರಲ್ಲಿ ಚಿಂತನೆ ನಡೆಯಿಸಿದ ಅಲ್ಲಿಯ ಸಮಾಜಶಾಸ್ತ್ರಜ್ಞರು ಮತ್ತು ಅರ್ಥಶಾಸ್ತ್ರಜ್ಞರು ಸಂಬಂಧಿತ ವಿಜ್ಞಾನಿಗಳೊಂದಿಗೆ ಸಮಾಲೋಚನೆ ಮಾಡುತ್ತಿದ್ದಾರೆ' ಎಂಬ ಪತ್ರಿಕಾ ವರದಿಯನ್ನು ಓದಿದ ದುಂಚಪ್ಪನು, ಹಿರಿಯ ನಾಗರಿಕರ ಸಂಖ್ಯೆಯನ್ನು ಕಡಿಮೆ ಮಾಡುವ ಅವರ ವಿಧಾನವಾದರೂ ಏನಿರಬಹುದೆಂಬ ಕುತೂಹಲ ಹೊಂದಿದ್ದನು.

ಅಜ್ಜ ೮೦ ವರ್ಷ ಬದುಕಿದ್ದಾನೆ ಎಂದು ಮನೆಮಂದಿ ದುಂಚಪ್ಪನನ್ನು ಆಗಂತುಕರ ಮುಂದೆ ಶ್ಲಾಘಿಸುತ್ತಾರೆ. ಅವನು ಆಸಕ್ತಿ ತೋರಿಸದಿದ್ದರೂ, ಆತನ ಹುಟ್ಟುಹಬ್ಬವನ್ನು ಆಚರಿಸಿ ಅವನನ್ನು ಮುಜುಗರಕ್ಕೆ ಒಳಪಡಿಸುತ್ತಾರೆ. ತಾನು ಎಷ್ಟು ವರ್ಷ ಬದುಕಿದ್ದೇನೆ ಎಂಬುದಕ್ಕಿಂತ ಅಷ್ಟು ವರ್ಷಗಳ ಕಾಲದಲ್ಲಿ ಏನನ್ನು ಸಾಧಿಸಿದ್ದೇನೆ ಮತ್ತು ತನ್ನ ಬವಣೆಗಳನ್ನು ಕಟ್ಟಿಕೊಂಡು, ಇನ್ನೆಷ್ಟು ದಿನ ಬದುಕಿ ಏನನ್ನು ಸಾಧಿಸಬಲ್ಲೆ ಎಂಬುದಾಗಿ ಅವನು ಆಗಾಗ್ಗೆ ಆತ್ಮಾವಲೋಕನಕ್ಕೆ ತೊಡಗುತ್ತಾನೆ. ತನ್ನ ವೈಯಕ್ತಿಕ ಸೇವೆಗಾಗಿ ಪರರನ್ನು ಅವಲಂಬಿಸುವುದು ಆತನಿಗೆ ಹೇಯವೆನಿಸುತ್ತಿದೆ. ತನ್ನ ಒಳ ಉಡುಪನ್ನು ಒಗೆಯುವುದೂ ಈ ವೈಯಕ್ತಿಕ ಸೇವೆಯಲ್ಲಿ ಒಂದಾಗಿದೆ. ತಾನು ಬದುಕಿರುವ ತನಕ ಆ ತರದ ಸೇವೆಯನ್ನು ತಾನೇ ಮಾಡಿಕೊಳ್ಳುತ್ತಿರಬೇಕೆಂಬುದು ಆತನ ಉದಾತ್ತ ತತ್ವವಾಗಿದೆ. ಅದು ಅಸಾಧ್ಯವಾದ ಕಾಲಕ್ಕೆ ಇಹಲೋಕದಿಂದ ನಿರ್ಗಮಿಸಲು ಸಕಾಲದಲ್ಲಿ ಕಾಲನ ಕರೆಯ ಕೃಪೆ ಇರಬೇಕು. 'ನನ್ನಿಂದ ಈಗ ಏನೂ ಸಾಧ್ಯವಾಗುತ್ತಿಲ್ಲ, ನಾನೀಗ ನಿಜಕ್ಕೂ ಬರಡು ಕೊರಡಾಗಿದ್ದೇನೆ, ಪರಾವಲಂಬಿಯಾಗಿದ್ದೇನೆ' ಎಂಬ ಜಿಗುಪ್ಸೆ ಅವನಲ್ಲಿ. ಆತನು ಒಮ್ಮೆ ಕೊಂಚ ಅಸ್ವಸ್ಥಗೊಂಡಿದ್ದು, ಅರೆ ನಿದ್ರೆಯಲ್ಲಿದ್ದವನು ತಾನು ವೈದ್ಯಕೀಯ ವಿದ್ಯಾರ್ಥಿಗಳ ಅಧ್ಯಯನಕ್ಕಾಗಿ ಬಳಸುತ್ತಿರುವ ಪಾರ್ಥಿವ ಶರೀರವಾಗಿದ್ದೇನೆ ಎಂದು ಕನವರಿಸಿ ಭೀತಿಗೊಂಡು ಬೆವತು ಎಚ್ಚೆತ್ತ ದುಂಚಪ್ಪ.

ದುಂಚಪ್ಪನ ಈ ಬವಣೆಗಳು ಸಾಮಾನ್ಯ, ಕ್ಷುಲ್ಲಕ ಮತ್ತು ಹಾಸ್ಯಾಸ್ಪದ ಎಂದು ಓದುಗರಿಗೆ ಕಾಣಬಹುದು. ಹೋಗಲಿ ಬಿಡಿ. ಆದರೆ ಆತನನ್ನು ಕಾಡುತ್ತಿರುವ, ಇತರರ ಎದುರು ಉಸುರಿಸಲಾಗದ ಹಾಗೂ ಅಕ್ಷರ ಮಾಧ್ಯಮದಲ್ಲಿ ಮುದ್ರಿಸಲಾಗದ, ಶಮನಕ್ಕಾಗಿ ವೈದ್ಯರು ತೇಪೆ ಹಾಕುತ್ತಿರುವ ವೃದ್ಧಾಪ್ಯದ ಬವಣೆಗಳಂತೂ ಬೇರೆಯೇ ಆಗಿವೆ!

ನೋಟಕ್ಕೆ ಆರೋಗ್ಯವಂತನಾಗಿದ್ದ ದುಂಚಪ್ಪನ ಬವಣೆಗಳ ಒಳಗುಟ್ಟನ್ನು ಶಿವನು ಮಾತ್ರ ಬಲ್ಲವನಾಗಿದ್ದನು.

ಟಿ. ಪಿ. ಶ್ರೀಯಾನ್
ಮಾರಿಗುಡಿ ರಸ್ತೆ, ಸುರತ್ಕಲ್ - ೫೭೫ ೦೧೪



ಆಧುನಿಕ ಕನ್ನಡ ಸಾಹಿತ್ಯಕ್ಕೆ ಮೌಲಿಕ ಕೊಡುಗೆಯನ್ನಿತ್ತ ಕುವೆಂಪುರವರ ಸೃಜನಶೀಲ ಪ್ರತಿಭೆ ಅಪರೂಪದ್ದಾಗಿದೆ. ಅದನ್ನು ಅವರು ಕ್ರಿಯಾಶೀಲವಾಗಿ ಬಳಸಿಕೊಂಡ ಬಗೆಯಂತೂ ಅಪೂರ್ವವಾಗಿದೆ. ಈ ಕಾರಣಕ್ಕಾಗಿ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅವರು ಮೇರುಸದೃಶ ವ್ಯಕ್ತಿತ್ವವನ್ನು ಹೊಂದಿದವರಾಗಿದ್ದಾರೆ. ಅವರ ಪ್ರಖರ ವೈಚಾರಿಕತೆ ಮತ್ತು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಹರಿಬಿಟ್ಟ ಚಿಂತನ ಕಿರಣಗಳು ಎಲ್ಲ ಕೃತಿಗಳಲ್ಲಿ ಎದ್ದುಕಾಣುತ್ತಿವೆ. ಸಮಕಾಲೀನ ಸಮಾಜದ ಬಗೆಗೆ ಸದಾ ಜಾಗೃತರಾಗಿದ್ದ ಕುವೆಂಪು ಪ್ರಜ್ಞಾಪೂರ್ವಕವಾಗಿಯೇ ಕ್ರಿಯಾರಂಗಕ್ಕೆ ಇಳಿಯುತ್ತಿದ್ದರೆಂಬುದಕ್ಕೆ ಅವರ ಕೃತಿಗಳೇ ನಿದರ್ಶನಗಳಾಗಿವೆ. ಎಲ್ಲ ಕಾಲದಲ್ಲೂ ಬೆಲೆಯುಳ್ಳದ್ದಾಗಿ ಕಾಣುವ ಬಂಗಾರದ ಒಡವೆಗಳನ್ನು ಬಿಸಾಕಲು ಬರುವುದಿಲ್ಲ; ಆಧುನಿಕ ಅಭಿರುಚಿಗೆ ತಕ್ಕಂತೆ ಅವುಗಳನ್ನು ಮಾರ್ಪಡಿಸಿಕೊಳ್ಳುವುದು ಕಾಲದ ಅನಿವಾರ್ಯತೆ ಎಂಬುದನ್ನು ಕುವೆಂಪು ಅರಿತಿದ್ದರು. ಈ ಕಾರಣಕ್ಕಾಗಿಯೇ ಅವರು ಪರಂಪರೆಯನ್ನು ಪ್ರತಿಬಿಂಬಿಸುವ, ಅಲ್ಲಿ ಒಪ್ಪಿಗೆಯಾಗದಿರುವ ಸಂಗತಿಗಳನ್ನು ಪರಿಷ್ಕರಿಸುವ, ಪ್ರಬಲ ಪ್ರತಿರೋಧವನ್ನು ಒಡ್ಡುವ ಸಂದರ್ಭ, ಸನ್ನಿವೇಶಗಳನ್ನು ತಮ್ಮ ಕೃತಿಗಳಲ್ಲಿ ಸೃಷ್ಟಿಸಿಕೊಂಡಿರುವುದನ್ನು ಕಾಣಬಹುದು. ಪ್ರಸ್ತುತ ಲೇಖನದಲ್ಲಿ ಅವರ ನಾಟಕಗಳಲ್ಲಿ ಕಂಡುಬರುವ ಪರಂಪರೆ ಮತ್ತು ಪ್ರತಿರೋಧಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

# ಕುವೆಂಪು ನಾಟಕಗಳಲ್ಲಿ
# **ಪರಂಪರೆ ಮತ್ತು ಪ್ರತಿರೋಧ**

ಆಧುನಿಕ ಕನ್ನಡ ಸಾಹಿತ್ಯಕ್ಕೆ ಮೌಲಿಕ ಕೊಡುಗೆಯನ್ನಿತ್ತ ಕುವೆಂಪುರವರ ಸೃಜನಶೀಲ ಪ್ರತಿಭೆ ಅಪರೂಪದ್ದಾಗಿದೆ. ಅದನ್ನು ಅವರು ಕ್ರಿಯಾಶೀಲವಾಗಿ ಬಳಸಿಕೊಂಡ ಬಗೆಯಂತೂ ಅಪೂರ್ವವಾಗಿದೆ. ಈ ಕಾರಣಕ್ಕಾಗಿ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅವರು ಮೇರುಸದೃಶ ವ್ಯಕ್ತಿತ್ವವನ್ನು ಹೊಂದಿದವರಾಗಿದ್ದಾರೆ. ಅವರ ಪ್ರಖರ ವೈಚಾರಿಕತೆ ಮತ್ತು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಹರಿಬಿಟ್ಟ ಚಿಂತನ ಕಿರಣಗಳು ಎಲ್ಲ ಕೃತಿಗಳಲ್ಲಿ ಎದ್ದುಕಾಣುತ್ತಿವೆ. ಸಮಕಾಲೀನ ಸಮಾಜದ ಬಗೆಗೆ ಸದಾ ಜಾಗೃತರಾಗಿದ್ದ ಕುವೆಂಪು ಪ್ರಜ್ಞಾಪೂರ್ವಕವಾಗಿಯೇ ಕ್ರಿಯಾರಂಗಕ್ಕೆ ಇಳಿಯುತ್ತಿದ್ದರೆಂಬುದಕ್ಕೆ ಅವರ ಕೃತಿಗಳೇ ನಿದರ್ಶನಗಳಾಗಿವೆ. ಎಲ್ಲ ಕಾಲದಲ್ಲೂ ಬೆಲೆಯುಳ್ಳದ್ದಾಗಿ ಕಾಣುವ ಬಂಗಾರದ ಒಡವೆಗಳನ್ನು ಬಿಸಾಕಲು ಬರುವುದಿಲ್ಲ; ಆಧುನಿಕ ಅಭಿರುಚಿಗೆ ತಕ್ಕಂತೆ ಅವುಗಳನ್ನು ಮಾರ್ಪಡಿಸಿಕೊಳ್ಳುವುದು ಕಾಲದ ಅನಿವಾರ್ಯತೆ ಎಂಬುದನ್ನು ಕುವೆಂಪು ಅರಿತಿದ್ದರು.

■ ಡಾ॥ ಧನವಂತ ಹಾಜವಗೋಳ

ಕುವೆಂಪು ಅವರ 'ಜಲಗಾರ', 'ಶೂದ್ರತಪಸ್ವಿ' ಮತ್ತು 'ಬೆರಳ್‌ಗೆ ಕೊರಳ್' ಈ ಮೂರು ನಾಟಕಗಳನ್ನು ಈ ಲೇಖನದಲ್ಲಿ ಅವಲೋಕಿಸಲಾಗಿದೆ.

ಕುವೆಂಪು ಅವರ 'ಜಲಗಾರ' ವೈದಿಕ ವರ್ಣವ್ಯವಸ್ಥೆಯಲ್ಲಿ ದೇವರು ದೇವಾಲಯದ ಪರಿಕಲ್ಪನೆಯನ್ನು ವಿರೋಧಿಸುವ ನೆಲೆಯಲ್ಲಿ ರಚನೆಯಾದ ನಾಟಕ. ಈ ದೇವಾಲಯಗಳ ಉಸ್ತುವಾರಿಯನ್ನು ಪರಂಪರಾನುಗತವಾಗಿ ನೋಡಿಕೊಂಡು ಬಂದವರು ವೈದಿಕರು. ಈ ಕಾರಣಕ್ಕಾಗಿ ದೇವಾಲಯವೇ ಈ ನಾಟಕದ ಕೇಂದ್ರಸ್ಥಾನವಾಗಿದೆ. ಇಲ್ಲಿ ದೇವಾಲಯಕ್ಕೆ ಹೋಗುವ ಮತ್ತು ತಿರುಗಿ ಬರುವ ದೃಶ್ಯಗಳ ಮೂಲಕ ಪರಂಪರೆಯೊಂದನ್ನು ತೆರೆದು ತೋರಿದ್ದಾರೆ. ತಮ್ಮ ಪೂರ್ವಜರಿಂದ ಬಂದ ಆಸ್ತಿ ಎಂಬಂತೆ ಯಾರ ಹಂಗೂ ಇಲ್ಲದೆ ದೇವಾಲಯಗಳೊಂದಿಗೆ ನಡೆದುಕೊಳ್ಳುವ ವೈದಿಕರು ಒಂದೆಡೆಯಾದರೆ, ಈ ದೇವಾಲಯಗಳಿಗೂ ತಮಗೂ ಸಂಬಂಧವೇ ಇಲ್ಲವೆಂದು ಅವುಗಳಿಂದ ದೂರವಿದ್ದು, ತಮ್ಮ ಕಾಯಕದಲ್ಲಿಯೇ ಶಿವನನ್ನು ಕಾಣುವ ಕೆಳವರ್ಗದ ಜನಗಳು ಮತ್ತೊಂದೆಡೆ ಕಾಣುತ್ತಾರೆ. ಇಲ್ಲಿ ಬರುವ ರೈತ ಮತ್ತು ಜಲಗಾರ ಇಬ್ಬರೂ ಕಾಯಕ ಸಂಸ್ಕೃತಿಯನ್ನು ಪ್ರತಿಪಾದಿಸುತ್ತಾರೆ. ಆದರೆ ರೈತ ಶ್ರೇಣೀಕೃತ ಸಮಾಜದ ನಿಯಮಗಳನ್ನು ಪಾಲಿಸುವ ಪ್ರತಿನಿಧಿಯಂತೆ ತೋರುತ್ತಾನೆ. ಈತನ ಮೂಲಕ ನಮ್ಮ ಪರಂಪರೆಯನ್ನು ತೋರಿಸುವ ಪ್ರಯತ್ನವನ್ನು ಮಾಡಿದಂತೆ ಕಾಣುತ್ತದೆ. ಜಲಗಾರ ಈ ನಾಟಕದ ವೈದಿಕ ಸಂಸ್ಕೃತಿಯ ನಿಯಮಗಳನ್ನು ವಿರೋಧಿಸುವ, ಅವರ ಪರಂಪರೆಗೆ ಪ್ರತಿರೋಧ ಒಡ್ಡುವ ಪ್ರತಿಭಟನಕಾರನಾಗಿ ಕಾಣಿಸುತ್ತಾನೆ.

ರೈತ ಮತ್ತು ಜಲಗಾರ ಇವರೀರ್ವರ ಸಂಭಾಷಣೆಯಲ್ಲಿ ಕೆಳವರ್ಗದವರಿಗೆ ನಿಷಿದ್ಧವಾಗಿರುವ ದೇವಾಲಯ ಪ್ರವೇಶದಂತಹ ಸಂಗತಿಯನ್ನು ಸಾಮಾಜಿಕ ಅನಿಷ್ಟವೆಂದು ಕುವೆಂಪು ಪ್ರತಿಪಾದಿಸಿದ್ದಾರೆ. ಈ ನಾಟಕದ ಮೇಲೆ ವಚನಕಾರರ ಸಾಮಾಜಿಕ ಪರಿವರ್ತನೆಯ ಹೊಸ ಸಿದ್ಧಾಂತಗಳ ದಟ್ಟ ಪ್ರಭಾವವಿರುವುದನ್ನು ಕಾಣಬಹುದು. ''ಜೋಯಿಸರು ದೇಗುಲದ ಒಳಗೆನ್ನ ಸೇರಿಸರು'', ''ನಿನ್ನೆ ದೇಗುಲದೆಡೆಗೆ ಹೋದ ಕಂದನಂ ಬೈದಿರಿದು ನೂಕಿದರು'' ಎಂಬಂಥ ಮಾತುಗಳು ಪರಂಪರೆಯ ಮುಂದುವರಿಕೆಯನ್ನು ಎತ್ತಿ ತೋರುತ್ತವೆ. ಇದಕ್ಕೆ ಪ್ರತಿಭಟನೆಯಾಗಿ ''ನನ್ನಲ್ಲಿಯೇ ದೇವರಿದ್ದಾನೆ, ನಾನೇ ದೇವರು'' ಎಂಬುದನ್ನು ಜಲಗಾರನ ಪಾತ್ರದ ಮೂಲಕ ಪ್ರತಿಷ್ಠಾಪಿಸುತ್ತ ಹೋಗಿರುವುದು ಒಂದು ಹೊಸ ಪರಿಕಲ್ಪನೆಯೇ ಆಗಿದೆ. ''ನೇಗಿಲಗೆರೆಯೇ ತೋರಿವುದೆನಗೆ ಮುಕ್ತಿಯ ಹಾದಿಯನು'' ಎಂದು ಹಾಡಿದ ರೈತ ತನ್ನ ಹಾಡಿನ ವಿರುದ್ಧವಾಗಿ ದೇವಾಲಯಕ್ಕೆ ಹೋಗುವಾಗ ಜಲಗಾರನನ್ನು ಕರೆಯುವುದು, ವೈದಿಕರ ನುಡಿ ಮತ್ತು ನಡೆಯಲ್ಲಿ ವ್ಯತ್ಯಾಸವಿರುತ್ತದೆಂಬುದನ್ನು ತೋರಿಸುತ್ತದೆ. ಅವರ ಇಂಥ ನಡವಳಿಕೆಗಳನ್ನು ನಾಟಕದಲ್ಲಿ ತಂದು ಅವರ ಸಂಸ್ಕೃತಿಗೆ ಈ ಮೂಲಕ ಪ್ರತಿರೋಧ ಒಡ್ಡಿರುವುದು ಸ್ಪಷ್ಟವಾಗಿ ಕಾಣುತ್ತದೆ.

ಈ ನಾಟಕದಲ್ಲಿ ಸ್ವಸಂತೋಷಕ್ಕಾಗಿ ಹಾಡಿಕೊಳ್ಳುತ್ತಿರುವ ಜಲಗಾರನ ಹಾಡಿನ ವಿಷಯವಾಗಿ ಬ್ರಾಹ್ಮಣ ಯುವಕರಿಬ್ಬರಲ್ಲಿ ನಡೆದ ಸಂಭಾಷಣೆ ಸಂಘರ್ಷಮಯವಾಗಿದೆ. ಕೆಳವರ್ಗದ ಜಲಗಾರನಲ್ಲಿ ಇಷ್ಟೊಂದು ಮಧುರವಾಗಿ ಹಾಡುವ ಪ್ರತಿಭೆ ಇರಲು ಹೇಗೆ ಸಾಧ್ಯ ಎಂಬ ಪ್ರಶ್ನೆಯೊಂದಿಗೆ, ಹುಟ್ಟು ಮತ್ತು ಪ್ರತಿಭೆಗೆ ತಳುಕು ಹಾಕುತ್ತ ಬಂದ ವೈದಿಕ ಪರಂಪರೆಯ ರೂಢಿಗತವಾದ ವ್ಯವಸ್ಥೆಗೆ ಮೊನಚಾದ ವ್ಯಂಗ್ಯದ ಮೂಲಕ ಕುವೆಂಪು ಪ್ರತಿಭಟಿಸಿದ್ದಾರೆ.

''ಶೂದ್ರರಲ್ಲಿ ಕವಿಗಳು ಹುಟ್ಟುತ್ತಾರೆಯೇ? ಅವರಲ್ಲಿ ಪಂಡಿತರು, ಶಿಲ್ಪಿಗಳು, ಯೋಗಿಗಳು ಜನಿಸುವುದು ಸಾಧ್ಯವೇ ಇಲ್ಲ'' ಎನ್ನುವ ವೈದಿಕರ ಪರಂಪರಾಗತ ತಿಳುವಳಿಕೆಗೆ ಕುವೆಂಪು ಅವರ ಪ್ರತಿಭೆಯೇ ಅಪೂರ್ವ ನಿದರ್ಶನವಾಗಿ ಕಾಣುತ್ತದೆ. ಆಧುನಿಕ ಶಿಕ್ಷಣ ವ್ಯವಸ್ಥೆ ಶೂದ್ರರಿಗೂ ತನ್ನ ಬಾಗಿಲನ್ನು ತೆರೆಯಿತು, ಆದರೆ ಪರಂಪರಾಗತವಾಗಿ ವಿದ್ಯೆಯ ಬಾಗಿಲನ್ನು ಭದ್ರವಾಗಿ ಮುಚ್ಚಿಕೊಂಡುಬಂದ ವೈದಿಕರು ಈ ಸಂಪ್ರದಾಯವನ್ನೇ ಈವರೆಗೂ ಮುಂದುವರಿಸಿಕೊಂಡುಹೋಗಲು ಹೆಣಗುತ್ತಿದ್ದಂತೆ ತೋರುತ್ತದೆ. ಶೂದ್ರ ಸಮುದಾಯದಲ್ಲಿ ಜನಿಸಿ ಅಪರೂಪದ ಪ್ರತಿಭೆಯ ವಕ್ತಾರರೆಂದು ಖ್ಯಾತರಾದ ಕುವೆಂಪು ವೈದಿಕರ ಇಂಥ ನಿಲುವುಗಳಿಗೆ ತಿಲಾಂಜಲಿ ಕೊಡುವ ಮೂಲಕ, ಪ್ರತಿಭೆ ಪುರೋಹಿತ ಶಾಹಿಯ ಸ್ವತ್ತು ಮಾತ್ರವೇ ಎಂಬುದನ್ನು ಸಾರಾಸಗಟಾಗಿ ತಳ್ಳಿಹಾಕಿದ್ದಾರೆ. ಡಾ॥ ಬಾಬಾಸಾಹೇಬ ಅಂಬೇಡ್ಕರ್, ಕೆ. ಆರ್. ನಾರಾಯಣನ್, ದೇವನೂರು ಮಹಾದೇವ, ಡಾ॥ ಸಿದ್ದಲಿಂಗಯ್ಯ ಮೊದಲಾದವರನ್ನು ನಿದರ್ಶನಕ್ಕೆ ನೋಡಿದರೆ ಹುಟ್ಟು ಪ್ರತಿಭೆಯನ್ನು ನಿರ್ಧರಿಸುವ ಮಾನದಂಡವಲ್ಲವೆಂಬುದು ಸ್ಪಷ್ಟವಾಗುತ್ತದೆ. ಕುವೆಂಪು 'ಜಲಗಾರ' ನಾಟಕದಲ್ಲಿ ಪ್ರತಿಭೆಯ ಕುರಿತ ಜಿಜ್ಞಾಸೆಯನ್ನು ಪರಿಣಾಮಕಾರಿಯಾಗಿ ಪ್ರತಿಪಾದಿಸಿದ್ದಾರೆ.

ಎರಡನೆಯ ದೃಶ್ಯದಲ್ಲಿ ದೇವಸ್ಥಾನದಿಂದ ಮರಳಿ ಬಂದ ರೈತನಿಗೂ ಜಲಗಾರನಿಗೂ ನಡೆದ ಚರ್ಚೆಯಲ್ಲಿ ಕುವೆಂಪು ಅವರ ವೈಚಾರಿಕತೆ ಗರಿಗೆದರಿ ನಿಂತಿದೆ. ದೇವರು, ದೇವಾಲಯಗಳನ್ನು ಕುರಿತು ಈವರೆಗೆ ಅರ್ಥೈಸುತ್ತ ಬಂದ ವೈದಿಕರಿಗೆ ಇವುಗಳ ಪುನರ್ ವ್ಯಾಖ್ಯಾನದ ಮೂಲಕ ತಮ್ಮ ನಿಲುವನ್ನು ಸ್ಪಷ್ಟಪಡಿಸಿದ್ದಾರೆ. ಜಲಗಾರನ ವೇಷದಲ್ಲಿ ಬಂದ ಶಿವನ ಮೂಲಕವೇ ಶಿವನೆಂದರೆ ಯಾರು ಎಂಬುದನ್ನು ಆ ಪಾತ್ರದಿಂದಲೇ ಹೇಳಿಸಿರುವ ಕುವೆಂಪು ವ್ಯಾಖ್ಯಾನ ಅನನ್ಯವಾಗಿದೆ.

'ಶೂದ್ರ ತಪಸ್ವಿ' ನಾಟಕ ಪಾರಂಪರಿಕವಾಗಿ ಬಂದ ಚಾತುರ್ವರ್ಣ್ಯ ಪದ್ಧತಿಯ ಮೌಲ್ಯಗಳನ್ನು ಪಲ್ಲಟಗೊಳಿಸುವ ಒಂದು ವಿನೂತನ ಪ್ರಯೋಗವಾಗಿದೆ. ಹೊಸ ಮೌಲ್ಯಗಳ ಅನುಷ್ಠಾನಕ್ಕೆ ಅವಕಾಶವನ್ನು ಕಲ್ಪಿಸುವ ನಿಟ್ಟಿನಲ್ಲಿ ತಮ್ಮ ವೈಚಾರಿಕ ನಿಲುವನ್ನು ಪ್ರತಿಪಾದಿಸಿದ್ದಾರೆ. ಈ ನಾಟಕದ ಶೀರ್ಷಿಕೆ ಧ್ವನಿಪೂರ್ಣವಾಗಿದ್ದು, ಹೊಸ ಚಿಂತನಾಕ್ರಮಕ್ಕೆ ಒಂದು ಸಮರ್ಥ ಪ್ರತಿಮೆಯಾಗಿದೆ. ವಾಲ್ಮೀಕಿ ರಾಮಾಯಣದ ಉತ್ತರ ಕಾಂಡದಲ್ಲಿ ಬರುವ ಶಂಬೂಕನ ಪ್ರಸಂಗವೇ ಈ ನಾಟಕದ ವಸ್ತು.

ಶಂಬೂಕನಂಥ ಶೂದ್ರ ತಪಸ್ಸು ಮಾಡಿದುದಕ್ಕೆ ಧರ್ಮ ಮುನಿದು, ಶಾಪವಾಗಿ, ತನ್ನ ಮಗ ಸತ್ತಿದ್ದಾನೆಂದು ಪ್ರತಿಪಾದಿಸುವ ಬ್ರಾಹ್ಮಣನ ಪಾತ್ರದ ಮೂಲಕ ವೈದಿಕ ಜಡ ಸಂಸ್ಕೃತಿಯನ್ನು ಎತ್ತಿ ತೋರಿದ್ದಾರೆ. ಆ ಬ್ರಾಹ್ಮಣನೊಂದಿಗೆ ತೀವ್ರವಾಗಿ ಪ್ರಶ್ನಿಸುವ ರಾಮನ ಪಾತ್ರದಲ್ಲಿ ಕುವೆಂಪು ವೈಚಾರಿಕತೆ ಪ್ರತಿಬಿಂಬಿತವಾಗಿದೆ. ಬ್ರಾಹ್ಮಣ ಮತ್ತು ರಾಮ ಇವರೀರ್ವರಲ್ಲಿ ನಡೆದ ಸಂಭಾಷಣೆಯಲ್ಲಿ ಕುವೆಂಪು ಅವರು ಪರಂಪರೆಗೆ ಒಡ್ಡಿದ ಪ್ರತಿಭಟನೆಯನ್ನು ಕಾಣಬಹುದು.

ಬ್ರಾಹ್ಮಣನೊಬ್ಬನು ಶೂದ್ರನಿಗೆ ನಮಸ್ಕಾರ ಮಾಡುವುದು ಸಾಮಾಜಿಕ ನಿಷಿದ್ಧ. ಇದು ಪರಂಪರಾಗತವಾಗಿ ನಡೆದುಕೊಂಡುಬಂದುದು. ಶೂದ್ರ ತಪಸ್ಸು ಮಾಡುವುದು ಅಧರ್ಮ ಎಂದು ಹೇಳಿ ಈ ರೀತಿಯಾದ ವರ್ಣಾಶ್ರಮ ಧರ್ಮವನ್ನು ಉಲ್ಲಂಘಿಸಿರುವುದಕ್ಕಾಗಿ ಈ ಬ್ರಾಹ್ಮಣ ಬಾಲಕ ಬಲಿಯಾದ ಎಂದು ಹೇಳುವ ಬ್ರಾಹ್ಮಣನ ಮಾತಿನಲ್ಲಿ ವೈದಿಕ ಪರಂಪರೆ ಪ್ರಕಟವಾಗಿದೆ. ಬ್ರಾಹ್ಮಣ ಬಾಲಕ ಬದುಕಿದ್ದರೆ ಅವನ ಉತ್ತಮ ಕುಲದೊಂದಿಗೆ ಶಾಸ್ತ್ರರಚನೆ, ಕಾವ್ಯಕಟ್ಟುವಿಕೆ, ತಪಸ್ಸು, ಧರ್ಮಪರಿಪಾಲನೆಯಂಥ ಘನಕಾರ್ಯಗಳನ್ನು ಮಾಡಬಹುದಿತ್ತು. ಇವೆಲ್ಲ ಪುರೋಹಿತಶಾಹಿಯ ಜಡಸಂಸ್ಕೃತಿಯಲ್ಲಿ ತಮಗೆ ಮಾತ್ರ ಮೀಸಲಾದ ಕಾರ್ಯಗಳೆಂದು ಪರಂಪರಾಗತವಾಗಿ ಪ್ರತಿಪಾದಿಸುತ್ತಲೇ ಬರಲಾಗಿದೆ. ಆದರೆ ಸತ್ತ ಬಾಲಕ ಬದುಕಿದ್ದರೆ ಇವೆಲ್ಲ ಮಾಡಬಹುದಾಗಿತ್ತೆಂದು ಭ್ರಮಿಸುವ ಬ್ರಾಹ್ಮಣ, ಬದುಕಿ ಆ ಸಾಧನೆಯನ್ನು ಮಾಡಿ ತೋರಿದ ಶೂದ್ರನ ತಪಶ್ಶಕ್ತಿಯನ್ನು ಒಪ್ಪಲು ಸಿದ್ಧನಿಲ್ಲ. ಅಲ್ಲದೆ, ಈ ತಪಸ್ಸು ಮಾಡಿರುವುದರಿಂದಲೇ ಬ್ರಾಹ್ಮಣ ಬಾಲಕನ ಸಾವಿನಂಥ ಅನಾಹುತ ಸಂಭವಿಸಿದೆ ಎಂದು ವಿವರಣೆ ನೀಡುವಲ್ಲಿ ಪರಂಪರೆಯನ್ನು ಪ್ರತಿನಿಧಿಸುತ್ತ ಬಂದ ಪರಿಯನ್ನು ನೋಡಬಹುದಾಗಿದೆ.

ಆದರೆ ಕುವೆಂಪು ಚಿಂತನೆ ಹೊಸ ಸೃಷ್ಟಿಯಾಗಿ ಹೊರಹೊಮ್ಮಿದೆ. ವೈದಿಕರ ವ್ಯಾಖ್ಯಾನಕ್ಕೆ ವಿರುದ್ಧವಾಗಿ ಕುವೆಂಪು ಮಹಾಯೋಗಿಯಾದ ಶಂಬೂಕನಂಥ ''ತಪಸ್ವಿಯ ತಿರಸ್ಕೃತಿಗೆ ಮುನಿದ ಧರ್ಮಂ ತಂದುದೀತನ ಮುದ್ದು ಕಂದಂಗೆ ಮರಣಮಂ'' ಎಂದು ಹೇಳಿದ್ದಾರೆ. ಧರ್ಮಶಾಸ್ತ್ರಗಳ ವಿವರಣೆ ಅವರವರು ಪರಿಭಾವಿಸುವ ರೀತಿಯಲ್ಲಿ ಅರ್ಥೈಸುವ ಕ್ರಮವೊಂದು ಇರುತ್ತದೆ. ಬ್ರಾಹ್ಮಣ ಕೊಡುವ ಧರ್ಮದ ವ್ಯಾಖ್ಯಾನಕ್ಕೆ ನೀಡಿದ ಪ್ರತಿಕ್ರಿಯೆ ಈ ನಾಟಕದಲ್ಲಿ ಪುರೋಹಿತಶಾಹಿಗಳಿಗೆ ಒಡ್ಡುವ ಪ್ರತಿರೋಧವಾಗಿದೆ.

ಮನುಷ್ಯ ಜೀವನದ 'ಸಾಧನೆ' ಬಹಳ ದೊಡ್ಡದು. ಅದನ್ನು ಯಾವ ಕುಲದವರೇ ಮಾಡಲಿ ಮಾನ್ಯ ಮಾಡಬೇಕು, ಗೌರವಿಸಬೇಕು, ಸಾಧನೆಗೆ ಕುಲ ಅರ್ಹತೆಯಲ್ಲ, ಸಮಾಜದಲ್ಲಿಯ ಕುಲ ಕಾರಣವಾಗಿ ಹುಟ್ಟಿಕೊಂಡ ಅಸಮಾನತೆ ದೂರಾಗಬೇಕೆಂಬುದು ಕುವೆಂಪುರವರ ಆಶಯವಾಗಿದ್ದಿತು. ಅವರು ಮಾಡಿದ ಸಾಧನೆ ಕುಲವನ್ನು ಮೀರಿದುದಾಗಿತ್ತು. ಈ ಬದಲಾವಣೆ ತೀವ್ರವಾಗಿ ಸಮಾಜವನ್ನು ವ್ಯಾಪಿಸಬೇಕೆಂದು ಅವರು ಬಯಸಿದ್ದರು. ಇಂಥ ಚಿಂತನೆಗಳನ್ನೊಳಗೊಂಡ ರಾಮನ ಮಾತನ್ನು ಕೇಳಿದ ಬ್ರಾಹ್ಮಣನ ದುಃಖ ಇಮ್ಮಡಿಸುತ್ತದೆ. ಆಗ ರಾಮನೂ ಬ್ರಾಹ್ಮಣನ ದುಃಖಕ್ಕೆ ಕರಗುತ್ತಾನೆ. ದುಃಖ ಯಾರದೇ ಆಗಿರಲಿ, ಅದಕ್ಕೆ ಮನಕರಗುವುದು 'ಧರ್ಮ'ವೆಂದು ಹೇಳುವ ಕುವೆಂಪು ಧರ್ಮದ ವ್ಯಾಖ್ಯಾನವನ್ನು ಸರಳೀಕರಿಸಿದರು. ಆ ಧರ್ಮಕ್ಕೆ ವೈದಿಕರು ಕೊಡುವ ವ್ಯಾಖ್ಯಾನವೇ ಬೇರೆಯಾಗಿತ್ತು; ಅಲ್ಲದೆ ತಮ್ಮ ವ್ಯಾಖ್ಯಾನಗಳನ್ನು ಎಲ್ಲರೂ ಒಪ್ಪಬೇಕು ಎಂಬುದನ್ನೇ ಚರಿತ್ರೆಯುದ್ದಕ್ಕೂ ಪ್ರತಿಪಾದಿಸಿದರು. ಇದನ್ನೇ ಕುವೆಂಪು ಅವರು ತಮ್ಮ ನಾಟಕಗಳಲ್ಲಿ ಪ್ರತಿಪಾದಿಸಿದ್ದಾರೆ. ತಪಸ್ಸು ಒಂದು ವಿದ್ಯೆ, ಅದನ್ನು ಯಾರು ಬೇಕಾದರೂ ಮಾಡಬಹುದು; ಆ ತಪಸ್ಸನ್ನು ಮಾಡಿದವರೆಲ್ಲರೂ ಪೂಜನೀಯರು; ಮನ್ನಣೆಗೆ, ಗೌರವಕ್ಕೆ ಪಾತ್ರರು. ಅಂತೆಯೇ ಈ ನಾಟಕದಲ್ಲಿ ಶೂದ್ರನು ಪೂಜನೀಯನೆಂದು ಬ್ರಾಹ್ಮಣಾದಿಗಳೇ ಗೌರವಿಸಬೇಕಿತ್ತು. ಆದರೆ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲ್ವರ್ಗದವರೆನಿಸಿಕೊಂಡ ಬ್ರಾಹ್ಮಣರು ಇದನ್ನು ಒಪ್ಪುವುದಿಲ್ಲ; ತಪಸ್ಸಿಗೆ ಶೂದ್ರರು ಅನರ್ಹರು ಎಂಬುದಕ್ಕೆ ಅವರು ಕೊಡುವ ಧರ್ಮಶಾಸ್ತ್ರಗಳ ಆಧಾರ, ಅವುಗಳನ್ನು ತಮ್ಮ ಮೂಗಿನ ನೇರಕ್ಕೆ ವ್ಯಾಖ್ಯಾನಿಸುವ ಅವರ ಇಡೀ ಸಂಸ್ಕೃತಿಯ ಕ್ರಮವನ್ನು ಕುವೆಂಪು ಪ್ರಶ್ನೆ ಮಾಡಿದ್ದು ಮಿಗಿಲಾದ ಪ್ರತಿರೋಧವೆನಿಸಿದೆ. ಆರಂಭದಿಂದಲೂ ವೇದಶಾಸ್ತ್ರಗಳನ್ನು ನಿರಾಕರಣೆ ಮಾಡುತ್ತಲೇ ಬಂದ ಕುವೆಂಪು ಅವರಿಗೆ ಅದಕ್ಕೆ ಅದೇ ರೂಪದಲ್ಲಿ ಹೊಸ ಬದುಕು ಸಾಧ್ಯವಿಲ್ಲವೆಂದು ಅರಿತಿದ್ದರು. ಈ ಕಾರಣಕ್ಕಾಗಿಯೇ ತಮ್ಮ ಹೊಸ ಚಿಂತನೆ, ದೃಢವಾದ ನಿಲುವುಗಳನ್ನು 'ಶೂದ್ರ ತಪಸ್ವಿ' ನಾಟಕದಲ್ಲಿ ಸಾಕಾರಗೊಳಿಸಿದರು. ಶ್ರೀರಾಮನ ಪಾತ್ರದ ಮೂಲಕ ಹರಿದ ಆಧುನಿಕ ಚಿಂತನೆಗಳು ಬ್ರಾಹ್ಮಣನ ಮನಸ್ಸಿನಲ್ಲಿ ಬದಲಾವಣೆಗಳನ್ನು ತರುತ್ತವೆ. ಕುವೆಂಪು ಬಯಸಿದುದು ಈ ಪರಿಯ ಬದಲಾವಣೆ. ಬ್ರಾಹ್ಮಣನು ರಾಮನ ಮಾತುಗಳಿಂದ ತನ್ನಲ್ಲಿ ಉಂಟಾದ ಬದಲಾವಣೆಯನ್ನು ವ್ಯಕ್ತಪಡಿಸುತ್ತಾನೆ.

ಆರಾದರೇನ್ ಆರಾಧ್ಯರ್ ತಪೋಧನರ್
ನಮಸ್ಕಾರವೆ ಪುಣ್ಯಂ, ತಿರಸ್ಕಾರಮೆ ಪಾಪಂ

ಇದು 'ಶೂದ್ರ ತಪಸ್ವಿ' ನಾಟಕದ ತಿರುಳು. ಹಿಂದಿನ ಪರಂಪರೆಯೆ ಮುಂದುವರಿಯಬೇಕೆಂದು ಪ್ರತಿಪಾದಿಸುತ್ತ ಬಂದ ವೈದಿಕರು ಬದಲಾವಣೆ ಹೊಂದುವುದು ಕುವೆಂಪು ಅವರಿಗೆ ಬೇಕಾಗಿದ್ದಿತು. ಈ ಪರಂಪರೆಯಲ್ಲಿ ವೈದಿಕರಿಗೆ ಮಾತ್ರ ಪ್ರತ್ಯೇಕವೆನಿಸುವ ಮೌಲ್ಯವೆನಿಸಿಕೊಂಡವುಗಳನ್ನು ಪರಿಷ್ಕರಿಸಿ, ಹೊಸ ಮೌಲ್ಯಗಳನ್ನು ಹುಟ್ಟುಹಾಕುವ ಆಶಯವನ್ನಿಟ್ಟುಕೊಂಡ 'ಶೂದ್ರ ತಪಸ್ವಿ' ಒಂದು ಅನನ್ಯ ಕಲಾಕೃತಿ ಎನಿಸಿದೆ.

'ಬೆರಳ್‌ಗೆ ಕೊರಳ್' ಮಹಾಭಾರತದಲ್ಲಿ ಬರುವ ಏಕಲವ್ಯನ ಉಪಾಖ್ಯಾನಕ್ಕೆ ಹಲವು ಮಾರ್ಪಾಡುಗಳನ್ನು ಮಾಡಿಕೊಂಡ ಒಂದು ದಾರ್ಶನಿಕ ನಾಟಕ. ಈ ನಾಟಕದಲ್ಲಿ ಗುರು ಶಿಷ್ಯ ಸಂಬಂಧವಾದ 'ಗುರುತತ್ವ' ಕರ್ಮಫಲ ಸ್ವರೂಪಿಯಾದ 'ಕರ್ಮತತ್ವ' ಹಾಗೂ ಸಮರ್ಪಣಾ ರೂಪವಾದ 'ಯಜ್ಞತತ್ವ'ಗಳನ್ನು ಅತ್ಯಂತ ಧ್ವನಿಪೂರ್ಣವಾಗಿ ಅಭಿವ್ಯಕ್ತಿಸಿರುವುದು ಗಮನಾರ್ಹವಾಗಿದೆ. ಈ ಮೂರು ತತ್ವಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಬರೆದ ಈ ನಾಟಕಕ್ಕೆ ಮೂರು ದೃಶ್ಯಗಳು ಪ್ರಾಪ್ತವಾಗಿವೆ. ಮೂಲಕಥೆಯನ್ನು ಹಾಗೆ ಉಳಿಸಿಕೊಂಡು ಒಂದು ಹೊಸ ಕ್ರಮದಲ್ಲಿ ನಿರೂಪಿಸಿರುವುದು ಈ ನಾಟಕದ ವೈಶಿಷ್ಟ್ಯವೆನಿಸಿದೆ.

ವ್ಯಾಧಪುತ್ರನಾದ ಏಕಲವ್ಯನಿಗೆ ದ್ರೋಣಾಚಾರ್ಯರಲ್ಲಿಯೇ ವಿದ್ಯೆ ಕಲಿಯಬೇಕೆಂಬ ಹಂಬಲ ಅಧಿಕವಾಗಿರುತ್ತದೆ. ತನ್ನ ಇಚ್ಛೆಯನ್ನು ತಂದೆ – ಹಿರಣ್ಯಧನುಷನೆಲ್ಲಿ ಹೇಳಿಕೊಳ್ಳುತ್ತಾನೆ. ಆಗ ಆತ,

''ಅವರ್ ಪಾರ್ವರ್... ಬಿಯದಗಳ್ ಓವಜಗೆಯಲ್ಕೆ ಒಪ್ಪರ್'' ಎಂದು ಹೇಳುತ್ತಾನೆ. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳವರ್ಗದವರಿಗೆ ವಿದ್ಯೆ ಕಲಿಯುವ ಅವಕಾಶವಿಲ್ಲ, ಅವರಿಗೆ ಕಲಿಯುವ ಇಚ್ಛೆಯಿದ್ದರೂ ಕಲಿಸುವ ಮೇಲ್ವರ್ಗದವರು ಒಪ್ಪದಿರುವುದು ರೂಢಿಗತವಾಗಿ ಬಂದಿದೆ. ಅದೊಂದು ಪರಂಪರೆಯಾಗಿಯೂ ಒಂದು ಕಾಲಘಟ್ಟದವರೆಗೆ ಮುಂದುವರೆದಿತ್ತು ಎನ್ನುವುದು ವಾಸ್ತವವಾಗಿದೆ. ವಿದ್ಯೆ ಕಲಿಯುವ ಹಕ್ಕು ಶೂದ್ರರಿಗಿಲ್ಲ, ಅದು ಕೇವಲ ಮೇಲ್ವರ್ಗದವರಿಗೆ ಮಾತ್ರ ಮೀಸಲು ಎಂಬ ಪರಂಪರೆಯಿಂದ ಬಂದ ರೂಢಿಯೊಂದನ್ನು ಕುವೆಂಪು ಮುರಿಯಲೆತ್ನಿಸುವ ಮೂಲಕ ಆ ವ್ಯವಸ್ಥೆಗೆ ಪ್ರತಿರೋಧ ತೋರಿರುವುದು ಇಲ್ಲಿ ಕಂಡುಬರುತ್ತದೆ. ಅರ್ಜುನ ಇದಕ್ಕೆ ಒಪ್ಪದಿದ್ದರೂ ದ್ರೋಣರು ತಮ್ಮ ಬಳಿ ಇಟ್ಟುಕೊಂಡು ಏಕಲವ್ಯನಿಗೆ ವಿದ್ಯೆ ಕಲಿಸುವ

ಸನ್ನಿವೇಶದ ಮೂಲಕ ಕುವೆಂಪು ಈ ಬದಲಾವಣೆಯನ್ನು ತೋರಿಸಿದ್ದಾರೆ. ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ವಿದ್ಯೆ ಸಾರ್ವತ್ರಿಕವಾದುದು ಎಂಬುದನ್ನು ಇಲ್ಲಿ ಎತ್ತಿಹಿಡಿಯಲಾಗಿದೆ. ಏಕಲವ್ಯ ತನ್ನ ತಂದೆಯ ಮರಣದಿಂದ ವಿದ್ಯೆ ಕಲಿಯುವುದನ್ನು ಅರ್ಧಕ್ಕೇ ಬಿಟ್ಟುಹೋಗಿ ಕಾಡಿನಲ್ಲಿ ದ್ರೋಣಾಚಾರ್ಯರ ಮೂರ್ತಿಯೊಂದನ್ನು ರಚಿಸಿ – ಎಲ್ಲ ಬಗೆಯ ಬಿಲ್ವಿದ್ಯೆಯಲ್ಲಿ ಪಾರಂಗತನಾಗುತ್ತಾನೆ. ಈ ಮೂಲಕ ಪ್ರತಿಭೆ ಎಲ್ಲ ವರ್ಗದ ಜನರಲ್ಲಿಯೂ ಇರುತ್ತದೆಂಬುದನ್ನು ಕುವೆಂಪು ನಿರೂಪಿಸುತ್ತಾರೆ. ಆದರೆ ಕೆಳವರ್ಗದವರ ಪ್ರತಿಭೆಯನ್ನು ಕಡೆಗಾಣಿಸುತ್ತ ಬಂದಿರುವುದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ವಿದ್ಯೆ ಕಲಿತ ಮೇಲ್ವರ್ಗದ ಜನ ಯಾವಾಗಲೂ ಅಧಿಕಾರ ದರ್ಪ, ಸ್ಪರ್ಧಾಮನೋಭಾವ, ನಯವಂಚಕತನ ಹಾಗೂ ವಿನಾಶ ಪ್ರವೃತ್ತಿಗಳನ್ನು ಪ್ರಕಟಪಡಿಸುತ್ತಲೇ ಬಂದಿರುವುದನ್ನು ಕಾಣಬಹುದು. ಅಂದಿನ ಶಿಷ್ಟ ಸಂಸ್ಕೃತಿಯ ಪ್ರತೀಕವಾದ ಅರ್ಜುನನಲ್ಲಿ ಈ ಎಲ್ಲ ಗುಣಗಳು ರೂಢಿಗತವಾಗಿ ಬಂದಿರುವುದನ್ನು ಕುವೆಂಪು ಇಲ್ಲಿ ಉದ್ದೇಶಪೂರ್ವಕವಾಗಿ ಗಮನಿಸಿದ್ದಾರೆ. ಇಂಥ ಸಂದರ್ಭ ಸನ್ನಿವೇಶಗಳ ಮೂಲಕ ನಮ್ಮ ಪರಂಪರೆಯನ್ನು ತೆರೆದಿಡುವ, ಅದನ್ನು ವಿರೋಧಿಸುವ, ಪರಿಷ್ಕರಿಸುವ ಕಾರ್ಯ ಸ್ಪಷ್ಟವಾಗಿದೆ. ಕಾಡಿನಲ್ಲಿ ಬೆಳೆದ ಜನಗಳ ಮುಗ್ಧತೆ, ಶ್ರದ್ಧೆ, ಪೋಷಣೆಯ ಪ್ರವೃತ್ತಿ ಮುಂತಾದ ಗುಣಗಳನ್ನು ಏಕಲವ್ಯನ ಪಾತ್ರದಲ್ಲಿ ಎರಕ ಹೊಯ್ದಿದ್ದಾರೆ. ಹೀಗೆ ಏಕಲವ್ಯನ ಕಾಡು ಹಾಗೂ ಅರ್ಜುನನ ನಾಡ ಸಂಸ್ಕೃತಿ ಅರ್ಜುನನೊಂದಿಗೆ ಮುಖಾಮುಖಿಯಾಗುವ ಮೂಲಕ ರೂಢಿಗತ ಮೌಲ್ಯಗಳಿಗೆ ಪ್ರತಿರೋಧ ಒಡ್ಡಿರುವುದು ಸ್ಪಷ್ಟವಾಗಿ ಕಾಣುತ್ತದೆ. ಕುವೆಂಪು ಅವರು ಏಕಲವ್ಯನ ಶ್ರದ್ಧಾಭಕ್ತಿಯೇ ಅವನ ವಿದ್ಯಾಪರಿಣತಿಗೆ ಕಾರಣವೆಂಬುದನ್ನು ತೋರಿಸಿ ಈ ನಾಟಕದಲ್ಲಿ 'ಗುರುತತ್ವ'ವನ್ನು ಸಾಕಾರಗೊಳಿಸಿದ್ದಾರೆ.

ಅರ್ಜುನ ಏಕಲವ್ಯನ ಬಿಲ್ವಿದ್ಯೆಗೆ ಮತ್ಸರಪಟ್ಟು, ಅವನನ್ನು ನೇರವಾಗಿ ವಿರೋಧಿಸುವುದು ಅವಮಾನವೆಂದು ಬಗೆದು ದ್ರೋಣರನ್ನು ಕಾಡಿಗೆ ಕರೆತರುವ ಸನ್ನಿವೇಶ ಅಪೂರ್ವವಾಗಿದೆ. ಈ ವಿಷಯ ತಿಳಿದ ಶಿಷ್ಯ ಏಕಲವ್ಯನು ಗುರು ದ್ರೋಣರಿಗೆ ಸಂಭ್ರಮದಿಂದ ಕೊಡುವ ಗೌರವಾತಿಥ್ಯ ನಮ್ಮ ಪರಂಪರೆಯ ಗುರು-ಶಿಷ್ಯ ಸಂಬಂಧದ ಪ್ರತೀಕವಾಗಿದೆ. ಏಕಲವ್ಯ ತನ್ನ ತಾಯಿಯನ್ನೂ ಗುರುಸೇವೆಯಲ್ಲಿ ನಿರತಳಾಗುವಂತೆ ಮಾಡುವ ಬಗೆ ಆತನ ಗುರುಪ್ರೀತಿಯ ಅನನ್ಯತೆಯನ್ನು ಪ್ರಸ್ತುತಪಡಿಸುತ್ತದೆ.

'ಬೆರಳ್‌ಗೆ ಕೊರಳ್' ನಾಟಕದಲ್ಲಿ ಅರ್ಜುನನಿಗೆ ಕೊಟ್ಟಿರುವ ವಚನವನ್ನು ಉಳಿಸಿಕೊಳ್ಳುವ ಮತ್ತು ಮುಗ್ಧನೂ, ನಿಷ್ಕಲ್ಮಷನೂ ಆದ ಏಕಲವ್ಯನಿಗೆ ಪಾಪಕರವಾದ ಹೇಯ ಕಾರ್ಯ ಎಸಗಬೇಕೆಂದು ಸಂದಿಗ್ಧತೆಯಲ್ಲಿ ಸಿಲುಕಿ ಒದ್ದಾಡುವ ದ್ರೋಣನನ್ನು ಚಿತ್ರಿಸಿದ್ದಾರೆ. ಇಂಥ ಸ್ಥಿತಿಗೆ ಮೂಲಕಾರಣ ಮನುಷ್ಯನಲ್ಲಿರುವ 'ಅಹಂಕಾರ' ಎಂಬುದನ್ನು ದ್ರೋಣನ ಮೂಲಕವೇ ತೋರಿಸಿದ್ದಾರೆ. ವಿದ್ಯೆಯನ್ನು ಪಡೆದ ವೈದಿಕರು ಅಹಂಕಾರದಿಂದ ಪರಂಪರೆಯುದ್ದಕ್ಕೂ ಮೆರೆದುದನ್ನು ಕಾಣಿಸಿದ್ದಾರೆ. 'ಒಬ್ಬನ ಅಹಂಕಾರವೇ ಮತ್ತೊಬ್ಬನ ಅಹಂಕಾರಕ್ಕೆ ಕಾರಣವಾಗಿ ಕರ್ಮ ಪರಂಪರೆ ಜನ್ಮ ಜನ್ಮಾಂತರಗಳವರೆಗೆ ಬೆನ್ನು ಹತ್ತುತ್ತದೆ' ಎಂಬುದನ್ನು ದ್ರೋಣನ ಪಾತ್ರದ ಮೂಲಕ ಪ್ರತಿಬಿಂಬಿಸಿದ್ದಾರೆ. ದ್ರೋಣರಿಗೆ ಅಪಮಾನ ಮಾಡಿದ ದ್ರುಪದನನ್ನು ಅವಮಾನ ಮಾಡಬೇಕೆಂಬ ಆಶೆಯನ್ನು ಅರ್ಜುನ ಪೂರೈಸಿರುತ್ತಾನೆ. ಆ ಕಾರಣಕ್ಕಾಗಿಯೇ ಅರ್ಜುನನ ಹಂಗಿಗೆ ದ್ರೋಣ ಒಳಗಾಗಿರುತ್ತಾನೆ. ಎಂತಹ ಮಹಾವ್ಯಕ್ತಿಗಳೂ ಹಂಗಿಗೆ ಒಳಗಾಗಿ ತಮ್ಮ ವ್ಯಕ್ತಿತ್ವವನ್ನೇ ಬಲಿಕೊಡಬೇಕಾಗಿ ಬರುತ್ತದೆಂಬುದನ್ನು ಕುವೆಂಪು

*(೫೮ನೇ ಪುಟಕ್ಕೆ)*

## ಹೆಣ್ಣು - ಮೂರು ಕವಿತೆಗಳು

೧. ನಾನು ಹೆಣ್ಣು
ಬೆಂಕಿಯ ಹೊಳೆ
ನೀರ ದಾಹದಲಿ ದಣಿದು
ಕಡಲನರಸುತ್ತ ನಡೆದೆ
ನಡೆನಡೆದು ಸೋತೆ
ಆದರೆ
ಕಡಲೇ ಕಾಣಲಿಲ್ಲ.





೨. ನಾನು ಹೆಣ್ಣು
ಒಂದು ಮನೆ
ಅಡಿಗೆ ಮನೆ
ಜಗತ್ತಿನ ಪಂಚಭಕ್ಷ್ಯ
ಪರಮಾನ್ನಗಳೆಲ್ಲ
ಇಲ್ಲಿ ಸಿದ್ಧವಾಗುತ್ತವೆ.
ರೊಟ್ಟಿ, ಪಲ್ಲೆ, ಪಾಯಸ
ಕಜ್ಜಾಯ – ಹೀಗೆ ಹೀಗೇ
ಎಷ್ಟೋ ತರಾವರಿ !
ಆದರೆ ನಾ ಬಯಸುವ
ಆ ಪೂರ್ಣ ಬದುಕೆಲ್ಲಿ ಪ್ರಿಯ !
ಅರ್ಧಕ್ಕರ್ಷೇ ನಿಲ್ಲುತ್ತದೆ.

೩. ನಾನು ಹೆಣ್ಣು –
ನನಗೂ ಒಂದು ಮನಸ್ಸಿದೆ
ಎಂದು ಯಾರೂ ಏಕೆ
ತಿಳಿಯುವುದಿಲ್ಲವೋ !
ಪ್ರೀತಿಸಬೇಡ – ಬಾಯಿ ಮುಚ್ಚಿಕೊಂಡಿರು
ತಲೆತಗ್ಗಿಸಿ ನಡೆ - ಪ್ರಜ್ಞಾವಂತಳಾಗು –
ಓಹ್...!!
ಇದೇನು ನನ್ನ ಹಣೆಬರಹ !?
ನನ್ನ ಬಗ್ಗೆ ನನ್ನ ಸ್ವಾತಂತ್ರ್ಯದ ಬಗ್ಗೆ
ವೇದಿಕೆಗಳಿಂದ ಈ ಪ್ರಪಂಚ
ಎತ್ತರದ ದನಿಯಲ್ಲಿ ಉದ್ದುದ್ದ
ಮಾತನಾಡುತ್ತದೆ.



ಮೂಲ : **ರಾಮಸಿಂಹ ಚಾಹಲ್** (ಪಂಜಾಬಿ ಕವಿ)
ಅನುವಾದ : **ಡಾ|| ವಿಜಯಾ ಸುಬ್ಬರಾಜ್**
ನಂ. ೫೧, ೧ನೇ 'ಎ' ಅಡ್ಡರಸ್ತೆ, ೩೦ನೇ ಮುಖ್ಯರಸ್ತೆ, ಅತ್ತಿಮಬ್ಬೆ ರಸ್ತೆ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಸಾಮಾಜಿಕ ಪ್ರಸ್ತುತತೆ ಮತ್ತು ಶಬರಿ




ಅಂಕಿತ ಪ್ರಕಾಶನ

ಪುಟ : ೨೭೨ ಬೆಲೆ : ರೂ. ೧೫೦

ಮುಖ್ಯವಾಗಿ, ಯಾವುದೇ ಲೇಖಕ ತನ್ನ ಕಾಲದ ಅತ್ಯಂತ ಪ್ರಜ್ಞಾಪೂರ್ಣ ಸ್ಥಿತಿಯಲ್ಲಿ ನಿಂತು ಬದ್ಧತೆಯಿಂದ ಬರೆಯುತ್ತಾನೆ ಎನ್ನುವುದಕ್ಕೆ ಇದೊಂದು ಉತ್ತಮ ನಿದರ್ಶನ. ಇಲ್ಲಿನ ಶಬರಿ ಬುಡಕಟ್ಟಿನ ಬದುಕಿನ ರೂಪಕ ಮಾತ್ರವಲ್ಲ; ಸಿದ್ಧ ಮಾದರಿಗಳನ್ನೇ ಮೀರುವ ಒಳಸಂಘರ್ಷದ ನಿರಂತರ ಪ್ರಕ್ರಿಯೆ. ಹಾಗಾಗಿಯೇ ಪುರಾಣದಂತೆ ವೈಭವೀಕರಣವಾಗುವುದರಿಂದ ತಪ್ಪಿಸಿಕೊಂಡು ಕಾಯುವ ಕುಲವಾಗಿ ಶ್ರಮವೇ ಶಬರಿಯಾದವಳು. ಬಹುಶಃ ಕಾದಂಬರಿಯ ಅಂತಃಸತ್ವವಿರುವುದೇ ಈ ತಂತ್ರಗಾರಿಕೆಯಲ್ಲಿ.

**ಪ್ರೊ||** ಬರಗೂರು ರಾಮಚಂದ್ರಪ್ಪ ಅವರ ಇತ್ತೀಚಿನ ಕಾದಂಬರಿ 'ಶಬರಿ'. ಈ ಶಬರಿ ಪುರಾಣದ ಪಾತ್ರವಲ್ಲ; ಚರಿತ್ರೆಯ ಪಾತ್ರ. ಚರಿತ್ರೆ ಎನ್ನುವಾಗಲೆ ಅದಕ್ಕೊಂದು ಶೋಷಣೀಯವಾದ ಸಾಂಸ್ಕೃತಿಕ ಹಾಗೂ ರಾಜಕೀಯ ಬದುಕು ಕೂಡಿಕೊಂಡೇ ಇರುತ್ತದೆ ಎನ್ನುವುದು ಊಹಿಸಬೇಕಾದುದೇನೂ ಅಲ್ಲ. ಆದರೆ, ಇಂತಹ ಚರಿತ್ರೆ ಕಾಲಕಾಲಕ್ಕೆ ಬದಲಾವಣೆ ಎನ್ನುವ ಬಣ್ಣ ಬಳಿದುಕೊಂಡು ವಾಸ್ತವದಲ್ಲಿಯೂ ನಿರಂತರತೆಯನ್ನು ಕಾಪಾಡಿಕೊಂಡು ಬರುವಂತಹದ್ದಾಗಿರುತ್ತದೆ. ಇಂತಲ್ಲಿಯೇ 'ಶಬರಿ' ಕಾದಂಬರಿ ತನ್ನ 'ವಿಚಾರ' ಮತ್ತು 'ಪ್ರಶ್ನೆ'ಯನ್ನಿರಿಸಿಕೊಂಡು ಸಾಮಾಜಿಕ ಪ್ರಸ್ತುತತೆಯ ಆಯಾಮವನ್ನು ಒಳಗೊಳ್ಳುತ್ತದೆ. ಅಲ್ಲದೆ, ವಿಶಿಷ್ಟ ತಂತ್ರಗಾರಿಕೆಯನ್ನೊಳಗೊಂಡ ಕಾದಂಬರಿ ಇಂತಹ ಬಣ್ಣವನ್ನು ಬಯಲುಗೊಳಿಸುವತ್ತ ಸಾಗುತ್ತದೆ. ಹೇಳುವುದಾದರೆ, ಇವರ 'ಭರತನಗರಿ' ಕಾದಂಬರಿ ಕನ್ನಡ ಕಾದಂಬರಿ ಪ್ರಪಂಚದಲ್ಲಿ ರಾಚನಿಕವಾದ ಸಿದ್ಧ ಮಾದರಿಗಳನ್ನೇ ಮುರಿಯುವಲ್ಲಿ ಪ್ರಧಾನವಾದರೆ, 'ಶಬರಿ' ಕಾದಂಬರಿ ಇದೇ ಮಾದರಿಯ ಮತ್ತೊಂದು ವಿಶಿಷ್ಟತೆಯೊಂದಿಗೆ ಪ್ರಧಾನವಾಗುತ್ತದೆ.

ಮುಖ್ಯವಾಗಿ, ಯಾವುದೇ ಲೇಖಕ ತನ್ನ ಕಾಲದ ಅತ್ಯಂತ ಪ್ರಜ್ಞಾಪೂರ್ಣಸ್ಥಿತಿಯಲ್ಲಿ ನಿಂತು ಬದ್ಧತೆಯಿಂದ ಬರೆಯುತ್ತಾನೆ ಎನ್ನುವುದಕ್ಕೆ ಇದೊಂದು ಉತ್ತಮ ನಿದರ್ಶನ. ಇಲ್ಲಿನ ಶಬರಿ ಬುಡಕಟ್ಟಿನ ಬದುಕಿನ ರೂಪಕ ಮಾತ್ರವಲ್ಲ; ಸಿದ್ಧ ಮಾದರಿಗಳನ್ನೇ ಮೀರುವ ಒಳಸಂಘರ್ಷದ ನಿರಂತರ ಪ್ರಕ್ರಿಯೆ. ಹಾಗಾಗಿಯೇ ಪುರಾಣದಂತೆ ವೈಭವೀಕರಣವಾಗುವುದರಿಂದ ತಪ್ಪಿಸಿಕೊಂಡು ಕಾಯುವ ಕುಲವಾಗಿ ಶ್ರಮವೇ ಶಬರಿಯಾದವಳು. ಬಹುಶಃ ಕಾದಂಬರಿಯ ಅಂತಃಸತ್ವವಿರುವುದೇ ಈ ತಂತ್ರಗಾರಿಕೆಯಲ್ಲಿ. ಲೇಖಕರು ಇಲ್ಲಿ ಬುಡಕಟ್ಟಿನ ಬದುಕನ್ನು ನಿರೂಪಿಸುತ್ತಲೇ, ಹೆಣ್ಣು-ಗಂಡು, ಬುದ್ಧಿ-ಬಲ, ಬುಡಕಟ್ಟು-ಸಂಪ್ರದಾಯ, ಅಧಿಕಾರಶಾಹಿ-ಜಮೀನ್ದಾರಿ, ಮಿಲಿಟರಿ-ಮಾರುಕಟ್ಟೆ ಮನೋಧರ್ಮ, ಇವುಗಳ ನಡುವಿನ ಬದಲಾದ ಶೋಷಣೆಯ ರೂಪಗಳನ್ನು; ಅಕ್ಷರ-ಅರಿವು, ಜನಸಂಸ್ಕೃತಿ-ಜನಪರಕಾರಣ, ಅಂತರಂಗ-ಬಹಿರಂಗ, ವಿವೇಕ-ಔಚಿತ್ಯ, ಚರಿತ್ರೆ-ವಾಸ್ತವ, ಸೂರ್ಯ-ಬೆಳದಿಂಗಳು ಇವುಗಳ ನಡುವಿನ ಅಂತಃಸಂಬಂಧವನ್ನು ಶೋಧಿಸುತ್ತಾರೆ.

ಎಫ್. ಆರ್. ಲೀವೀಸ್ ಎಂಬ ವಿಮರ್ಶಕನು ಲೇಖಕನ ಉದ್ದೇಶಗಳು ಕಲಾಕೃತಿಯಲ್ಲಿ ಒಡಮೂಡದ ಹೊರತು ಅವುಗಳಿಗೇನೂ ಅರ್ಥವಿಲ್ಲ ಎನ್ನುತ್ತಾನೆ. ಈ ಅರ್ಥದಲ್ಲಿ ಕಾದಂಬರಿ ಗೆಲುವನ್ನು ಸಾಧಿಸಿಬಿಡುತ್ತದೆ. ಆದರೆ, ಒಂದು ಉತ್ತಮ ಕೃತಿ ಲೇಖಕನ ಉದ್ದೇಶವನ್ನು ಮೀರಿ ಬೇರೆ ಅರ್ಥಗಳನ್ನೂ ಪಡೆಯಬಹುದಾದ ಸಾಧ್ಯತೆಗಳು ಇರುತ್ತವೆ ಎನ್ನುವುದಾದರೆ ಈ ಕಾದಂಬರಿ ಬುಡಕಟ್ಟಿನ ಬಗೆಗಷ್ಟೇ ಮಾತನಾಡದೆ, ಮನುಷ್ಯನನ್ನು ಕ್ರೂರಿಯಾಗಿಸುವ ಪ್ರಜಾಪ್ರಭುತ್ವ ವ್ಯವಸ್ಥೆ, ತಾನೇ ಕ್ರೂರಿಯಾದ ಜಮೀನ್ದಾರಿ ವ್ಯವಸ್ಥೆಗಳ ಮಧ್ಯದಲ್ಲಿ

## ಡಾ|| ಎಸ್. ಮಾರುತಿ

ನಮಗಿರಬೇಕಾದ ಒಳ ಎಚ್ಚರದ ಅರಿವಿನ ನಿರಂತರತೆಯನ್ನು ಮನದಟ್ಟುಮಾಡುತ್ತದೆ. ಆದರೆ, ಈ ಒಳಎಚ್ಚರದಲ್ಲಿ ಮಾತು ಸಾಧ್ಯವಾಗದೆ ಹೋದಾಗ ಮನಸ್ಸು ವಿಚಾರದ ರೆಕ್ಕೆ ಪಡೆಯುತ್ತದೆ. ಸಮಾನತೆಯ ಸುಖೀ ಸಾಮ್ರಾಜ್ಯದ ಕನಸನ್ನು ವಾಸ್ತವಕ್ಕಿಳಿಸುವಲ್ಲಿ ಪ್ರಯತ್ನಿಸುತ್ತದೆ. ಹಾಗಾಗಿ ಭಾವಗೀತಾತ್ಮಕವಾದ ನಿರೂಪಣಾತಂತ್ರ ಕಾದಂಬರಿಗೆ ಸಾವಯವತೆಯನ್ನೊದಗಿಸಿದೆ.

ಪ್ರಜಾಪ್ರಭುತ್ವ ಹಾಗೂ ಜಮೀನ್ದಾರಿ ವ್ಯವಸ್ಥೆಯೊಳಗಿನ ಅತಿರೇಕದ ನಡುವೆ ಸೂರ್ಯ, ಶಬರಿಯರು ಅನಿವಾರ್ಯವಾಗುತ್ತಾರೆ. ಇವರು ಊರು ಮತ್ತು ಕಾಡು ಅಥವಾ ಬುಡಕಟ್ಟು ಮತ್ತು ಊರಂಚನ್ನು ಒಂದಾಗಿಸಿ ಆ ಮೂಲಕ ಮಾನವೀಯತೆಯ ನಿರಂತರ ಹುಡುಕಾಟ ಮತ್ತು ಅದರ ಸ್ಥಾಪನೆಗೆ ಪ್ರಯತ್ನಿಸುತ್ತಾರೆ. ಹಾಗಾಗಿ, ಶಿಕ್ಷಣದ ಮೂಲಕ ವಿಚಾರದ ಅರಿವು, ಸಂಘಟನೆ ಹೋರಾಟ ಹೊಸ ಬದುಕು ಇವುಗಳ ಪ್ರತಿನಿಧಿಗಳಾಗಿಯೇ ಶಬರಿ, ಸೂರ್ಯ, ಚಂದ್ರ, ತಿಮ್ಮರಾಯ, ಹುಚ್ಚೀರ, ಸಣ್ಣೀರ ಕಾಣಿಸಿಕೊಳ್ಳುತ್ತಾರೆ. ಶಬರಿ ಇದಕ್ಕೆಲ್ಲಾ ಕೇಂದ್ರವಾಗಿ ಸೂರ್ಯನಿಂದ ವಿಚಾರಗಳನ್ನು ತಿಳಿದುಕೊಂಡು, ಭೂಮಿಯ ಮೇಲಿನ ಮನುಷ್ಯನ ಒಡೆತನ ಆರಂಭವಾದಾಗಿನಿಂದ ಇಂದಿನವರೆಗೂ ಆದ ಅನ್ಯಾಯವನ್ನು ತನ್ನ ಮನಸ್ಸಿನ ಒರೆಗಲ್ಲಿಗೆ ತಿಕ್ಕಿ ಪರೀಕ್ಷಿಸಿಕೊಳ್ಳುತ್ತಾಳೆ. ಆಸ್ತಿ - ಅಧಿಕಾರ, ಹೆಣ್ಣು - ಗಂಡು ಸಮಾನ ಅಂತ ಆಗ್ಬೇಕು ಎನ್ನುತ್ತಾಳೆ.

ಹೀಗೆ ಸಮಾನ ಸಾಂಸ್ಕೃತಿಕ ಬದುಕಿನಿಂದಲೇ ದೂರವಾದ ಶಬರಿ ತಾನು ಮಾಗುವುದರ ಜೊತೆಗೆ ಅಕ್ಷರಜ್ಞಾನ ಪಡೆದುಕೊಂಡು ತನ್ನವರ ಬದುಕಿನ ಅವೈಜ್ಞಾನಿಕತೆ, ಭೂ ಒಡೆತನ, ಸ್ತ್ರೀ ಶೋಷಣೆ ಇಂತಹವುಗಳ ವಿರುದ್ಧ ಸಮಾನತೆ, ದುಡಿಯೋರೆ ಒಡೆಯರು ಎನ್ನುವ ಸಿದ್ಧಾಂತವನ್ನೇ ಮಂಡಿಸುವಷ್ಟು ಪ್ರಬುದ್ಧಳಾಗುವ ಕಾದಂಬರಿಯ ಆಂತರಿಕಕ್ರಿಯೆ ಸಮಾಜದ ಸಾಮುದಾಯಿಕ ಇಚ್ಛೆ ಆಗಬೇಕೆಂಬುದಾಗಿದೆ. ಮುಂದುವರೆದು, ಸೂರ್ಯ ಭೂಮಿ ಸಿಕ್ಕಿದ ನಂತರ ಯಾರೂ ಯಾರನ್ನೂ ತುಳಿದು ಜೀವನ ಮಾಡಬಾರದು ಅನ್ನೋ ತಿಳಿವಳಿಕೆಯನ್ನೇ ನೀಡುತ್ತಾನೆ. ದೇವಸ್ಥಾನದ ಕತ್ತಲಲ್ಲಿ ನಡೆಯುವ ಮೊದಲ ರಾತ್ರಿಯಂತಹ ಜಮೀನ್ದಾರಿ ಕೃತ್ಯಗಳ ಕೋಣೆ ಕೋಣೆಗೆ ಬೆಳಕನ್ನು ತುಂಬಿ ರಹಸ್ಯವನ್ನು ಬಯಲುಗೊಳಿಸುತ್ತಾನೆ. ಇದರಿಂದ ತಾನೇ ಶಕ್ತಿಯಾಗುವ ಬದಲು ಜನರೇ ಶಕ್ತಿ ಪಡೆದು ನಾಯಕತ್ವಕ್ಕೆ ಸಿದ್ಧರಾಗಬೇಕೆಂಬ ಹಂಬಲವೂ ಇಲ್ಲಿಯದಾಗಿದೆ. ಒಟ್ಟಾರೆ, ರಾಜಕೀಯ ಸಂಸ್ಕೃತಿ, ಸಾಮಾಜಿಕ ಸಂಸ್ಕೃತಿಗಳ ಅಂತಃಸಂಬಂಧದಲ್ಲಿ ಕಾದಂಬರಿ ಬೆಳೆದು ಜನರು ಮತ್ತು ಜನವಿರೋಧಿಗಳ ನಡುವೆ ಸ್ಪಷ್ಟವಾಗುತ್ತದೆ. ಈ ಸ್ಪಷ್ಟತೆ ಪ್ರಸ್ತುತ ಸಂದರ್ಭದಲ್ಲಿ ಅತಿ ಜರೂರೆನಿಸುತ್ತದೆ.

ಡಾ|| ಎಸ್. ಮಾರುತಿ
ಉಪನ್ಯಾಸಕರು, ಸಹ್ಯಾದ್ರಿ ಕಲಾ ಮತ್ತು ವಾಣಿಜ್ಯ ಕಾಲೇಜು
ಶಿವಮೊಗ್ಗ - ೫೭೭ ೨೦೩

● ಬಿ. ಆರ್. ಪೋಲೀಸ್ ಪಾಟೀಲ



# ಬೇಸಿಗೆ ರಜೆ ಮತ್ತು ಮುಂದಿನ ಪೀಳಿಗೆ

**ಬೇ**ಸಿಗೆ ರಜೆ ಬಂತೆಂದರೆ ಮಕ್ಕಳಿಗೆ ಖುಷಿ, ಪಾಲಕರಿಗೆ ತಲೆ ಬಿಸಿ. ಎರಡು ಅಧ್ಯಯನ ಘಟ್ಟಗಳ ನಡುವಿನ ಅವಧಿ, ಕೆಲಸದ ಒತ್ತಡದಿಂದ ತುಸು ನೆಮ್ಮದಿ, ಇದನ್ನೇ ನಾವು 'ರಜೆ' ಎಂದು ಕರೆಯುವುದು. ಒತ್ತಡ ಅತಿಯಾಗಿ ಇದನ್ನು 'ಇನ್ನು ತಾಳಿಕೊಳ್ಳಲಾರೆ' ಎಂದು ಮನಸ್ಸು ಖಡಾಖಂಡಿತವಾಗಿ ಹೇಳಿದಾಗಲೂ ಅದೇ ಕೆಲಸದಲ್ಲಿ ಮುಂದುವರೆಯುವುದೆಂದರೆ ಮೃತ್ಯುವಿಗೆ ಆಹ್ವಾನ ಕೊಟ್ಟಂತೆ. ಇಂಥ ಸಂದರ್ಭಗಳಲ್ಲಿ ದೊಡ್ಡವರು ಕೇಳಿ ಪಡೆಯುವ, ಚಿಕ್ಕವರಿಗೆ ದೊಡ್ಡವರು ತಿಳಿದು ನೀಡುವ ವಿಶ್ರಾಂತಿ ಈ ರಜೆ.

ವರ್ಷಪೂರ್ತಿ ಲೋಡ್ ಮಾಡಿಟ್ಟುಕೊಂಡ ಸರಕನ್ನು ಖಾಲಿ ಮಾಡಿಕೊಂಡ ಖುಷಿಯಲ್ಲಿ ಪರೀಕ್ಷಾ ಕೋಣೆಯಿಂದ ನೇರವಾಗಿ ಸಿನಿಮಾ ಥೀಯೆಟರಿಗೆ ಧಾವಿಸಿ ಒಂದರ ಮೇಲೊಂದು ಸಿನಿಮಾ ನೋಡಿ ಹಗುರವಾಗುವ ಕಾಲವೊಂದಿತ್ತು. ಅದು ಸಿನಿಮಾ ಒಂದೇ ಮನರಂಜನೆಯ ಮಾಧ್ಯಮವಾಗಿದ್ದ ಕಾಲಘಟ್ಟ. ಆದರೆ ಇಂದು ಮನರಂಜನೆಯ ಮಾಧ್ಯಮ ಸಿನಿಮಾ ಒಂದೇ ಆಗಿಲ್ಲವಲ್ಲ! ಹಾಗಿದ್ದರೆ ಇಂದಿನ ಮಕ್ಕಳ ಭಾವವಿರೇಚನೆಯ ಮಾರ್ಗಗಳು ಯಾವುವು ? ಈ ರಜೆಯಲ್ಲಿ ಅವರು ಎಲ್ಲಿಗೆ ಹೋಗುತ್ತಾರೆ, ಏನು ಮಾಡುತ್ತಾರೆ ? ಅದೆಷ್ಟು ಜನ ಪಾಲಕರು ಇದನ್ನು ಗಮನಿಸುತ್ತಾರೆ ?

'ಹೋಗಲಾರದ್ದಕ್ಕ ಹೊಲ ಕೆಟ್ಟಿತು, ಹುಡುಗಲಾರದ್ದಕ್ಕ ಮನಿಕೆಟ್ಟಿತು, ಹುಡುಕಲಾರದ್ದಕ್ಕ ಹುಡುಗರು ಕೆಟ್ಟವು.' ಇದನ್ನು ಹೊಸ ಗಾದೆಯನ್ನಾಗಿ ಸ್ವೀಕರಿಸಿದ್ದಾದರೆ ಪಾಲಕರಿಗೊಂದು ಅಂತರಂಗದ ಮಾತು ಹೇಳಬೇಕೆನ್ನಿಸುತ್ತದೆ. ಕ್ಲುಪ್ತ ಸಮಯದಲ್ಲಿ ಗಮನಹರಿಸದ್ದಕ್ಕಾಗಿ ಮನೆಯಿಂದ ಹೊರಬಿದ್ದ ಮಗುವನ್ನು ಹುಡುಕಿ ಕರೆತಂದು ಪ್ರೀತಿ ತೋರದೆಹೋದಾಗ ಮಗುವಿನ ಸಾವು ಸಂಭವಿಸಿ ಅಪರಾಧದ ಆಕೃತಿ ಹುಟ್ಟಿಕೊಳ್ಳುತ್ತದೆ.

ಬೇಡ ಎಂದದ್ದನ್ನು ಮಾಡಿಯೇ ತೀರುವ ಕಸಕುತನ ಢಾಳಾಗಿ ಕಾಣಿಸುವ ಕಾಲಘಟ್ಟ ಈ ಹದಿವಯಸ್ಸು. ಒಳ್ಳೆಯದನ್ನು ಒಪ್ಪಿಕೊಳ್ಳಬಹುದಾದ, ಕೆಟ್ಟದ್ದನ್ನು ಅಪ್ಪಿಕೊಳ್ಳಬಹುದಾದ ಅತಿ ಸೂಕ್ಷ್ಮ ಹಂತ. ಇಂಥದ್ದರಲ್ಲಿ ಅವರು ಮಾಡುವುದಕ್ಕೆಲ್ಲ 'ಬೇಡ'ವೆನ್ನದೆ, ಅವರನ್ನು ಕಣ್ಣಲ್ಲಿ ಕಣ್ಣಿಟ್ಟು, ಮೆದುಳಿನಲ್ಲಿ ಹೃದಯವನ್ನಿಟ್ಟು ನೋಡುತ್ತ ಹೋಗುವಷ್ಟು, ಅವರೊಂದಿಗೆ ಆಡುತ್ತ ಸಾಗುವಷ್ಟು ವ್ಯವಧಾನ ಅದೆಷ್ಟು ತಂದೆ-ತಾಯಿಗಳಿಗಿದೆ !

'ಪಾಠದ ಸಮಯದಲ್ಲಿ ಪಾಠ, ಆಟದ ಸಮಯದಲ್ಲಿ ಆಟ' ಎಂಬ ಮನೋವೈಜ್ಞಾನಿಕ ನಿಲುವು ಇಂದು ಸಡಿಲಗೊಂಡಿದೆ. ಅತ್ತ ಪರೀಕ್ಷೆ ಮುಗಿಯುತ್ತಲೇ ಇತ್ತ ಬೇಸಿಗೆ ತರಗತಿಗಳ ಹೊರೆ. ನಗರಗಳಲ್ಲಿ ಮಾತ್ರ ಅಲ್ಲ, ಹಳ್ಳಿ ಹಳ್ಳಿಗಳಲ್ಲೂ ಈ ಬೇಸಿಗೆ ತರಗತಿಗಳ ಬಿಸಿಯೇರತೊಡಗಿದೆ. ತಮ್ಮ ಹಾಗೆ ತಮ್ಮ ಮಕ್ಕಳೂ ಹಣದ ಮೂಟೆ ಹೊತ್ತು ತರುವ ಕತ್ತೆಗಳೇ ಆಗಬೇಕು ಎಂಬ ಹೆಬ್ಬಯಕೆ ಪಾಲಕರಿಗೆ. ನೀತಿ ಬೋಧೆಗೆ, ಸಾಮಾನ್ಯಜ್ಞಾನಕ್ಕೆ, ಸಹಜ ಬದುಕಿಗೆ ಸಂಬಂಧಪಟ್ಟ ಹತ್ತು ರೂಪಾಯಿಯ ಪುಸ್ತಕವನ್ನೂ ಕೊಂಡು ಮಕ್ಕಳ ಕೈಗಿಡದ ಪಾಲಕರು ಹತ್ತಾರು ಸಾವಿರ ಟ್ಯೂಶನ್ ಫೀ ಸುರಿದು ಬೇಸಿಗೆ ತರಬೇತಿ ತರಗತಿಗಳಿಗೆ ಸೇರಿಸುತ್ತಾರೆ. ಅತಿಯಾದ ಒತ್ತಡದ ನಡುವೆ ಆಟವಿಲ್ಲ, ಹೊತ್ತುಹೊತ್ತಿಗೆ ಊಟವಿಲ್ಲ, ತರಗತಿ ಹಾಗೂ ಮನೆಗಳ ನಡುವೆ ಎಡೆಬಿಡದೆ ಓಡಾಡುವ ಈ ಅಸ್ಥಿಪಂಜರಗಳು ಮೂರ್ಛೆ ಬಂದು ಬಿದ್ದದ್ದೂ ಗೊತ್ತಾಗುವುದಿಲ್ಲ.

ರಜೆ ಮುಗಿಯುತ್ತಲೆ ಮತ್ತೆ ಶಾಲೆ - ಕಾಲೇಜುಗಳಿಗೆ ಸೇರಿಸಿ ಕೃತಾರ್ಥರಾಗುವ ಅಪ್ಪ - ಅಮ್ಮಂದಿರಾ, ಒಂದು ಸತ್ಯವನ್ನು ಹೇಳಲೇ ? ಮನಸ್ಸುಗಳಲ್ಲಿ ಆಸೆ ಹುಟ್ಟುವ, ಹೃದಯಗಳಲ್ಲಿ ಬಯಕೆ ಕೆನೆಗಟ್ಟುವ, ಕಣ್ಣುಗಳು ಕತೆ ಹೇಳಬಯಸುವ ಈ ಹದಿ ಅವಸ್ಥೆಯಲ್ಲಿ ಅವರೊಂದಿಗಿದ್ದು ಅವರ ಕಣ್ಣಮಿಂಚನ್ನು, ಮಾತಿನ ಮೊನಚನ್ನು, ಕೃತಿಯ ಗಾಂಭೀರ್ಯವನ್ನು, ಅವರ ಮುಖ ಹಾಗೂ ತುಟಿಗಳ ಮೇಲೆ ಹುಟ್ಟಿ ಮರೆಯಾಗುವ ಗೆರೆಗಳನ್ನು ಗಮನಿಸಿ ತಿದ್ದುವ ಅಥವಾ ಹುರಿದುಂಬಿಸುವ ಕಾರ್ಯವನ್ನು 'ಪಾಲಕರು' ಎನ್ನಿಸಿಕೊಂಡವರೇ ಮಾಡಬೇಕಲ್ಲವೆ ? ಒಂದು ವೇಳೆ ಈ ಕರ್ತವ್ಯ ಮಾಡದೆ ಹೋದರೆ ಇಂಥವರ ಮಕ್ಕಳು ಲೋಕಕಂಟಕರಾಗಿಬಿಡುತ್ತಾರೆ.

ಕಾಸ್ಮೊಪಾಲಿಟನ್ ಹಾಗೂ ಮೆಟ್ರೊಪಾಲಿಟನ್ ನಗರಗಳಲ್ಲಿನ ಸ್ಥಿತಿ ಇನ್ನೂ ಗಂಭೀರವಾಗಿದೆ. ಇಲ್ಲಿ ತಂದೆ-ತಾಯಿಗಳು ಸಿಗುವುದೇ ದುರ್ಲಭ. ಇಲ್ಲಿ ಹಣ ಗಳಿಸುವ ಹೆಣ್ಣು-ಗಂಡು ಯಂತ್ರಗಳು ಸಿಗುತ್ತವೆ, ಅಷ್ಟೆ. ಇಂಥ ದಂ-ಪತಿಗಳು ಮಕ್ಕಳು ಕೇಳಿದಷ್ಟು ಹಣ, ಕೈಯಲ್ಲೊಂದು ಮೊಬೈಲ್, ಕ್ರೆಡಿಟ್ ಕಾರ್ಡ್ ಕೊಡಿಸಿ ಸಾಗಹಾಕಿ ಕೈ ತೊಳೆದುಕೊಂಡುಬಿಡುತ್ತಾರೆ. ಇದನ್ನೇ ಕಾಯುತ್ತ ಕುಳಿತ ಮಾಫಿಯಾಗಳು ಮದ್ಯ, ಮಾದಕತೆ, ಡಿಸ್ಕೊ, ಬ್ಲೂಫಿಲ್ಮಗಳ ಆಮಿಷವೊಡ್ಡಿ ಈ ಅನಾಥ ಮಕ್ಕಳನ್ನು ತಮ್ಮ ವಶಕ್ಕೆ ತೆಗೆದುಕೊಂಡದ್ದರ ಪರಿಣಾಮವೇ ಅರಾಜಕತೆ, ಅಶಾಂತಿ, ಭಯೋತ್ಪಾದನೆ, ಲೋಕವಿರೋಧಿ ಹಾಗೂ ಜನವಿರೋಧಿ ಯುವ ರಾಕ್ಷಸರ ಹುಟ್ಟು. ವಿಶ್ವದ ಬಹುಮಂದಿ ಭಯೋತ್ಪಾದಕರು ಇಂಥ ಹದಿವಯಸ್ಸಿನಲ್ಲೇ ಪ್ರೀತಿವಂಚಿತರಾದ ಮಕ್ಕಳಾಗಿದ್ದಾರೆ.

ಪದವಿಪೂರ್ವ ವಿಜ್ಞಾನ ಪರೀಕ್ಷೆಗಳಲ್ಲಿ ಹೇಗಾದರೂ ಮಾಡಿ ಹೆಚ್ಚು ಅಂಕ ಗಳಿಸಬೇಕು, ಸಿ.ಇ.ಟಿ.ಯಲ್ಲೂ ಶತಾಯಗತಾಯ ರ್‍ಯಾಂಕ್ ಗಳಿಸಿ ವೃತ್ತಿ ಶಿಕ್ಷಣ ವರ್ಗಗಳಿಗೆ ಪ್ರವೇಶ ಗಿಟ್ಟಿಸಿ ವೈದ್ಯಕೀಯ, ತಾಂತ್ರಿಕ ಪದವಿ, ಸ್ನಾತಕೋತ್ತರ ಪದವಿ ಪಡೆದುಕೊಂಡು... ಪರದೇಶಕ್ಕೆ ತಮ್ಮ ಮಕ್ಕಳು ಹೋಗಿ ಡಾಲರ್‌ಗಳಲ್ಲಿ ಹಣ, (ವೇತನ) ಬಾಚಿಕೊಂಡು ತರಬೇಕು ಎಂದು ಬಯಸುವ ಪಾಲಕರು ಕಲಾ-ವಾಣಿಜ್ಯ, ವಿಜ್ಞಾನ ಪದವಿ, ಸ್ನಾತಕೋತ್ತರ ಪದವಿಗಳೂ ಇವೆಯೆಂಬುದನ್ನೇ ಮರೆತದ್ದರಿಂದ ಏರುಪೇರಾಗುತ್ತಿದೆ. ಬದುಕಿನ ಲಯ ಕುಂಠಿತವಾಗತೊಡಗಿದೆ. ಹೈಬ್ರಿಡ್ ತಳಿಗಳು ಉತ್ಪಾದನೆಯ ಗಾತ್ರ ಹೆಚ್ಚಿಸಿರಬಹುದು, ಆದರೆ ಅಗತ್ಯ ಪೌಷ್ಟಿಕಾಂಶ ಒದಗಿಸಿವೆಯೇ ? ಮಕ್ಕಳ ಪೋಷಣೆಗೂ ಇದಕ್ಕೂ ಏನು ಸಂಬಂಧ ಎಂದು ಕೇಳುತ್ತೀರಾ ? ಇದೆ, ತುಂಬ ಘನಿಷ್ಠ ಸಂಬಂಧವಿದೆ. ಹೃದಯವಿಲ್ಲದ, ಸಂಬಂಧಗಳನ್ನು ಗೌರವಿಸದ, ರಾಷ್ಟ್ರಧರ್ಮದ ಪಾಠ ಕಲಿಯದ ಅಕ್ಷರಸ್ಥರನ್ನು ಉತ್ಪಾದಿಸುವ ಬದಲು ಸಹಜ ಬದುಕಿಗೆ, ಕರುಳ ಕಕ್ಕುಲತೆಗೆ ಸ್ಪಂದಿಸುವ, ತೊಟ್ಟಿಲಲ್ಲಾಡುವ ಕಂದಮ್ಮಗಳನ್ನು ಎತ್ತಿಕೊಂಡು ಆಡಿಸುವ, ಅವು ವಿಸರ್ಜಿಸುವ ಮಲ-ಮೂತ್ರಗಳನ್ನು ಗಂಧವೆಂದು ಗೌರವಿಸುವ ದೇಶಿಸಂತಾನ ನಮ್ಮದಾಗಬೇಕು. ಇದು ಎಲ್ಲರ ಬಯಕೆಯಾದಾಗಲೇ ನಮ್ಮ ಮುಂದಿನ ಪೀಳಿಗೆ ನಮ್ಮದಾದೀತು !

ಬಿ. ಆರ್. ಪೋಲೀಸ್ ಪಾಟೀಲ
ಪ್ರಾಚಾರ್ಯರು, ಎಸ್.ಆರ್.ಎ. ಪದವಿಪೂರ್ವ ಕಾಲೇಜು, ಬನಹಟ್ಟಿ, ಬಾಗಲಕೋಟೆ ಜಿಲ್ಲೆ - ೫೮೭೩೧೧

# ಪ್ರಾಚೀನ ಭಾರತದಲ್ಲಿ 'ಗ್ರಾಮೀಣ ಶ್ರೀಮಂತರು' ಮತ್ತು ಬೌದ್ಧಧರ್ಮ

ಪ್ರಾಚೀನ ಭಾರತೀಯ ಇತಿಹಾಸದ ಹಲವು ಮುಖಗಳಿಗೆ ಪ್ರಾಮುಖ್ಯತೆ ಸಿಕ್ಕಿದೆ. ಆದರೆ ಪ್ರಾಚೀನ ಭಾರತೀಯ ಕೃಷಿ ಮತ್ತು ಕೃಷಿಕ ಸಮಾಜದ ಬಗ್ಗೆ ಬರವಣಿಗೆಗಳು ಕಾಣಸಿಗುವುದು ಅಪರೂಪ. ಈ ಲೇಖನ ಪ್ರಾಚೀನ ಭಾರತೀಯ ಕೃಷಿಕ ಸಮಾಜದ ಒಂದು ವರ್ಗವನ್ನು ಪರಿಚಯಿಸುವ ಕಿರು ಪ್ರಯತ್ನ.

ಸಿಂಧೂ ಸಂಸ್ಕೃತಿಯ ಕೃಷಿಯ ಬಗ್ಗೆ ನಮ್ಮಲ್ಲಿ ಹೆಚ್ಚೇನು ಮಾಹಿತಿ ಇಲ್ಲ. ಸಿಂಧೂ ಸಂಸ್ಕೃತಿ ಕಾಲಕ್ಕೆ ಕೃಷಿ ಚೆನ್ನಾಗಿ ಅಭಿವೃದ್ಧಿಯಾಗಿದ್ದಿರಬೇಕು. ಇಲ್ಲದಿದ್ದರೆ ಅಲ್ಲಿನ ನಗರಸಂಸ್ಕೃತಿ ಸಮೃದ್ಧವಾಗಿ ಬೆಳೆಯುತ್ತಿರಲಿಲ್ಲ. ಸಿಂಧೂ ಸಂಸ್ಕೃತಿಯ ನೆಲೆಗಳಲ್ಲಿ ಬಾರ್ಲಿ, ಗೋಧಿ, ಅಕ್ಕಿ, ಸಾಸಿವೆ, ಎಳ್ಳು, ಹತ್ತಿ ಮುಂತಾದ ಬೆಳೆ ಬೆಳೆಯುತ್ತಿದ್ದರೆಂದು ನಮಗೆ ಆರ್ಕಿಯಾಲಜಿ ಮೂಲಕ ತಿಳಿಯುತ್ತದೆ. ರಾಜಸ್ಥಾನದ ಕಾಲಿಬಂಗನ್‌ನಲ್ಲಿ ನೆಲವನ್ನು ನೇಗಿಲಿನಿಂದ ಉಳುಮೆ ಮಾಡಿದ ರೇಖೆಗಳು ಕಂಡುಬಂದಿವೆ. ಹಾಗೆಯೇ ಉತ್ತರವೇದ ಕಾಲದಲ್ಲಿ ಜನರಿಗೆ ಹೊಸ ಲೋಹ 'ಕಬ್ಬಿಣ'ದ ಪರಿಚಯವಾಯಿತು. ಇದು ವೇದಕಾಲೀನ ಜನರ ಜೀವನದಲ್ಲಿ ಹಲವು ಬದಲಾವಣೆಗಳಿಗೆ ಕಾರಣವಾಯಿತು. ಆಗ ಕಾಡುಗಳಿಗೆ ಅಗ್ನಿಸ್ಪರ್ಶ ಮಾಡಿ ಕಾಡುಭೂಮಿಯನ್ನು ಕೃಷಿಭೂಮಿಯನ್ನಾಗಿ ಸುತ್ತಿದ್ದರು. ಕಬ್ಬಿಣದ ಪರಿಚಯ ಅವರಿಗೆ ಇನ್ನೂ ಹೆಚ್ಚಿನ ತಂತ್ರಜ್ಞಾನ ಒದಗಿಸಿತು. ಕಬ್ಬಿಣದ ಕೃಷಿ ಉಪಕರಣಗಳು ಕೃಷಿ ಅಭಿವೃದ್ಧಿಗೆ ಬಹಳ ಸಹಾಯಕವಾದವು. ಜನರಿಗಾಗಲೇ ಆರು ಋತುಗಳು, ಇಪ್ಪತ್ತೇಳು ನಕ್ಷತ್ರಗಳು ಮತ್ತು ಯಾವ ಋತು ಯಾವ ಬೆಳೆಗೆ ಉಪಯುಕ್ತ ಎಂಬ ಜ್ಞಾನವಿತ್ತು.

ಇದರಿಂದಾಗಿ ಫಲವತ್ತಾದ ಮಣ್ಣು ಮತ್ತು ನೀರಾವರಿ ಸೌಲಭ್ಯವಿರುವ ಗಂಗಾ ನದಿ ಬಯಲು ಪ್ರದೇಶದಲ್ಲಿ ಕೃಷಿ ವ್ಯಾಪಕ ವಾಗಿ ಪಸರಿಸಿತು. ಇವುಗಳ ಪರಿಣಾಮವಾಗಿ ಕೃಷಿ ಉತ್ಪಾದನೆ ಅಗತ್ಯಕ್ಕಿಂತ ಅಧಿಕಗೊಂಡಿತು. ಇದೇ ಸಂದರ್ಭದಲ್ಲಿ ಜನಸಮುದಾಯದ ಸಾಮೂಹಿಕ ಆಸ್ತಿಯ ಒಡೆತನ ಖಾಸಗಿ ಒಡೆತನದ ಕಡೆಗೆ ಬದಲಾಯಿತು. ಈ ಭೂಮಿಯ ಮೇಲಿನ ಖಾಸಗಿ ಒಡೆತನದ ಹಕ್ಕು ಶ್ರೀಮಂತ ಕೃಷಿಕವರ್ಗ ಮತ್ತು ಬಡ ಕೃಷಿಕರನ್ನು ಸೃಷ್ಟಿಸಿತು.

ಪ್ರಾಚೀನ ಸಂಸ್ಕೃತ, ಪ್ರಾಕೃತ, ಪಾಲಿ ಗ್ರಂಥಗಳಲ್ಲಿ ಇಂತಹ ಗ್ರಾಮೀಣ ಶ್ರೀಮಂತ 'ಗೃಹಪತಿ' ಮತ್ತು ಬಡವರಾದ, 'ದಾಸ – ಕರ್ಮಕಾರ'ರ ಉಲ್ಲೇಖಗಳು ದೊರೆಯುತ್ತವೆ. ಈ ಹೊಸ ಗ್ರಾಮೀಣ ಶ್ರೀಮಂತವರ್ಗ ಅಥವಾ 'ಗೃಹಪತಿ'ಗಳು ಬುದ್ಧನ ಕಾಲದಲ್ಲಿ ಬಹಳ ಪ್ರಭಾವಶಾಲಿಗಳಾಗಿದ್ದರು. ಋಗ್ವೇದದಲ್ಲಿಯೇ ನಮಗೆ 'ಗೃಹಪತಿ' ಎನ್ನುವ ಶಬ್ದ ಕಾಣಬರುತ್ತದೆ. ಆಗ ಈ ಶಬ್ದಕ್ಕೆ ಮನೆಯ ಒಡೆಯ ಅಥವಾ ಮನೆಯಲ್ಲಿ ಧಾರ್ಮಿಕ ಕಾರ್ಯವನ್ನೆಸಗುವ ಯಜಮಾನ ಎನ್ನುವ ಅರ್ಥಗಳಿದ್ದವು.

ವೇದೋತ್ತರ ಕಾಲದಲ್ಲಿ 'ಗೃಹಪತಿ' ಎನ್ನುವ ಶಬ್ದದ ಅರ್ಥ ಬದಲಾಗುತ್ತಾಬಂದಿತು. ಈ ಕಾಲದಲ್ಲಿ ಗೃಹಪತಿಗಳು ಕೇವಲ ಮನೆಯ ಒಡೆಯರಾಗಿ ಅಲ್ಲ, ಶ್ರೀಮಂತ ಕೃಷಿಕರಾಗಿ ಕಾಣಿಸಿಕೊಳ್ಳುತ್ತಾರೆ. ಪ್ರಾಚೀನ ಸಾಹಿತ್ಯದಲ್ಲಿ 'ಗೃಹಪತಿ'ಗಳ ಮನೆಯಲ್ಲಿ ತುಂಬಿದ ಧಾನ್ಯದ ಕಣಜ, ಗೋವುಗಳು, ತೋಟ, ಗುಲಾಮರು ಮತ್ತು ಚಿನ್ನದ ನಾಣ್ಯಗಳಿರುವ ಚಿತ್ರಣ ಇದೆ. ಹಾಗೆಯೇ ಕೃಷಿಭೂಮಿಯಲ್ಲಿ ತಾವೇ ಸ್ವತಃ ಕೆಲಸ ಮಾಡುವ ಮತ್ತು ಆಳುಗಳಿಂದ ಕೆಲಸ ಮಾಡಿಸುವ ಚಿತ್ರಣಗಳು ದೊರೆಯುತ್ತವೆ. ಇವರು ಆಸ್ತಿಯ ನಿರ್ವಹಣೆ ಮತ್ತು ನಿಯಂತ್ರಣಕ್ಕಾಗಿ ಊರಿಂದ ಊರಿಗೆ ಸಂಚಾರ ಮಾಡುವ ಸನ್ನಿವೇಶಗಳು ಪಾಲಿ ಗ್ರಂಥಗಳಲ್ಲಿವೆ.

ಬೌದ್ಧ ಗ್ರಂಥ ಧಿಘನಿಕಾಯ '''ಗೃಹಪತಿ' ನೆಲ ಉಳುವವನು, ತೆರಿಗೆ ಪಾವತಿ ಮಾಡುವವನು ಹಾಗೂ ರಾಜ್ಯದ ಬೊಕ್ಕಸ ಹೆಚ್ಚಿಸುವ ವ್ಯಕ್ತಿ'' ಎಂದು ಹೇಳುತ್ತದೆ. ವಿನಯಪಿಟಕದಲ್ಲಿ ಗೃಹಪತಿ ಮೆಂಡಕನ ಉಲ್ಲೇಖ ಇದೆ. ಇವನ ಮನೆಯಲ್ಲಿ ದಾಸಕರ್ಮಕಾರರು ಉಳುಮೆ ಮಾಡುವುದು, ಅವರ ಊಟ ಉಪಚಾರದ ವ್ಯವಸ್ಥೆ, ಅವರಿಗೆ ಸಂಬಳ ಬಟವಾಡೆಯ ಉಲ್ಲೇಖಗಳು ಸಿಗುತ್ತವೆ. ಒಟ್ಟಿನಲ್ಲಿ, ಈ ಗೃಹಪತಿಗಳು ಅಥವಾ ಗ್ರಾಮೀಣ ಶ್ರೀಮಂತರು ಗ್ರಾಮಗಳಲ್ಲಿ ಗೌರವಾನ್ವಿತರೂ ಪ್ರಭಾವಶಾಲಿ ವ್ಯಕ್ತಿಗಳೂ ಆಗಿದ್ದರು. ಬುದ್ಧ ಕೂಡ ಗೃಹಪತಿಗಳನ್ನು ಗೌರವಾದರಗಳಿಂದ ನೋಡುತ್ತಾನೆ. ಗೃಹಪತಿ ಎಂಬುದು ಒಂದು ಬಿರುದು ಅಥವಾ ಪದವಿ. ಒಂದು ಮನೆಯಲ್ಲಿ ಒಬ್ಬ ಮಾತ್ರ ಗೃಹಪತಿ ಇರಲು ಸಾಧ್ಯ. ಮುಂದೆ ಈ ಪದವಿ ಇವನ ಮಕ್ಕಳಲ್ಲಿ ಒಬ್ಬನಿಗೆ ಮಾತ್ರ ಲಭ್ಯ. ಇವನನ್ನು 'ಗೃಹಪತಿ-ಪುತ್ರ' ಎಂದೇ ಸಂಬೋಧಿಸಲಾಗುತ್ತಿತ್ತು.

ಪ್ರಾಚೀನ ಕಾಲದಲ್ಲಿ ಗ್ರಾಮದ ಮುಖ್ಯಸ್ಥ ಗ್ರಾಮಿಣಿ. ಇದೊಂದು ಅಧಿಕಾರಿಯ ಹುದ್ದೆ. ಈ ಹುದ್ದೆಗೆ ಕೂಡ ಗ್ರಾಮದ ಶ್ರೀಮಂತ ಹಾಗೂ ಪ್ರಭಾವಶಾಲಿ 'ಗೃಹಪತಿ'ಯನ್ನೇ ನೇಮಿಸಲಾಗುತ್ತಿತ್ತು. ಕೌಟಿಲ್ಯ ಕೂಡ ತನ್ನ 'ಅರ್ಥಶಾಸ್ತ್ರ'ದಲ್ಲಿ ಗೂಢಚಾರರನ್ನು ಗೃಹಪತಿಗಳ ವೇಷದಲ್ಲಿ ಗ್ರಾಮಗಳಲ್ಲಿ ಕೃಷಿಭೂಮಿಯ ಪರಿವೀಕ್ಷಣೆಗಾಗಿ ಕಳುಹಿಸಬೇಕು ಎನ್ನುತ್ತಾನೆ. ಗೃಹಪತಿಗಳಿಗೆ ರಕ್ಷಣೆ ಕೂಡ ಬೇಕಾಗುತ್ತಿತ್ತು. ಅವರಿಗೆ ಅಂಗರಕ್ಷಕರಿದ್ದರು. ಬೌದ್ಧ ಗ್ರಂಥಗಳಲ್ಲಿ ಚಕ್ರವರ್ತಿ ಹೊಂದಿರಬೇಕಾದ ಏಳು ಪ್ರಮುಖ ಅಂಗಗಳ ಉಲ್ಲೇಖ ಇದೆ. ಅದರಲ್ಲಿ ಒಂದು ಅಂಗ 'ಗೃಹಪತಿ'. ಯಾಕೆಂದರೆ, ಗೃಹಪತಿ ರಾಜ್ಯಕ್ಕೆ ಪ್ರಮುಖ ತೆರಿಗೆ ಪಾವತಿದಾರ ಹಾಗೂ ಆರ್ಥಿಕತೆಯ ಮೂಲಾಧಾರ.

ವಿನಯಪಿಟಕದಲ್ಲಿ 'ಸೆಟ್ಟಿ - ಗೃಹಪತಿ'ಗಳ ಉಲ್ಲೇಖವಿದೆ. ಈ ಗ್ರಾಮೀಣ ಶ್ರೀಮಂತರು ತಾವು ಕೃಷಿಯಿಂದ ಗಳಿಸಿದ ಸಂಪತ್ತನ್ನು ಕ್ರಮೇಣ ವ್ಯಾಪಾರದಲ್ಲಿ ಮತ್ತು ಲೇವಾದೇವಿಯಲ್ಲಿ ತೊಡಗಿಸಿರಬೇಕು. ಹಾಗೆಯೇ ಕೆಲವು ಗೃಹಪತಿಗಳ ಮಕ್ಕಳು ಸೆಟ್ಟಿಯಾಗಿ ಪರಿವರ್ತಿತರಾದದ್ದು ಕಂಡುಬರುತ್ತದೆ. ಈ ಗೃಹಪತಿಗಳು ಕೃಷಿ ಅಭಿವೃದ್ಧಿ ಹೊಂದದಿರುವ ಹಿಮಾಲಯದ ತಪ್ಪಲಿನಲ್ಲಿದ್ದ ಶಾಕ್ಯ, ಕೋಲ, ಮಲ್ಲ ಮುಂತಾದ ಗಣರಾಜ್ಯಗಳಲ್ಲಿ ಕಂಡುಬರುವುದಿಲ್ಲ. ಅಲ್ಲಿ ಇನ್ನೂ ಭೂಮಿಯ ಮೇಲಿನ ಖಾಸಗಿ ಒಡೆತನ ಬಂದಿಲ್ಲ. ಕೃಷಿ ಚೆನ್ನಾಗಿ ಅಭಿವೃದ್ಧಿ ಹೊಂದಿದ ಗಂಗಾನದಿ ಬಯಲಿನ ಕೋಸಲ ಮತ್ತು ಮಗಧದಂತಹ ರಾಜಪ್ರಭುತ್ವಗಳಲ್ಲಿ ಗೃಹಪತಿಗಳು ಹೆಚ್ಚಾಗಿ ಕಂಡುಬರುತ್ತಾರೆ. ಯಾಕೆಂದರೆ, ಇಲ್ಲಿ ಭೂಮಿಯ ಮೇಲೆ ಖಾಸಗಿ ಒಡೆತನವಿತ್ತು.

ಈ ಗೃಹಪತಿಗಳು, ಶ್ರೀಮಂತರು, ಪ್ರಭಾವಿಗಳು ಮತ್ತು ಗೌರವಾನ್ವಿತರಾಗಿದ್ದರೂ ಹಿಂದೂ ಧರ್ಮದ ವರ್ಣಾಶ್ರಮ ವ್ಯವಸ್ಥೆಯಲ್ಲಿ ಅವರಿಗೆ ದೊರಕಿದ್ದು ತೃತೀಯ ದರ್ಜೆ. ಆದುದರಿಂದಲೇ ಇವರು ಬೌದ್ಧಧರ್ಮದ ಪ್ರಧಾನ ಪೋಷಕರಾಗಿ ಕಂಡುಬರುತ್ತಾರೆ. ಬೌದ್ಧಧರ್ಮ ಇವರಿಗೆ ಗೌರವದ ಸ್ಥಾನ ಕೊಟ್ಟಿದೆ. ಉದಾಹರಣೆಗೆ, ಅಂಗುತ್ತರ ನಿಕಾಯದಲ್ಲಿ ಗೃಹಪತಿ ಅನಾಥಪಿಂಡಿಕ ತನ್ನ ೫೦೦ ಜನ ಹಿಂಬಾಲಕರೊಂದಿಗೆ ಬುದ್ಧನನ್ನು ಕಂಡು ಬೌದ್ಧಧರ್ಮವನ್ನು ಸ್ವೀಕರಿಸುತ್ತಾನೆ. ಹಾಗೆಯೇ ಧಮ್ಮದಿನ್ನ ಎಂಬ ಗೃಹಪತಿ ಕೂಡ ೫೦೦ ಜನ ಹಿಂಬಾಲಕರೊಂದಿಗೆ ಬೌದ್ಧಧರ್ಮ ಸ್ವೀಕರಿಸುತ್ತಾನೆ. ಈ ಗೃಹಪತಿಗಳ ಹಿಂಬಾಲಕರನ್ನು ನೋಡಿದರೆ ಗ್ರಾಮೀಣ ಸಮಾಜದಲ್ಲಿ ಇವರ ಪ್ರಭಾವ ಎಷ್ಟಿತ್ತು ಎಂಬುದು ತಿಳಿಯುತ್ತದೆ. ಬುದ್ಧ ಮತ್ತು ಅವನ ಆಪ್ತ ಶಿಷ್ಯ ಆನಂದ ಶ್ರೀಮಂತ ಗೃಹಪತಿಗಳಾದ ಅನಾಥಪಿಂಡಿಕ, ನಕುಲಪಿತ, ಮನದಿನ್ನ ಮುಂತಾದವರು ಅನಾರೋಗ್ಯದಲ್ಲಿದ್ದಾಗ ಅವರನ್ನು ನೋಡಲು ಹೋಗಿದ್ದು ಗೃಹಪತಿಗಳು ಬೌದ್ಧಧರ್ಮಕ್ಕೆ ಎಷ್ಟು ಅವಶ್ಯಕವಾಗಿದ್ದರೆಂದು ತಿಳಿಯುತ್ತದೆ. ದಕ್ಷಿಣಭಾರತದ ನಾಸಿಕ್, ಕಾರ್ಲ, ಜುನ್ನಾರ್, ನಾನಾಘಾಟ್ ಕುಡ, ಸೈಲಾರ್‌ವಾಡಿ, ಅಮರಾವತಿ ಮುಂತಾದ ಕಡೆ ಬೌದ್ಧ ಸಂಘಕ್ಕೆ ಗೃಹಪತಿಗಳು ಮಾಡಿದ ದಾನದ ಉಲ್ಲೇಖಗಳು ದಾನಶಾಸನಗಳಲ್ಲಿವೆ. ಹೀಗೆ ಹೊಸದಾಗಿ ಹುಟ್ಟಿದ ಗ್ರಾಮೀಣ ಶ್ರೀಮಂತ ವರ್ಗ ಹೊಸ ಸ್ಥಾನಮಾನಕ್ಕಾಗಿ ಪ್ರಯತ್ನಿಸುತ್ತಿತ್ತು. ಇದನ್ನು ಬೌದ್ಧಧರ್ಮ ಅವರಿಗೆ ಒದಗಿಸಿತು. ಬೌದ್ಧಧರ್ಮ ಹೊಸ ಪ್ರೋತ್ಸಾಹಕರನ್ನು ಹಂಬಲಿಸುತ್ತಿತ್ತು. ಅದನ್ನು ಗೃಹಪತಿಗಳು ಬೌದ್ಧಧರ್ಮಕ್ಕೆ ಕೊಟ್ಟರು.

ಕ್ರಿಸ್ತಶಕ ೫ನೇ ಶತಮಾನಾನಂತರ 'ಗೃಹಪತಿ'ಗಳು ಸಾಹಿತ್ಯದಲ್ಲಾಗಲೀ ಅಥವಾ ಶಾಸನಗಳಲ್ಲಾಗಲೀ ಕಾಣಬರುವುದಿಲ್ಲ. ಇದರೊಂದಿಗೆ ಬೌದ್ಧಧರ್ಮವೂ ಕೂಡ ಈ ಕಾಲಕ್ಕೆ ದುರ್ಬಲವಾದಂತೆ ಕಾಣುತ್ತದೆ.

ಡಾ॥ ರಾಮದಾಸ ಪ್ರಭು ಸಿಂಗನಕೋಡಿ
ಇತಿಹಾಸ ಉಪನ್ಯಾಸಕರು, ಆಳ್ವಾಸ್ ಕಾಲೇಜು, ಮೂಡುಬಿದರೆ

*(೫೪ನೇ ಪುಟದಿಂದ ಕುವೆಂಪು ನಾಟಕಗಳಲ್ಲಿ...)*

ಧ್ವನಿಪೂರ್ಣವಾಗಿ ಅಭಿವ್ಯಕ್ತಿಸಿದ್ದಾರೆ. ಒಂದು ತಪ್ಪು ಸಾವಿರ ತಪ್ಪುಗಳಿಗೆ ಎಡೆಮಾಡಿಕೊಡುತ್ತದೆ. ಅನಂತರ ಅದರ ಕೈಗೊಂಬೆಯಾಗಿ ಮಾನವ ನಿರಂತರ ತಪ್ಪು ಮಾಡುತ್ತ ಬಂದಿರುವುದು ಮನುಷ್ಯ ಜೀವನದ ಬಹುದೊಡ್ಡ ದುರಂತವೆಂಬುದನ್ನು ಇಲ್ಲಿ ತೋರಿಸಿದ್ದಾರೆ. ಇಂಥ ಸಂಗತಿಗಳನ್ನು ಪರಂಪರೆಯುದ್ದಕ್ಕೂ ಕಾಣಬಹುದಾಗಿದೆ.

ಅಕ್ಷರ ಲೋಕದ ಅನನುಭವಿಗಳು ಅಪೂರ್ಣ ವಿದ್ಯೆಯ ಅವಿವೇಕಿಗಳು ಚರಿತ್ರೆಯುದ್ದಕ್ಕೂ ಅನಾಹುತಗಳನ್ನು ಎಸಗುತ್ತ ಬಂದಿರುವುದನ್ನು ಈ ನಾಟಕದಲ್ಲಿ ಧ್ವನಿಪೂರ್ಣವಾಗಿ ಕುವೆಂಪು ಪ್ರತಿಪಾದಿಸಿದ್ದಾರೆ. ದ್ರೋಣರು ಸಾಧನೆಯ ಫಲವಾಗಿ ಗುರುಪಟ್ಟಕ್ಕೆ ಯೋಗ್ಯರಾಗಿದ್ದರೂ ಅವರಿಗೆ ಪೂರ್ಣ ವಿದ್ಯಾಶಕ್ತಿಯ ಕೃಪೆ ಪ್ರಾಪ್ತವಾಗಿಲ್ಲವೆಂಬುದು ಇಲ್ಲಿ ಗೋಚರಿಸುತ್ತದೆ. ಅರ್ಜುನನ ಮತ್ಸರವನ್ನು ಆರಿಸುವುದಕ್ಕಾಗಿ ಏಕಲವ್ಯನ ಹೆಬ್ಬೆರಳನ್ನು ಆಹುತಿ ತೆಗೆದುಕೊಂಡ ಚಿತ್ರ ಕೊನೆಯ 'ಯಜ್ಞ' ದೃಶ್ಯದಲ್ಲಿ ಮೂಡಿಬಂದಿದೆ. ಹಾರುವ ಹಕ್ಕಿಯನ್ನು ಹೊಡೆಯಲು ಹೇಳಿದ ದ್ರೋಣನ ಆಜ್ಞೆಗೆ ಪಾಪದ ಲೇಪವಿಲ್ಲದ ಪಕ್ಷಿಯನ್ನು ಕೊಂದು ತನ್ನ ವಿದ್ಯೆಗೆ ಕಳಂಕವನ್ನೇಕೆ ಲೇಪಿಸಿಕೊಳ್ಳಬೇಕೆಂದು ಪ್ರಶ್ನೆ ಮಾಡಿದ್ದು ಗುರು ದ್ರೋಣರಿಗೆ ಏಕಲವ್ಯ ಒಡ್ಡಿದ ಬಹುದೊಡ್ಡ ಪ್ರತಿರೋಧವಾಗಿದೆ. ದ್ರೋಣಾಚಾರ್ಯರು ಅನುಭವಿಸುತ್ತಿರುವ ಘೋರ ಸಂಕಟದ ಸ್ಥಿತಿಯನ್ನು ಅರಿತ ಏಕಲವ್ಯ –

*ಸಮರ್ಪಿಸುವೆನ್ನ ಸರ್ವಸ್ವಂ ನಿನ್ನಡಿಗೆ ಗುರುದೇವ*

ಎಂದು ಉಸುರುತ್ತಾನೆ. ಅಲ್ಲದೆ 'ಪಡೆವುದೆಲ್ಲವು ಕೊಡುವುದಕ್ಕಾಗಿಯೇ' ಎಂಬ ಮಾನವ ಬಾಳಿನ ಹಿರಿಯ ತತ್ವವನ್ನು ಕಲಿತದ್ದು ಈ ಗುರುವಿನಿಂದ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ. ಇದು ವೇದೋಪನಿಷತ್ತಿನ ಸಾರಸರ್ವಸ್ವವಾದ ಆಧ್ಯಾತ್ಮಿಕ ತತ್ವವೊಂದರ ನಿರಂತರತೆಯನ್ನು ಸಾರುತ್ತಿದೆ. ಆದರೆ ಏಕಲವ್ಯನ ಈ ತ್ಯಾಗ ಮನೋಭಾವವನ್ನು ತನ್ನದೇ ಸಮಸ್ಯೆಯ ಪರಿಹಾರಕ್ಕಾಗಿ ದುರುಪಯೋಗಪಡಿಸಿಕೊಂಡ ದ್ರೋಣ ಪರಂಪರೆಯ ಪ್ರತೀಕ ಎಂಬುದನ್ನು ಕುವೆಂಪು ಸ್ಪಷ್ಟವಾಗಿ ಹೇಳಿದ್ದಾರೆ. ಕೆಳವರ್ಗದವರ ತ್ಯಾಗ, ಸರ್ವಸಮರ್ಪಣಾ ಭಾವವನ್ನು ಶೋಷಣೆ ಮಾಡುತ್ತ ಬಂದಿರುವುದು ಇಂದು ನಿನ್ನೆಯದಲ್ಲ, ಇದು ನಿರಂತರವಾಗಿ ಈ ಸಾಮಾಜಿಕ ವ್ಯವಸ್ಥೆಯಲ್ಲಿ ನಡೆದೇ ಇದೆ ಎಂಬುದನ್ನು ಧ್ವನಿಸಿದ್ದಾರೆ. ದ್ರೋಣರು ಏಕಲವ್ಯನ ಬಲಗೈ ಹೆಬ್ಬೆರಳು ಕೇಳುವ ಮೂಲಕ ಅದನ್ನು ಪ್ರಕಟಗೊಳಿಸಿದ್ದಾರೆ. 'ನಿನ್ನ ಬೆರಳಿಗೆ ಕೊಳ್ವುದೊಂದೇ ತೋರ್ಪುದಾ ಬಿದಿ ನನ್ನ ಕೊರಳಂ' ಎಂದು ಹೇಳುವ ದ್ರೋಣರು ಕರ್ಮಪರಂಪರೆಯ ಮುನ್ಸೂಚನೆಯನ್ನು ಕೊಟ್ಟಿದ್ದಾರೆ. ಆದರೆ ಏಕಲವ್ಯನ ತಾಯಿ, ಮಗನ ದುರವಸ್ಥೆ ಕಂಡು ''ನನ್ನ ಕಂದನ ಬೆರಳ್ ಬಲಿಯಕ್ಕೆ ಆ ಪಾಪಿಯ ಕೊರಳ್'' ಎಂದು ಶಪಿಸುವಲ್ಲಿ ಮಹತ್ತರ ಪ್ರತಿರೋಧ ಪ್ರಕಟವಾಗಿದೆ. ಏಕಲವ್ಯ ಮಾತ್ರ 'ಆಗಬಾರದುದಾಯ್ತೆ' ಎಂದು ಮರುಗಿ ತನ್ನ ಅನನ್ಯ ಗುರುಭಕ್ತಿಯನ್ನು ಮೆರೆಯುತ್ತಾನೆ.

ಕುವೆಂಪು ಅವರು ಈ ನಾಟಕದಲ್ಲಿ ಶೋಷಣೆ ಹಾಗೂ ಪ್ರತಿಭಟನೆ ಇವುಗಳ ಸ್ವರೂಪವನ್ನು ಅನನ್ಯವೆಂಬಂತೆ ಚಿತ್ರಿಸಿದ್ದಾರೆ. ಪುರೋಹಿತಶಾಹಿ ಪ್ರಭುತ್ವದ ನೆರವು ಪಡೆದು, ನಿಷ್ಕಳಂಕ ಪ್ರತಿಭೆಯನ್ನು ಅದು ತನ್ನ ಅಧೀನದಲ್ಲಿಲ್ಲ ಎಂಬ ಕಾರಣದಿಂದಾಗಿ ಹತ್ತಿಕ್ಕುವ ಕ್ರಮವನ್ನು ಅತ್ಯಂತ ಸಮರ್ಥವಾಗಿ ಪ್ರತಿಪಾದಿಸಲಾಗಿದೆ. ಅಪರಾಧ ಮಾಡಿದವರು ಯಾರೇ ಆಗಿರಲಿ ಅವರಿಗೆ ಶಿಕ್ಷೆಯಾಗಲೇಬೇಕೆಂಬ ಸಿದ್ಧಾಂತದ ಪ್ರತಿಪಾದನೆಯಲ್ಲಿ ಪ್ರಬಲ ಪ್ರತಿಭಟನೆ ಎದ್ದುತೋರುತ್ತದೆ.

ಹೀಗೆ ಕುವೆಂಪು ನಾಟಕಗಳನ್ನು ಸೂಕ್ಷ್ಮವಾಗಿ ಅವಲೋಕನ ಮಾಡಿದಾಗ ಪರಂಪರೆ ಮತ್ತು ಪ್ರತಿರೋಧದ ಸ್ವರೂಪವನ್ನು ತಿಳಿಯಲು ಸಾಧ್ಯವಾಗುತ್ತದೆಂದು ಹೇಳಬಹುದು.

ಡಾ॥ ಧನವಂತ ಹಾಜವಗೋಳ
ಪ್ರಾಧ್ಯಾಪಕರು, ಕನ್ನಡ ವಿಭಾಗ, ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ - ೮

# ಪಯಣ ಮರೀಚಿಕೆ



ಕಡಲಾಳದೊಡಲ
ಗರ್ಭದಿ ಸಿಡಿದ
ನೆತ್ತರು ನೆತ್ತರಲಿ
ಬೆಂದು ಬಸವಳಿದ
ಜೀವಾತ್ಮಗಳು; ಎತ್ತ
ಸಾಗಿರುವಿರಿ ನೆಟ್ಟ
ಬೀಜಗಳ ಮರೆತು
ಮಣ್ಣಲ್ಲಿ ಮಣ್ಣಾಗಿ
ಬೇರುಗಳು ಹಣ್ಣಾಗಿ !

ನಿಶೆಯ ಪೊರೆ ವಿಷದ
ಮರುಧರೆಯ ಬೆತ್ತಲೆ
ಪಯಣ ಮರೀಚಿಕೆ
– ಗಳನರಸಿ; ಬಲಿ
ನಿಷಾದ ವಾಲಿ ಸಂತತಿಗೆ
ದ್ರೋಣ ಕುಲ ಶ್ರೀರಕ್ಷೆ;
ಬೇಲಿ ಹಾರುವುದುಂಟೆ
ಪ್ರಾಣ ಭಿಕ್ಷೆಯ ಬೇಡಿ ?

ಬೆಳ್ಳಿಯ ಮುಸುಕಲಿ
ಬೆಂದ ಜೋಳದ ದಿಂಡು
ಬಿಡಿಯಾದುದೇಕೆ ?
ಹುಡಿ ಹುಡಿಯಾದುದೇಕೆ ?
ಓಂಕಾರ ನಾದಕೆ

ಬಲಿ ಹೆಜ್ಜೆ ಗುರುತು
– ಗಳು; ಕೆಸರುಂಡ
ಕೈಗಳಿಗೇಕೆ ಭಾಗ್ಯ
ರೇಖೆಗಳು ?

ಎತ್ತ ಸಾಗಿಹುದು
ತಂಡೋಪತಂಡಗಳ
ಪಯಣ ವಿತಂಡ
– ಗಳೊಡನೆ ? ಉರಿವ
ಹಟ್ಟಿ ಹರಿವ
ನೆತ್ತರ ತೊರೆಗಳ
ತೊರೆದು ಸಂಗಮಿಪ
ಕಾಲ ಸಾವಿರಾರು
ನದಿಗಳಿಗೆ !

ಅಗ್ನಿ ಕುಂಡಗಳ
ಮೆಟ್ಟಿ ವರ್ಷ
ಧಾರೆಗೆ ಸೆಟೆದು
ತಮವ ಭೇದಿಸಿ
ಮುನ್ನಡೆಯೆ
ಕಡಲೆಡೆಗೆ ಇನ್ನೇಕೆ
ಚಿಂತೆ ? ಮರು
– ಕಳಿಸದಿರಲಿನ್ನು
ಕೇರಿಗಳಲ್ಲಿ ಚಿತೆ !

ನಾ. ದಿವಾಕರ
ನಂ. ೩೭೬, ೧೧ನೇ ಅಡ್ಡರಸ್ತೆ, ಶ್ರೀರಾಂಪುರ ೨ನೇ ಹಂತ, ಮೈಸೂರು - ೫೭೦ ೦೨೩

# ನಿರಂಜನರ ಕಾದಂಬರಿಗಳಲ್ಲಿ ದುಡಿಮೆಗಾರರ ಕ್ರಾಂತಿ

**ಎ. ಮುನಿಶಾಮಪ್ಪ**

**ಹೊ**ಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಪ್ರಗತಿಶೀಲ ಚಳವಳಿಯು ಒಂದು ಪ್ರಮುಖ ಘಟ್ಟ. ಆಧುನಿಕ ಸಂದರ್ಭದಲ್ಲಿ ಮೊದಲ ಬಾರಿಗೆ ಸಾಹಿತ್ಯವನ್ನು ಸಾಮಾಜಿಕ ಉದ್ದೇಶಕ್ಕಾಗಿ ಬಳಸಿದ ಕೀರ್ತಿ ಪ್ರಗತಿಶೀಲ ಪಂಥದವರಿಗೆ ಸಲ್ಲುತ್ತದೆ. ಸಮಾಜ ಸುಧಾರಣಾ ಕಾರ್ಯಕ್ಕೆ ಸಾಹಿತ್ಯವನ್ನು ಒಂದು ವಾಹಕವನ್ನಾಗಿ ಬಳಸಿದ ಪ್ರಗತಿಶೀಲರು ತಮ್ಮ ಕೃತಿಗಳಲ್ಲಿ ಹಲವು ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಿದ್ದಾರೆ. ಮಾರ್ಕ್ಸ್‌ವಾದವನ್ನು ಆದರ್ಶವಾಗಿಟ್ಟುಕೊಂಡು ಕೆಳವರ್ಗದವರು, ತುಳಿತಕ್ಕೊಳಗಾದವರು, ರೈತರು, ಕಾರ್ಮಿಕರು, ಮಹಿಳೆಯರು ಮುಂತಾದ ಶೋಷಿತವರ್ಗದವರ ಪರ ದನಿಯೆತ್ತಿದ ಪ್ರಗತಿಶೀಲರು ಕನ್ನಡ ಸಾಹಿತ್ಯಕ್ಕೆ ವೈಶಾಲ್ಯತೆ ತಂದುಕೊಟ್ಟರು. ಪ್ರಮುಖ ಪ್ರಗತಿಶೀಲ ಸಾಹಿತಿಗಳಲ್ಲಿ ಒಬ್ಬರಾದ ನಿರಂಜನರು ತಮ್ಮ ಬಹುತೇಕ ಕೃತಿಗಳಲ್ಲಿ ಶೋಷಿತರ ಅದರಲ್ಲೂ ವಿಶೇಷವಾಗಿ ಶ್ರಮಿಕವರ್ಗದವರ ಸ್ಥಿತಿಗತಿಗಳನ್ನು ಹಾಗೂ ಅವರು ನಡೆಸಿದ ಕ್ರಾಂತಿಯನ್ನು ಚಿತ್ರಿಸಿದ್ದಾರೆ.

ನಿರಂಜನರು ವೈಯಕ್ತಿಕವಾಗಿ ಮಾರ್ಕ್ಸ್‌ವಾದಿಗಳು – ಕಮ್ಯುನಿಸ್ಟ್ ಪಕ್ಷದ ಸದಸ್ಯರು. ಅವರ ಕೃತಿಗಳಲ್ಲಿ ಈ ಎಡಪಂಥೀಯ ಧೋರಣೆ ಸ್ಪಷ್ಟವಾಗಿ ಮೂಡಿದೆ. ಪ್ರಾಯಶಃ, ಬಾಲ್ಯದಿಂದಲೂ ನಿರಂಜನರು ಕಷ್ಟಕಾರ್ಪಣ್ಯಗಳಲ್ಲಿಯೇ ಬೆಳೆದದ್ದರಿಂದ ಅವರಲ್ಲಿ ಈ ದೃಷ್ಟಿ ಗಟ್ಟಿಯಾಗಿ ನೆಲೆಯೂರಿರಬೇಕು. ಪ್ರಗತಿಶೀಲತೆ ಎಂದರೆ ಶೋಷಣೆಯ ವಿರುದ್ಧ ನಡೆಸುವ ತಾತ್ವಿಕ ಪ್ರತಿಭಟನೆ. ನಿರಂಜನರ ಕೃತಿಗಳಲ್ಲಿ ಈ ಪ್ರತಿಭಟನೆಯ ಕಲ್ಪನೆ ಸಮರ್ಥವಾಗಿ ಅಭಿವ್ಯಕ್ತಿಗೊಂಡಿದೆ. ಅವರು ಕನ್ನಡ ಪ್ರಗತಿಶೀಲ ಚಳವಳಿಯ ಪ್ರಾತಿನಿಧಿಕ ಲೇಖಕರು ಎಂಬುದರಲ್ಲಿ ಅನುಮಾನವಿಲ್ಲ.

ನಿರಂಜನರು ಶೋಷಕ ವ್ಯವಸ್ಥೆಯ ವಿರುದ್ಧ ಶೋಷಿತವರ್ಗ ನಡೆಸುವ ಹೋರಾಟಗಳನ್ನು ಕೇಂದ್ರವಾಗಿಟ್ಟುಕೊಂಡು ನಾಲ್ಕು ಕಾದಂಬರಿಗಳನ್ನು ರಚಿಸಿದ್ದಾರೆ – 'ಚಿರಸ್ಮರಣೆ', 'ಮೃತ್ಯುಂಜಯ', 'ಸ್ವಾಮಿ ಅಪರಂಪಾರ', 'ಕಲ್ಯಾಣಸ್ವಾಮಿ'. ಈ ಕಾದಂಬರಿಗಳಲ್ಲಿ ಐತಿಹಾಸಿಕ ಹೋರಾಟಗಳು ಕಲಾತ್ಮಕವಾಗಿ ನಿರೂಪಿತವಾಗಿವೆ. 'ಚಿರಸ್ಮರಣೆ' ಹಾಗೂ 'ಮೃತ್ಯುಂಜಯ'ಗಳಲ್ಲಿ ಸಾಮ್ರಾಜ್ಯಶಾಹಿ, ಊಳಿಗಮಾನ್ಯ ವ್ಯವಸ್ಥೆ ಮತ್ತು ಸರ್ವಾಧಿಕಾರಿ ನಿರಂಕುಶ ಪ್ರಭುತ್ವಗಳ ಅಡಿಯಲ್ಲಿ ಸಿಕ್ಕಿ ನರಳಿದ ಶ್ರಮಿಕವರ್ಗ ಸಿಡಿದೆದ್ದು ಶೋಷಕವರ್ಗದ ವಿರುದ್ಧ ಹೋರಾಡಿದ ಚಾರಿತ್ರಿಕ ಘಟನೆಗಳು ವಸ್ತುವಾಗಿವೆ. 'ಸ್ವಾಮಿ ಅಪರಂಪಾರ' ಮತ್ತು 'ಕಲ್ಯಾಣಸ್ವಾಮಿ' ಕಾದಂಬರಿಗಳಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಭಾರತದ ದೇಶೀ ನಾಯಕರು ನಡೆಸಿದ ಹೋರಾಟಗಳ ಚಿತ್ರಣವಿದೆ. ಐತಿಹಾಸಿಕ ಮಹತ್ವವುಳ್ಳ ಈ ನಾಲ್ಕು ಕೃತಿಗಳಲ್ಲಿ 'ಚಿರಸ್ಮರಣೆ' ಮತ್ತು 'ಮೃತ್ಯುಂಜಯ' ಎರಡೂ ಕಾದಂಬರಿಗಳು ದುಡಿಮೆಗಾರರ ಕ್ರಾಂತಿಯನ್ನು ದಾಖಲಿಸುತ್ತವೆ.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಕೇರಳದ ಕಯ್ಯೂರು ಗ್ರಾಮದಲ್ಲಿ ರೈತರು ಸರಕಾರ ಮತ್ತು ಜಮೀನ್ದಾರಿ ವ್ಯವಸ್ಥೆಯ ವಿರುದ್ಧ ಏಕಕಾಲದಲ್ಲಿ ನಡೆಸಿದ ಹೋರಾಟವನ್ನು ವಸ್ತುವಾಗಿಟ್ಟುಕೊಂಡು ರಚಿಸಿದ ಕಾದಂಬರಿ 'ಚಿರಸ್ಮರಣೆ'. ಸರಕಾರದ ಕೃಪಾಕಟಾಕ್ಷದಲ್ಲಿ ಜಮೀನ್ದಾರರು ನಾಡಿನ ರೈತರನ್ನು ಸುಲಿದು ಹಿಂಡಿ ಹಿಪ್ಪೆಯಾಗಿಸಿದ್ದಲ್ಲದೆ ಅವರ ಮೇಲೆ ದಬ್ಬಾಳಿಕೆ ನಡೆಸಿದರೆಂಬುದು ಚಾರಿತ್ರಿಕ ಸತ್ಯ. ಜಮೀನ್ದಾರರ ದಬ್ಬಾಳಿಕೆ, ದೌರ್ಜನ್ಯ, ಕ್ರೌರ್ಯಗಳು ಪರಾಕಾಷ್ಠೆ ಮುಟ್ಟಿದಾಗ ಕಯ್ಯೂರಿನ ರೈತರು ಸಂಘಟಿತರಾಗಿ ಸರಕಾರ ಹಾಗೂ ಜಮೀನ್ದಾರರ ವಿರುದ್ಧ ಸಮರ ಸಾರುತ್ತಾರೆ. ೧೯೪೦-೪೧ರ ಸುಮಾರಿನಲ್ಲಿ ನಡೆದ ಈ ಘಟನೆಯಲ್ಲಿ ಕಯ್ಯೂರಿನ ನಾಲ್ವರು ರೈತ ಮುಖಂಡರು ಸರಕಾರದ ಕ್ರೌರ್ಯಕ್ಕೆ ಆಹುತಿಯಾಗುತ್ತಾರೆ. ಈ ಘಟನೆ ಸಂಭವಿಸಿದಾಗ ನಿರಂಜನರು ಕಯ್ಯೂರಿನ ಪಕ್ಕದ ನೀಲೇಶ್ವರದಲ್ಲಿ ವಿದ್ಯಾರ್ಥಿಯಾಗಿದ್ದು, ರೈತರ ಹೋರಾಟವನ್ನು, ಸರಕಾರದ ನೀತಿಯನ್ನು, ಜಮೀನ್ದಾರರ ದಬ್ಬಾಳಿಕೆ, ದೌರ್ಜನ್ಯಗಳನ್ನು ಕಣ್ಣಾರೆ ಕಂಡವರು. ಬಹುಕಾಲ ಅವರ ಮನದಾಳದಲ್ಲಿ ಅಚ್ಚಳಿಯದೆ ಉಳಿದಿದ್ದ ಈ ಘಟನೆಗಳು ಕಲಾತ್ಮಕ ರೂಪ ಪಡೆದು 'ಚಿರಸ್ಮರಣೆ' ಯಾಗಿವೆ.

'ಚಿರಸ್ಮರಣೆ' ಯಲ್ಲಿನ ಪಾತ್ರಗಳನ್ನು ಸ್ಪಷ್ಟವಾಗಿ ಎರಡು ಗುಂಪುಗಳನ್ನಾಗಿ ವಿಂಗಡಿಸ ಬಹುದು. ಅಪ್ಪು, ಚಿರುಕಂಡ, ಅಬೂಬಕರ್, ಕುಂಞಂಬು, ಕಣ್ಣ ಮುಂತಾದವರು ರೈತ, ಕಾರ್ಮಿಕರ ಗುಂಪಿನವರು. ನಂಬಿಯಾರ್ ಮತ್ತು ನಂಬೂದಿರಿ ಜಮೀನ್ದಾರರ ಗುಂಪಿನವರು. ಮೊದಲ ಗುಂಪಿನ ತರುಣರೆಲ್ಲ ಬಡ ರೈತ, ಕಾರ್ಮಿಕರ ಮಕ್ಕಳು. ಅಪ್ಪು ಗೇಣಿಹೊಲವನ್ನು ನಂಬಿ ಜೀವನ ಸಾಗಿಸುತ್ತಿರುವ ರೈತನ ಮಗ, ಚಿರುಕಂಡ ಜಮೀನ್ದಾರರ ಒಕ್ಕಲು ಆಗಿರುವ ರೈತನ ಮಗ, ತಮ್ಮ ಗುಡಿಸಲ ಸುತ್ತಲಿನ ಸ್ವಲ್ಪ ಜಾಗದಲ್ಲಿ ತರಕಾರಿ ಬೆಳೆದು ಮಾರಾಟಮಾಡಿ ಜೀವನ ಸಾಗಿಸುತ್ತಿದ್ದ ತಾಯಿಯ ಮಗ ಕಣ್ಣ, ಹೀಗೆಯೇ ಇನ್ನುಳಿದವರೂ ಕೂಲಿಕಾರ್ಮಿಕರ ಮಕ್ಕಳು. ಇವರೆಲ್ಲರೂ ಗುಡಿಸಲುವಾಸಿಗಳು. ನಂಬಿಯಾರ್ ಮತ್ತು ನಂಬೂದಿರಿ ಕಯ್ಯೂರಿನ ಜಮೀನ್ದಾರರಾಗಿದ್ದು, ಊರಿನ ಸಮಸ್ತ ಆಸ್ತಿಗೂ ಒಡೆಯರಾಗಿರುತ್ತಾರೆ. ಇವರ ದರ್ಪ, ದಬ್ಬಾಳಿಕೆ, ದೌರ್ಜನ್ಯಗಳ ಸ್ವರೂಪವನ್ನರಿಯಲು ಕಾದಂಬರಿಯಲ್ಲಿ ಸಾಕಷ್ಟು ನಿದರ್ಶನಗಳಿವೆ. (ಉದಾಹರಣೆಗೆ ನಿಗದಿತ ಸಮಯಕ್ಕೆ ಸರಿಯಾಗಿ ಸಾಲದ ಹಣವನ್ನು ಹಿಂದಿರುಗಿಸಲಿಲ್ಲವೆಂಬ ಕಾರಣಕ್ಕಾಗಿ ರೈತನೊಬ್ಬನನ್ನು ಅರೆನಗ್ನನನ್ನಾಗಿಸಿ ಜಮೀನ್ದಾರರು ತಮ್ಮ ಆಳುಗಳ ಮೂಲಕ ಚಾವಟಿಯಿಂದ ಹೊಡೆಸುವ ಚಿತ್ರಣವಿದೆ.) ಇಂಥ ಶೋಷಣೆಯನ್ನು ಕೊನೆಗಾಣಿಸಲು ಕಯ್ಯೂರಿನ ರೈತ ಮುಖಂಡರು ಪಣತೊಡುತ್ತಾರೆ. ಅಪ್ಪು, ಚಿರುಕಂಡ, ಕಣ್ಣ, ಅಬೂಬಕರ್ ಮುಂತಾದವರ ಪ್ರಯತ್ನದಿಂದ ರೈತ ಸಂಘ ಸ್ಥಾಪನೆಯಾಗಿ, ಊರಿನ ಮಾಸ್ತರರ ಮಾರ್ಗದರ್ಶನದಲ್ಲಿ ಸಂಘದ ಚಟುವಟಿಕೆಗಳು ನಡೆದು ರೈತರಲ್ಲಿ ಜಾಗೃತಿ ಉಂಟಾಗುತ್ತದೆ. ಪರಿಣಾಮವಾಗಿ ತಾಲೂಕು ರೈತ ಸಮಾವೇಶ ಕಯ್ಯೂರಿನಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ರೈತರಿಗೂ ಸರಕಾರದ ಪ್ರತಿನಿಧಿಯಾದ ಪೊಲೀಸ್ ಕಾನ್ಸ್‌ಟೇಬಲ್‌ಗೂ ಘರ್ಷಣೆಯುಂಟಾಗಿ ಕಾನ್ಸ್‌ಟೇಬಲ್‌ನ ಹತ್ಯೆಯಾಗುತ್ತದೆ. ಈ ಘಟನೆಯ ಉತ್ಪ್ರೇಕ್ಷಿತ ವರದಿಯನ್ನಾಧರಿಸಿ ಸರಕಾರ ಕಯ್ಯೂರಿನ ಮುಗ್ಧ ರೈತರು ಮತ್ತು ಮಹಿಳೆಯರಿಗೆ ಚಿತ್ರಹಿಂಸೆ ನೀಡಿದ್ದಲ್ಲದೆ ನಾಲ್ವರು ರೈತ ಮುಖಂಡರನ್ನು ಗಲ್ಲಿಗೇರಿಸುತ್ತದೆ.

ಕಯ್ಯೂರು ರೈತರ ಕ್ರಾಂತಿಯನ್ನು ವಸ್ತುವಾಗಿಸಿಕೊಂಡಿರುವ 'ಚಿರಸ್ಮರಣೆ' ಕಯ್ಯೂರು ರೈತರ 'ವೀರಸ್ಮರಣೆ' ಯೂ ಆಗಿದೆ. ಕಾದಂಬರಿಯಲ್ಲಿ ಚಿತ್ರಿತವಾಗಿರುವಂತೆ ರೈತರ ಸ್ಥಿತಿಗತಿಗಳು ಅತ್ಯಂತ ಕೆಳಮಟ್ಟದಲ್ಲಿದ್ದು ಶೋಚನೀಯವಾಗಿವೆ. ರೈತರ ಇಂಥ ಸ್ಥಿತಿಗೆ ಕಾರಣ ಜಮೀನ್ದಾರರು ಮತ್ತು ಸಾಮ್ರಾಜ್ಯಶಾಹಿ ಸರಕಾರ. ತಮ್ಮ ಸ್ಥಿತಿಯನ್ನು

ನಿರಂಜನರು ವೈಯಕ್ತಿಕವಾಗಿ ಮಾರ್ಕ್ಸ್‌ವಾದಿಗಳು – ಕಮ್ಯುನಿಸ್ಟ್ ಪಕ್ಷದ ಸದಸ್ಯರು. ಅವರ ಕೃತಿಗಳಲ್ಲಿ ಈ ಎಡಪಂಥೀಯ ಧೋರಣೆ ಸ್ಪಷ್ಟವಾಗಿ ಮೂಡಿದೆ. ಪ್ರಾಯಶಃ, ಬಾಲ್ಯದಿಂದಲೂ ನಿರಂಜನರು ಕಷ್ಟಕಾರ್ಪಣ್ಯಗಳಲ್ಲಿಯೇ ಬೆಳೆದದ್ದರಿಂದ ಅವರಲ್ಲಿ ಈ ದೃಷ್ಟಿ ಗಟ್ಟಿಯಾಗಿ ನೆಲೆಯೂರಿರಬೇಕು. ಪ್ರಗತಿಶೀಲತೆ ಎಂದರೆ ಶೋಷಣೆಯ ವಿರುದ್ಧ ನಡೆಸುವ ತಾತ್ವಿಕ ಪ್ರತಿಭಟನೆ. ನಿರಂಜನರ ಕೃತಿಗಳಲ್ಲಿ ಈ ಪ್ರತಿಭಟನೆಯ ಕಲ್ಪನೆ ಸಮರ್ಥವಾಗಿ ಅಭಿವ್ಯಕ್ತಿಗೊಂಡಿದೆ. ಅವರು ಕನ್ನಡ ಪ್ರಗತಿಶೀಲ ಚಳವಳಿಯ ಪ್ರಾತಿನಿಧಿಕ ಲೇಖಕರು ಎಂಬುದರಲ್ಲಿ ಅನುಮಾನವಿಲ್ಲ.



ಸುಧಾರಿಸಲು ಮತ್ತು ಜಮೀನ್ದಾರರ ಗುಲಾಮಗಿರಿಯಿಂದ ಮುಕ್ತರಾಗಲು ರೈತರು ನಡೆಸಿದ ಬಂಡಾಯವನ್ನು ಸರ್ಕಾರ ಅತ್ಯಂತ ಕ್ರೂರ ಮಾರ್ಗದಿಂದ ದಮನಗೊಳಿಸುತ್ತದೆ. ಆದರೂ ಕ್ರಾಂತಿ ಜೀವಂತವಾಗಿದೆ ಎಂಬುದನ್ನು ಕಾದಂಬರಿ ಸೂಚಿಸುತ್ತದೆ.

ನಿರಂಜನರ 'ಮೃತ್ಯುಂಜಯ' ಒಂದು ವಿಶಿಷ್ಟ ಕಾದಂಬರಿ. ಪ್ರಾಚೀನ ನಾಗರಿಕತೆಯಲ್ಲಿನ ಅಪೂರ್ವ ಐತಿಹಾಸಿಕ ಘಟನೆಯೊಂದರ ಅಂತಃಸತ್ವವನ್ನು ವಸ್ತುವಾಗಿಸಿಕೊಂಡಿರುವ ಈ ಬೃಹತ್ ಕಾದಂಬರಿಗೆ ಚಾರಿತ್ರಿಕ ಮಹತ್ವವಿದೆ. ಹೋರಾಟ, ದಂಗೆ, ಬಂಡಾಯ, ಪ್ರತಿಭಟನೆ ಮುಂತಾದವುಗಳ ಕಲ್ಪನೆಯೇ ಇಲ್ಲದ ಕಾಲದಲ್ಲಿ ಸಂಘಟಿತ ಶ್ರಮಿಕವರ್ಗ ವಿಶೇಷವಾಗಿ ರೈತರು, ಕೂಲಿಕಾರ್ಮಿಕರು, ಕುಶಲಕರ್ಮಿಗಳು, ಕಲ್ಲು ಕೆಲಸದ ಕಾರ್ಮಿಕರು ಮುಂತಾದವರು ಸರ್ವಾಧಿಕಾರಿ, ನಿರಂಕುಶ ಪ್ರಭುತ್ವದ ವಿರುದ್ಧ ದಂಗೆಯೆದ್ದು, ತಮ್ಮ ಪ್ರಾಂತ್ಯದಲ್ಲಿ ನಿರಂಕುಶ ಆಡಳಿತವನ್ನು ಕಿತ್ತೊಗೆದು ಸಮಾನತಾ ತತ್ವವನ್ನು ಆಧರಿಸಿದ ಜನಾಡಳಿತವನ್ನು ಸ್ಥಾಪಿಸಿದ್ದು ಒಂದು ಸೋಜಿಗದ ಸಂಗತಿ. ಕ್ರಿ.ಪೂ. ೨೫೦೦ರಲ್ಲಿ ಪ್ರಾಚೀನ ಐಗುಪ್ತ (ಈಗಿನ ಈಜಿಪ್ಟ್) ಸಾಮ್ರಾಜ್ಯದ ನೀರಾನೆ ಪ್ರಾಂತದಲ್ಲಿ ನಡೆಯಿತೆನ್ನಲಾದ ಶ್ರಮಿಕವರ್ಗದ ದಂಗೆಯನ್ನು 'ಮೃತ್ಯುಂಜಯ'ದಲ್ಲಿ ನಿರಂಜನರು ಕಲಾತ್ಮಕವಾಗಿ ಚಿತ್ರಿಸಿದ್ದಾರೆ.

ಸುಮಾರು ೪೫೦೦ ವರ್ಷಗಳಷ್ಟು ಪ್ರಾಚೀನವಾದ ನಾಗರಿಕತೆ, ನೈಲ್ ನದಿಯ ತೀರದಲ್ಲಿ ತಲೆಯೆತ್ತಿದ್ದ ಐಗುಪ್ತ ಸಾಮ್ರಾಜ್ಯ, ಅಲ್ಲಿನ ಪೆರೊ (ಚಕ್ರವರ್ತಿ) ೨ನೇ ಪೇಪಿಯ ಆಡಳಿತಾವಧಿಯಲ್ಲಿ ನೀರಾನೆ ಪ್ರಾಂತದಲ್ಲಿ ನಡೆದ ದಂಗೆಯನ್ನು ಇತಿಹಾಸಕಾರರು ದಾಖಲಿಸಿದ್ದಾರೆ. ಇಂಥ ಅಪೂರ್ವ ಘಟನೆಯ ಬಗೆಗೆ ಆಸಕ್ತಿ, ಕುತೂಹಲ ಬೆಳೆಸಿಕೊಂಡ ನಿರಂಜನರು ಅದನ್ನೇ ಕೇಂದ್ರವಾಗಿಟ್ಟುಕೊಂಡು ಕಾದಂಬರಿ ರಚನೆಗೆ ತೊಡಗಿದ್ದಾರೆ. ಅಷ್ಟು ಪ್ರಾಚೀನವಾದ ಘಟನೆಯನ್ನು ಕುರಿತು ಇತಿಹಾಸಕಾರರಲ್ಲಿ ದೊರೆತ ಸುಳಿವಿನ ಜಾಡು ಹಿಡಿದು ಹೊರಟು ನಿರಂಜನರು ಸಂಶೋಧಕರಾಗಿ ದುಡಿದು ಸಾಕಷ್ಟು ಮಾಹಿತಿ ಕಲೆ ಹಾಕಿದ್ದಾರೆ. ಪ್ರಾಚೀನ ಇತಿಹಾಸಕಾರರಾದ ಹಿರೊಡೋಟಸ್, ಅನಂತರದ ಫ್ಲಿಂಡರ್ಸ್ ಪೆಟ್ರೀ, ಲಿಯೋನಾರ್ಡ್ ವೂಲ್ಲೀ, ಹರ್ವರ್ಡ್ ಕಾರ್ಟರ್, ಜೇಮ್ಸ್ ಬ್ರೆಸ್ಟೆಡ್, ವಿಲ್ ಡ್ಯೂರಾಂಟ್, ಲಿಯೊನಾರ್ಡ್ ಕಾಟ್ರೆಲ್, ಜಾಕ್ ಲಿಂಡ್ಸೇ ಮುಂತಾದವರ ಕೃತಿಗಳ ಅಧ್ಯಯನ ಕೈಗೊಂಡು, ಚಿಂತನೆ ನಡೆಸಿ, ಪುರಾತತ್ವಶಾಸ್ತ್ರಜ್ಞರ ನೆರವು ಪಡೆದು ನೀರಾನೆ ಪ್ರಾಂತದ ದುಡಿಮೆಗಾರರ ಕ್ರಾಂತಿಯ ಸ್ವರೂಪವನ್ನು ಕಲ್ಪಿಸಿಕೊಂಡು ಕಾದಂಬರಿ ರಚನೆಗೆ ತೊಡಗಿದ್ದಾರೆ.

ಐಗುಪ್ತ ಸಾಮ್ರಾಜ್ಯದ ನಲವತ್ತು ಪ್ರಾಂತಗಳಲ್ಲಿ ನೀರಾನೆ ಪ್ರಾಂತ್ಯವೂ ಒಂದು. ಗೇಬು ಎಂಬ ಪ್ರಾಂತಪಾಲನ ಅಧೀನದಲ್ಲಿದ್ದ ಈ ಪ್ರಾಂತಕ್ಕೆ ಟೆಹುಟಿ ಎಂಬ ಕಂದಾಯ ವಸೂಲಿ ಅಧಿಕಾರಿಯ ಆಗಮನದೊಂದಿಗೆ ಕಾದಂಬರಿಯ ಮುಖ್ಯ ಘಟನೆಗಳು ಆರಂಭವಾಗುತ್ತವೆ. ನೀರಾನೆ ಪ್ರಾಂತದ ದುಡಿಮೆಗಾರರು ಆ ವರ್ಷ ಬೆಳೆ ನಷ್ಟ, ಅಬ್ಬುಯಾತ್ರೆ ಮುಂತಾದ ಕಾರಣಗಳನ್ನು ಮುಂದೊಡ್ಡಿ ಕಂದಾಯದಲ್ಲಿ ರಿಯಾಯಿತಿ ನೀಡಬೇಕೆಂದು ಮೆನಫ್‌ಟಾ ಎಂಬ ಯುವಕನ ನೇತೃತ್ವದಲ್ಲಿ ಅಧಿಕಾರಿಗೆ ಮನವಿ ಸಲ್ಲಿಸುತ್ತಾರೆ. ಆದರೆ ಕಂದಾಯ ಅಧಿಕಾರಿಯು ಇವರೆಲ್ಲ ಕಂದಾಯ ಸಲ್ಲಿಸಲು ನಿರಾಕರಿಸುತ್ತಿದ್ದಾರೆಂದೂ ರಾಜತ್ವವನ್ನೇ ಧಿಕ್ಕರಿಸುತ್ತಿದ್ದಾರೆಂದೂ ಭಾವಿಸಿ ಮೆನಫ್‌ಟಾನನ್ನು ಬಂಧಿಸಿ ಹಿಂಸಿಸುತ್ತಾನೆ. ಇದರಿಂದ ಕೋಪೋದ್ರಿಕ್ತರಾದ ಶ್ರಮಿಕರೆಲ್ಲ ಸಂಘಟಿತರಾಗಿ ದಾಳಿ ಮಾಡಿ ರಾಜಗೃಹವನ್ನು ವಶಪಡಿಸಿಕೊಂಡು ಮೆನಫ್‌ಟಾನನ್ನು ಬಂಧಮುಕ್ತಗೊಳಿಸಿ ಅವನನ್ನು ನೀರಾನೆ ಪ್ರಾಂತದ ಪ್ರಾಂತಪಾಲನೆಂದು ಘೋಷಿಸುತ್ತಾರೆ. ಪ್ರಾಂತಪಾಲ, ಕಂದಾಯ ಅಧಿಕಾರಿ ಮತ್ತು ಕೆಲವು ಭೂಮಾಲಿಕರು ಪರಾರಿಯಾಗುತ್ತಾರೆ. ಮೆನಫ್‌ಟಾನ ಆಡಳಿತದಲ್ಲಿ ಹಲವು ಜನಪರ ಕಾರ್ಯಗಳು ನಡೆದು ನೀರಾನೆ ಪ್ರಾಂತವು ಅಭಿವೃದ್ಧಿಹೊಂದುತ್ತದೆ.

ಇತ್ತ ನೀರಾನೆ ಪ್ರಾಂತದಿಂದ ಪರಾರಿಯಾದವರು ಐಗುಪ್ತದ ರಾಜಧಾನಿ ಮೆಂಫಿಸ್ ತಲುಪಿ ಪ್ರಾಂತದ ದಂಗೆಯ ಬಗೆಗೆ ಪೆರೊಗೆ ವರದಿ ಸಲ್ಲಿಸುತ್ತಾರೆ. ಇದರಿಂದ ಕುಪಿತನಾದ ಪೆರೊ ತನ್ನ ಸೆಡ್ ಉತ್ಸವಕ್ಕೆ ಮೆನಫ್‌ಟಾ ಅತಿಥಿಯಾಗಿ ಬಂದಾಗ ಅವನನ್ನು ಬಂಧಿಸಿ, ರಾಜದ್ರೋಹ, ಧರ್ಮದ್ರೋಹಗಳ ಆಪಾದನೆ ಹೊರಿಸಿ ಅವನಿಗೆ ಶಿರಚ್ಛೇದನದ ಶಿಕ್ಷೆ ವಿಧಿಸುತ್ತಾನೆ. ನಂತರ ಮೆನಫ್‌ಟಾನ ಸಂಗಡಿಗರು ಅವನ ರುಂಡ ಮುಂಡಗಳನ್ನೊಯ್ದು ನೀರಾನೆ ಪ್ರಾಂತದಲ್ಲಿ ಗೋರಿಯೊಳಗಿಟ್ಟು ಸಂಸ್ಕಾರಗಳನ್ನು ನೆರವೇರಿಸುತ್ತಾರೆ. ಧರ್ಮದ್ರೋಹಿಗೆ ಸಂಸ್ಕಾರಗಳು ನಿಷಿದ್ಧವಾದ್ದರಿಂದ ಇನ್ನಷ್ಟು ಕೆರಳಿದ ಪೆರೊ ಮತ್ತು ಸಾಮ್ರಾಜ್ಯದ ಮಹಾ ಅರ್ಚಕರು ನೀರಾನೆ ಪ್ರಾಂತದ ಜನರನ್ನು ಶಿಕ್ಷಿಸಲು ಸಿದ್ಧರಾಗುತ್ತಾರೆ. ಪೆರೊನ ಸೈನ್ಯ ಮಹಾ ಅರ್ಚಕನ ನೇತೃತ್ವದಲ್ಲಿ ನೀರಾನೆ ಪ್ರಾಂತದ ಮೇಲೆ ದಾಳಿ ಮಾಡಿ ಧ್ವಂಸಗೊಳಿಸುತ್ತದೆ.

'ಮೃತ್ಯುಂಜಯ' ಸುಮಾರು ಆರುನೂರು ಪುಟಗಳಷ್ಟು ವಿಸ್ತಾರವುಳ್ಳ ಕಾದಂಬರಿ. ಇದರ ಬಹುಭಾಗ ಸಮಾಜದಲ್ಲಿನ ಅಸಮಾನತೆಯ ಚಿತ್ರಣಕ್ಕೆ ಮೀಸಲಾಗಿದೆ. ದುಡಿವ ವರ್ಗ ಮತ್ತು ಸುಖಲೋಲುಪ ವರ್ಗಗಳನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ. ಈ ಎರಡೂ ವರ್ಗಗಳ ಜೀವನಕ್ರಮ, ನಿರಂಕುಶ ಆಡಳಿತದ ಕ್ರೌರ್ಯ, ಪುರೋಹಿತಶಾಹಿಯ ಪರಮಾಧಿಕಾರ, ದುಡಿಮೆಗಾರರ ಬದುಕಿನ ದಾರುಣ ಸ್ಥಿತಿ, ಅವರ ಬವಣೆ ಇತ್ಯಾದಿಗಳನ್ನು ಕಾದಂಬರಿಕಾರರು ಪರಿಣಾಮಕಾರಿಯಾಗಿ ಚಿತ್ರಿಸಿ ಆ ಜನರ ಕ್ರಾಂತಿಯ ಹಿನ್ನೆಲೆಯನ್ನು ಒದಗಿಸಿದ್ದಾರೆ. ಬಲಾತ್ಕಾರದ ತೆರಿಗೆ ವಸೂಲಿ ಸಂದರ್ಭದಲ್ಲಿ ಪ್ರಜೆಗಳಿಗೆ ಅಧಿಕಾರಿಗಳು ನೀಡುವ ಚಿತ್ರಹಿಂಸೆ, ಗಣಿ ಕೆಲಸದಲ್ಲಿ ಕಾರ್ಮಿಕರನ್ನು ಅಮಾನುಷವಾಗಿ ನಡೆಸಿಕೊಳ್ಳುವುದು, ನಿರಂಕುಶ ಪ್ರಭುತ್ವದ ಹಾಗೂ ಬಂಡವಾಳಶಾಹಿಯ, ಭೂಮಾಲೀಕ ವರ್ಗದ ದಬ್ಬಾಳಿಕೆ ಕ್ರೌರ್ಯಕ್ಕೆ ನಿದರ್ಶನವಾಗಿದೆ. ಪೆರೊ, ಮಹಾಅರ್ಚಕ, ಭೂಮಾಲೀಕರು ನೂರಾರು ಜನ ದಾಸ ದಾಸಿಯರನ್ನು ಇಟ್ಟುಕೊಂಡು ಸುಖಲೋಲುಪರಾಗಿ ವಿಲಾಸಿ ಜೀವನ ನಡೆಸುತ್ತಿದ್ದರೆ, ಮೆನಫ್‌ಟಾನಂಥ ಬಹುಸಂಖ್ಯಾತ ಶ್ರಮಜೀವಿಗಳು ಅತ್ಯಂತ ದಾರಿದ್ರ್ಯಾವಸ್ಥೆಯಲ್ಲಿರುತ್ತಾರೆ. ಇಂಥ ಸ್ಥಿತಿಯಲ್ಲಿಯೂ ಬಲಾತ್ಕಾರದ ತೆರಿಗೆ ವಸೂಲಿ ಮಾಡುವುದು ಅವರನ್ನು ರೊಚ್ಚಿಗೆಬ್ಬಿಸುತ್ತದೆ.

ನಿರಂಜನರ ಈ ಎರಡೂ ಕಾದಂಬರಿಗಳಲ್ಲಿ ಕೆಲವು ಸಾಮಾನ್ಯ ಅಂಶಗಳಿವೆ. ಎರಡೂ ಕೃತಿಗಳಲ್ಲಿ ವರ್ಗ ತಾರತಮ್ಯ ಎದ್ದು ಕಾಣುತ್ತದೆ. ಶೋಷಿತವರ್ಗ ಶೋಷಕವರ್ಗದ ವಿರುದ್ಧ ಸಿಡಿದೆದ್ದು ವ್ಯವಸ್ಥೆಯನ್ನು ಬುಡಮೇಲು ಮಾಡುವ ಪ್ರಯತ್ನ ಎರಡೂ ಕಾದಂಬರಿಗಳಲ್ಲಿ ಕೇಂದ್ರ ಘಟನೆಯಾಗಿದೆ. ಕ್ರಾಂತಿಯನ್ನು ಪ್ರಭುತ್ವದ ದೈತ್ಯ ಶಕ್ತಿ ದಮನಗೊಳಿಸಿದರೂ ಅದರ ಜೀವಂತಿಕೆಯನ್ನು ಎರಡೂ ಕೃತಿಗಳು ಸೂಚಿಸುತ್ತವೆ.

'ಚಿರಸ್ಮರಣೆ' ಮತ್ತು 'ಮೃತ್ಯುಂಜಯ' ಕಾದಂಬರಿಗಳಲ್ಲಿನ ಮುಖ್ಯ ಘಟನೆಗಳಿಗೆ ಸುಮಾರು ೪೫೦೦ ವರುಷಗಳ ಕಾಲದ ಅಂತರವಿದೆ. ಆದರೂ ಈ ಎರಡೂ ಕೃತಿಗಳಲ್ಲಿನ ವಸ್ತುವಿನ ಸಾಮ್ಯತೆಯನ್ನು ಗಮನಿಸಿದರೆ ವರ್ಗವ್ಯವಸ್ಥೆ, ಸಾಮಾಜಿಕ - ಆರ್ಥಿಕ ಅಸಮಾನತೆ, ಶೋಷಣೆ, ಪ್ರತಿಭಟನೆ, ಕ್ರಾಂತಿಗಳು ಕಾಲದೇಶಾತೀತವಾಗಿದ್ದು ಅವು ನಿರಂತರವಾದವು ಎಂಬುದು ವೇದ್ಯವಾಗುತ್ತದೆ. ಈ ವಾಸ್ತವವನ್ನು ಗ್ರಹಿಸಿದ ನಿರಂಜನರು ಐತಿಹಾಸಿಕ ಘಟನೆಗಳಿಗೆ ಕಲಾತ್ಮಕ ರೂಪ ಕೊಟ್ಟಿದ್ದಾರೆ. ಎರಡೂ ಕಾದಂಬರಿಗಳ ರಚನೆಯೂ ಬೇರೆ ಬೇರೆ ಸಂದರ್ಭಗಳದ್ದೇ ಆದರೂ ಶ್ರಮಿಕವರ್ಗದ ಕ್ರಾಂತಿಯನ್ನೇ ಕೇಂದ್ರವಾಗಿಟ್ಟುಕೊಂಡಿರುವಲ್ಲಿ, ದುಡಿಮೆಗಾರರ ಜೀವನವು ಸುಧಾರಿಸಬೇಕೆಂಬ ಹಾಗೂ ವರ್ಗ ತಾರತಮ್ಯ ರಹಿತ, ಸಮಾನತಾ ಸಮಾಜವೊಂದರ ನಿರ್ಮಾಣದ ಆಶಯ ತೀವ್ರವಾಗಿದೆ.

ಎ. ಮುನಿಶಾಮಪ್ಪ
ಸಂಶೋಧಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು

**ಸುದ್ದಿ ಚಿತ್ರ**



ದಾವಣಗೆರೆ ನಗರದಲ್ಲಿ ಆಗಸ್ಟ್ ಮೊದಲ ವಾರ ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಮಾಜಿ ನಗರಸಭಾ ಅಧ್ಯಕ್ಷರಾದ ಎಚ್. ಕೆ. ರಾಮಚಂದ್ರಪ್ಪ ಉದ್ಘಾಟಿಸಿದರು. ಹಿರಿಯ ರಾಜಕೀಯ ಧುರೀಣರಾದ ಕೆ. ಮಲ್ಲಪ್ಪ ಮುಖ್ಯ ಅತಿಥಿಯಾಗಿದ್ದರು. ಅಲ್ಲದೆ ಜೆ. ಎಚ್. ಹನುಮಂತಪ್ಪ ಹಾಗೂ ಇತರ ಗಣ್ಯರು ಭಾಗವಹಿಸಿದ್ದರು.



**ಸಾರಾ ಅಬೂಬಕ್ಕರ್ ಅಭಿವ್ಯಕ್ತಿ ಸಾಮರ್ಥ್ಯದ ದೃಷ್ಟಿಯಿಂದ ತುಂಬ ಗಟ್ಟಿಗರು. ಅವರ ಸಾಹಿತ್ಯದ ಮೌಲ್ಯ ಕಟ್ಟಿ ವಿಮರ್ಶಿಸುವ ಸಾಹಸ ಇದಲ್ಲ. ಬರೆಯಲೇಬೇಕೆಂಬ ಅವರ ತುಡಿತ ಬೆರಗುಗೊಳಿಸುವಂಥದ್ದು. ಕೇವಲ ಪತ್ರ ವ್ಯವಹಾರ ಮಾಡುವಷ್ಟು ಬರವಣಿಗೆಯನ್ನು ಉಳಿಸಿಕೊಂಡಿದ್ದ ಮಹಿಳೆ ದಕ್ಷಿಣ ಕನ್ನಡ, ಕಾಸರಗೋಡು ಭಾಗದ ಜನಾಂಗವೊಂದರ ಎಲ್ಲ ಹಂತದ ನೋವು ನಲಿವುಗಳನ್ನು ಬಿಂಬಿಸಲು ಪ್ರಯತ್ನಿಸುವ ಪ್ರಕ್ರಿಯೆಯೇ ಒಂದು ಸಾಹಸ.**

# ಅಭಿವ್ಯಕ್ತಿ ಸಾಹಸಕ್ಕೆ ಸ್ಫೂರ್ತಿಯ ಹೆಸರು ಸಾರಾ ಅಬೂಬಕ್ಕರ್

೧೯೮೪ರ ಸಮಯದಲ್ಲಿ ಕರ್ನಾಟಕದ ಬಹುಭಾಗಗಳ ಯುವಜನರ ಸಾಮಾಜಿಕ ಸಾಹಿತ್ಯಕ ಆಸಕ್ತಿಯನ್ನು ಅಯಸ್ಕಾಂತದಂತೆ ಸೆಳೆಯುತ್ತಿದ್ದುದು ಲಂಕೇಶ್ ಪತ್ರಿಕೆ. ಪತ್ರಿಕೆಯಲ್ಲಿ ವಿವಿಧ ವರ್ಗದ, ಜನಾಂಗದ, ಸ್ತರದ ಜನರ ಅಳಲುಗಳಿಗೆ ಅಭಿವ್ಯಕ್ತಿಯ ಅವಕಾಶ ದೊರೆತು ಅವರವರ ಸಮಸ್ಯೆಗಳು ನಾಡಿನ ಗಮನಸೆಳೆಯುತ್ತಿದ್ದ ಸಮಯದಲ್ಲಿ ಸಹಜವಾಗಿ ನನ್ನ ಕಣ್ಣು ಹುಡುಕುತ್ತಿದ್ದುದು ಈ ಪತ್ರಿಕೆಯಲ್ಲಾದರೂ ಒಬ್ಬಿಬ್ಬರು ಮುಸ್ಲಿಮರು ಕನ್ನಡದಲ್ಲಿ ಬರೆಯುವ ಸಾಹಸ ಮಾಡಿರಬಹುದೇ, ಎಂದು. ಇದು ನನ್ನಲ್ಲಿ ಧಾರ್ಮಿಕ ಕಳಕಳಿಯಿಂದ ಮೂಡಿದ ಪ್ರಶ್ನೆಯಾಗಿರಲಿಲ್ಲ. ಬದಲಿಗೆ ಮುಸ್ಲಿಂ ಜನಾಂಗದಲ್ಲಿಯೂ ಇರಬಹುದಾದ ಸಮಸ್ಯೆಗಳು, ಶೋಷಣೆಗಳು, ಒಳಜಗಳಗಳು, ಪ್ರಮುಖ ಸಮಸ್ಯೆಯಾದ ಸ್ತ್ರೀ ಶೋಷಣೆ ಎಲ್ಲವೂ ಹೊರಜಗತ್ತಿಗೆ ತಿಳಿದರೆ ಧಾರ್ಮಿಕ ಉದ್ಧಟರ ತಾಂಡವ ನೃತ್ಯಕ್ಕೆ ಕಡಿವಾಣ ಬೀಳಬಹುದು ಎಂಬುದು ನನ್ನ ಆಶಯವಾಗಿತ್ತು. ನನ್ನಂತೆ ಉರ್ದು ಅರಿಯದ ಆದರೆ ಕನ್ನಡ ಬಲ್ಲ ಬಹಳ ಜನ ಮುಸ್ಲಿಮರ ನಿರೀಕ್ಷೆ ಅಂದು ಇದೇ ಆಗಿದ್ದಿರಬಹುದು ಎನಿಸುತ್ತದೆ. ಆಗ ಕಣ್ಣಿಗೆ ಬಿದ್ದದ್ದು ಲಂಕೇಶ್ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗುತ್ತಿದ್ದ ಸಾರಾ ಅಬೂಬಕ್ಕರ್ ಅವರ 'ಸಹನಾ' ಕಾದಂಬರಿ.

'ಸಹನಾ'ದ ನಾಯಕ-ನಾಯಕಿಯರು ನನ್ನ ಕಲ್ಪನಾಲೋಕವನ್ನೇ ತೊಡೆದು ವಾಸ್ತವಕ್ಕೆ ಇಳಿಸಿದ್ದವು. ಆಗ ಅರಿವಿಗೆ ಬಂದದ್ದು ಒಂದು ಹೊಸ ಜಗತ್ತೇ ಆಗಿತ್ತು. ಈ ಜನಾಂಗದಲ್ಲಿಯೂ ಅನ್ಯರಂತೆ ಶ್ರೀಮಂತ ಪರಿವಾರದವರು ಬಡ ವರನಿಗೆ ಹೆಣ್ಣು ಕೊಡಲು ಹಿಂಜರಿಯುತ್ತಾರೆ, ಬಡ ಮಹಿಳೆಯರು ಶ್ರೀಮಂತ ಮುಸ್ಲಿಮರ ಮನೆಯಲ್ಲಿ ಕಸ ಗುಡಿಸಿ, ಮನೆ ತೊಳೆದು, ದೈಹಿಕ-ಮಾನಸಿಕ ಅವಮಾನ ಹಿಂಸೆಗಳನ್ನು ಸಹಿಸಿ ಬದುಕುತ್ತಾರೆ ಎಂಬುದನ್ನು ಈ ಕಾದಂಬರಿಯ ಅಧ್ಯಾಯಗಳು ನನ್ನಂತೆಯೇ ಕನ್ನಡ ಸಾಹಿತ್ಯಾಸಕ್ತರಿಗೆ ಮನವರಿಕೆ ಮಾಡಿಕೊಡತೊಡಗಿದ್ದವು. ಜೊತೆಗೇ ಪ್ರೇಮ ಒಂದು ಧರ್ಮ, ಜಾತಿಗೆ ಒಂದೊಂದು ತೆರನಾಗಿರದೇ ಮಾನವ ಜನಾಂಗಕ್ಕೆಲ್ಲ ಒಂದೇ ಮೌಲ್ಯಯುತ ಸಂದೇಶ ರವಾನಿಸುತ್ತದೆ ಎನಿಸಿದ್ದು ಈ ಕಾದಂಬರಿ ಓದಿದಾಗ.

ಸಾರಾ ಅಬೂಬಕ್ಕರ್ ಅಭಿವ್ಯಕ್ತಿ ಸಾಮರ್ಥ್ಯದ ದೃಷ್ಟಿಯಿಂದ ತುಂಬ ಗಟ್ಟಿಗರು. ಅವರ ಸಾಹಿತ್ಯದ ಮೌಲ್ಯ ಕಟ್ಟಿ ವಿಮರ್ಶಿಸುವ ಸಾಹಸ ಇದಲ್ಲ. ಬರೆಯಲೇಬೇಕೆಂಬ ಅವರ ತುಡಿತ ಬೆರಗುಗೊಳಿಸುವಂಥದ್ದು. ಕೇವಲ ಪತ್ರ ವ್ಯವಹಾರ ಮಾಡುವಷ್ಟು ಬರವಣಿಗೆಯನ್ನು ಉಳಿಸಿಕೊಂಡಿದ್ದ ಮಹಿಳೆ ದಕ್ಷಿಣ ಕನ್ನಡ, ಕಾಸರಗೋಡು ಭಾಗದ ಜನಾಂಗವೊಂದರ ಎಲ್ಲ ಹಂತದ ನೋವು-ನಲಿವುಗಳನ್ನು ಬಿಂಬಿಸಲು ಪ್ರಯತ್ನಿಸುವ ಪ್ರಕ್ರಿಯೆಯೇ ಒಂದು ಸಾಹಸ. ಅವರ ಪ್ರಥಮ ಕೃತಿ 'ಚಂದ್ರಗಿರಿಯ ತೀರದಲ್ಲಿ' ಓದಬೇಕೆನ್ನುವ ಕುತೂಹಲ ತೀವ್ರವಾದಾಗ ಲಂಕೇಶ್ ಪತ್ರಿಕೆಯಿಂದ ವಿಳಾಸ ಪಡೆದು ಪತ್ರ ಬರೆದೆ. ಚಂದ್ರಗಿರಿ...ಗೆ ಆರಿಸಿಕೊಂಡಿದ್ದ ವಸ್ತು ನನಗೆ ಚಕಿತನನ್ನಾಗಿಸಿತ್ತು. ''ಒಮ್ಮೆ ಮದುವೆಯಾದ ನಂತರ ಪತಿ ತಲ್ಲಾಕ್ ನೀಡಿ ಪತಿ-ಪತ್ನಿ ದೂರವಾಗುತ್ತಾರೆ. ಕೆಟ್ಟ ಗಳಿಗೆಯೊಂದರಲ್ಲಿ ಸಂಭವಿಸಿದ ವಿಚ್ಛೇದನವನ್ನು ಮರೆತು ಮತ್ತೆ ಒಂದಾಗಲು ಬಯಸಿದರೂ ಧಾರ್ಮಿಕ ಕಟ್ಟಳೆಗಳು ಅಡ್ಡಿಪಡಿಸುತ್ತವೆ. ಆಗ ಪತ್ನಿ ಒಂದು ದಿನದ ಮಟ್ಟಿಗಾದರೂ ಸರಿ, ಮತ್ತೊಬ್ಬನೊಡನೆ ಮದುವೆಯಾಗಿ ವಿಚ್ಛೇದನ ಪಡೆದುಕೊಳ್ಳಬೇಕು. ನಂತರವೇ ಮೊದಲ ಗಂಡನೊಡನೆ ಪುನಃ ನಿಖಾ ಮಾಡಿಕೊಂಡು ಒಂದಾಗಲು ಅವಕಾಶ ಸಿಗುವದು.'' ಕನ್ನಡದ ಪಾರಂಪರಿಕ ಸಾಹಿತ್ಯವಾಹಿನಿಯಲ್ಲಿ ವಿಕ್ಷಿಪ್ತ ಎನಿಸುವ ಈ ವಿಷಯವನ್ನೆತ್ತಿಕೊಂಡು ಸಾರಾ ಅವರು ನಿಭಾಯಿಸಿದ್ದು ಒಂದು ಅಭಿವ್ಯಕ್ತಿ ಸಾಹಸವೇ ಸರಿ. ಒಬ್ಬ ಮಹಿಳೆ ಮುಸ್ಲಿಂ ಜನಾಂಗದ ಆಂತರಿಕ ಮೂಲಭೂತವಾದವನ್ನು ಎದುರಿಸಿ ಗೆದ್ದದ್ದು ಆ ಜನಾಂಗದ ಯುವತಿಯರಲ್ಲಿ ಧೈರ್ಯ ತುಂಬಬಲ್ಲದು ಎಂಬುದು ನನ್ನ ಅನಿಸಿಕೆ.

ಷಾ ಬಾನು ಪ್ರಕರಣದಲ್ಲಿ ಮುಸ್ಲಿಂ ಮಹಿಳೆಯರಿಗಾದ ಅವಮಾನ ನೋವುಗಳನ್ನು ಪ್ರಬಲವಾಗಿ ವಿರೋಧಿಸಿದವರು ಸಾರಾ. ಅವರ ನಿಲುವುಗಳನ್ನು ಅನೇಕ ಮಹಿಳೆಯರು ಮತ್ತು ಪುರುಷರು ಅಭಿಮಾನಪೂರ್ವಕವಾಗಿ ಸಮರ್ಥಿಸಿದ್ದು ಆಶಾದಾಯಕ ಅಂಶ. ಆದರೆ ಕೆಲವು ಮುಸ್ಲಿಂ ಸಂಘಟನೆಗಳು ಅವರ ವ್ಯಕ್ತಿತ್ವದ ತೇಜೋವಧೆಗಾಗಿ ನಡೆಸಿದ ಚಟುವಟಿಕೆಗಳು ಅಮಾನವೀಯವಾಗಿದ್ದವು. ಇದಕ್ಕೂ ಸಾರಾ ವಿಚಲಿತರಾಗದೆ ಇದ್ದಾಗ ಅವರ ಮೇಲೆ ಹಲ್ಲೆ ನಡೆಸುವುದಕ್ಕೂ ಹಿಂಜರಿಯಲಿಲ್ಲ. ಅವರಿಗೆ ಇಂಥವುಗಳನ್ನು ಮೆಟ್ಟಿ ನಿಲ್ಲುವ ಧೈರ್ಯ ತಂದುಕೊಟ್ಟಿದ್ದು ಅವರ ಬರವಣಿಗೆಯೇ. 'ಚಂದ್ರಗಿರಿಯ ತೀರದಲ್ಲಿ' ಕೃತಿಯ ಸಿದ್ಧ ಮಾದರಿಯನ್ನೇ ಬಳಸಿದ ಹಲವು ಕೃತಿಗಳನ್ನು ಅವರು ಕೊಟ್ಟರು ಎಂಬ ವಾದವಿದೆ. ಇದರ ಹೊರತಾಗಿ ರಚಿಸಿದ ಕೆಲವು ಕತೆಗಳು ಗಮನಾರ್ಹವಾಗಿವೆ.

೧೯೮೯ರಲ್ಲಿ ಪ್ರಕಟವಾದ 'ಚಪ್ಪಲಿಗಳು' ಕಥಾಸಂಕಲನದ 'ವಿಷ ಉಣಿಸುವವರು' ಹೃದಯಂಗಮ ಕತೆ. ಕತೆಯ ಕೇಂದ್ರಪಾತ್ರಗಳು ಜಾಫರ್-ನಳಿನಿ ತಮ್ಮ ಆದರ್ಶಗಳಿಂದ ಹಿರಿಮೆ ಮೆರೆಯುತ್ತಾರೆ. ಕೋಮುಗಲಭೆಯ ಪರಿಣಾಮದಿಂದ ಅದೆಷ್ಟು ಕೋಮಲ ಮನಸ್ಸುಗಳು ಅಗ್ನಿಯಲ್ಲಿ ಎಸೆದ ಹೂಗಳಾಗುತ್ತವೆ. 'ನಿಮ್ಮೊಡನಿದ್ದೂ...' ಕತೆಯು ಪ್ರಗತಿಪರರೆನಿಸಿಕೊಂಡ ಆಧುನಿಕರು ಆಚರಿಸುವ ನವ ಅಸ್ಪೃಶ್ಯತೆಯ ವಸ್ತು ಹೊಂದಿದೆ. ಸಮಾಜವನ್ನು ಅವರು ನಿರುಕಿಸುವ ಪರಿ ಈ ಕತೆ ಅಭಿವ್ಯಕ್ತಿಸುತ್ತದೆ.

ಸಾರಾ ಅವರ ಸಾಮಾಜಿಕ ಕಳಕಳಿ ಕೇವಲ ಬರವಣಿಗೆಗೆ ಸೀಮಿತವಾದುದಲ್ಲ. ಅವರು ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ಪೂರೈಸುವ ರೀತಿ ಕೂಡ ವಿಶಿಷ್ಟ. ನಿರಾಶ್ರಿತ ಕುಟುಂಬಗಳಿಗೆ ಲಂಕೇಶ್ ಪತ್ರಿಕೆಯ ಮೂಲಕ ಸಹಾಯ, ಸಹಕಾರ ಸಲ್ಲಿಸಿದ್ದ ಉದಾಹರಣೆಗೆ ಕೊರತೆಯಿಲ್ಲ. ಲಂಕೇಶ್‌ರೊಂದಿಗೆ ಭಾಗವಹಿಸಿದ ಸತ್ಯಾಗ್ರಹಗಳೂ ವಿಶಿಷ್ಟವಾದವು. ಷಾ ಬಾನು ಪ್ರಕರಣದಲ್ಲಿ ಅವರು ತಳೆದ ನಿಲುವು ತೀವ್ರ ರಿಸ್ಕಿಯಾಗಿತ್ತು. ಆದರೂ ಹಿಂದೆ ಮುಂದೆ ನೋಡದೆ ತಮ್ಮ ಅಭಿಪ್ರಾಯ ಬದಲಿಸದೆ ನಿಶ್ಚಿತ ದಾರಿಯಲ್ಲಿ ಮುಂದುವರಿದರು.

ಕುರ್-ಆನ್ ಪಠಣ ಹದೀಸ್ ಆಚರಣೆ ಮಾತ್ರದಿಂದ ಧರ್ಮಮಾರ್ಗ ಅನುಸರಿಸಿದಂತೆ ಆಗುವದು ಎಂಬ ಹುಸಿ ನಂಬಿಕೆಯನ್ನು ತೊಲಗಿಸಿ ಈ ಧರ್ಮಗ್ರಂಥಗಳನ್ನು ಅರ್ಥೈಸುವ ವೈಚಾರಿಕ ಕ್ರಮ ಬೆಳೆಸುವದು ಇಂದಿನ ಅಗತ್ಯವಾಗಿದೆ. ಇಂದಿಗೂ ಅನೇಕರು ಕುರ್-ಆನ್ ಕಂಠಪಾಠ ಮಾಡುವ ಕುರಿತು ತಲೆಕೆಡಿಸಿಕೊಂಡಷ್ಟೇ ಅದನ್ನು ವೈಚಾರಿಕವಾಗಿ ವ್ಯಾಖ್ಯಾನಿಸುವ ಬಗ್ಗೆ ಯೋಚಿಸುವದಿಲ್ಲ. ಈ ಧರ್ಮಗ್ರಂಥದ ಲಿಂಗಸಮಾನತೆಯ ತಿರುಳನ್ನು ಬೋಧಿಸುವ ಭಾಗಗಳನ್ನು ಪ್ರಚುರಪಡಿಸುವ ಕಾರ್ಯ ಆಗಬೇಕಾಗಿದೆ ಎನಿಸುತ್ತದೆ. ಸಾರಾ ಅವರ ಇಂಥ ನಿಲುವುಗಳು ಸೌಹಾರ್ದ ಸಮಾಜ ನಿರ್ಮಾಣಕ್ಕೆ ಸಹಕಾರಿಯಾಗುತ್ತವೆ.

ಇವುಗಳ ನಡುವೆ ಹಲವು ಘಟನೆಗಳು, ಹಲವು ವರ್ಷಗಳು, ಹಲವು ಜನ ವ್ಯಕ್ತಿಗಳೂ ಇಲ್ಲವಾಗಿದ್ದಾರೆ. ಚಂದ್ರಗಿರಿಯಲ್ಲಿ ಅದೆಷ್ಟೋ ನೀರು ಹರಿದುಹೋಗಿದೆ. ಈ ಪಯಣದ ಕ್ಷಣಮಾತ್ರ ನಿಶ್ಚಲವಾಗಿ ಮನದ ಯಾವುದೋ ಒಂದು ಮೂಲೆಯಲ್ಲಿ ಮನೆಮಾಡಿದೆ. ರಕ್ತ ಸಂಬಂಧ, ಜಾತಿ-ಧರ್ಮ ಸಂಬಂಧಗಳಿಗಿಂತ ಮಾನವ ಸಂಬಂಧಗಳು ಮಿಗಿಲಾದವು. ಇವುಗಳು ದೇಶ, ಭಾಷೆ, ಜನ-ಜಾತಿಗಳಿಗೂ ಮೀರಿ ಬೆಳೆಯುವಂಥವು. ಅಂತಹ ಸಂಬಂಧಗಳನ್ನು ಸಾರಾ ಬೆಳೆಸುವಲ್ಲಿ ತೊಡಗಿಸಿಕೊಂಡವರು. ಈ ಮಾನವ ಸಂಬಂಧಗಳ ವಿಷಯ ಬಂದಾಗ ಇರಾನ್‌ನ ಶಿರೀನ್ ಇಬಾರಿ ಮರೆಯಲಾಗದ ಹೆಸರು. ಸಾರಾ – ಶಿರೀನ್ ಒಂದು ನಾಣ್ಯದ ಎರಡು ಮುಖಗಳಾಗಲಿ ಎಂಬುದು ನನ್ನ ಹಾರೈಕೆ.

ಡಿ. ಎಂ. ನದಾಫ್
ನಂ. ೪-೫, ೪೬೯, ರೇವಣಸಿದ್ಧೇಶ್ವರ ಕಾಲೋನಿ, ಅಫಜಲಪುರ, ಗುಲಬರ್ಗಾ ಜಿಲ್ಲೆ - ೫೮೫ ೩೦೧

# ಅನ್ಯಭಾಷೀಯರು ಮತ್ತು ಕನ್ನಡ

"ಕರ್ನಾಟಕದಲ್ಲಿ ಕನ್ನಡಿಗರ ಸಂಖ್ಯೆ ಕಡಿಮೆಯಾಗುತ್ತಿದೆ" ಎಂಬ ಕೂಗು ಸಾಮಾನ್ಯವಾಗಿ ಕೇಳಿ ಬರುತ್ತದೆ. ನವೆಂಬರ್ ತಿಂಗಳಲ್ಲಿ ಇದು ತಾರಕಕ್ಕೆ ಮುಟ್ಟುತ್ತದೆ. ನಿಜ, ಮೇಲ್ನೋಟಕ್ಕೆ ಈ ಮಾತು ಸತ್ಯ. ಈ ಸಂಗತಿಯನ್ನು ವಾಸ್ತವ ದೃಷ್ಟಿಯಿಂದ ನೋಡಬೇಕು. ಕನ್ನಡನಾಡಿನಲ್ಲಿ ಜನಸಾಂದ್ರತೆ ಕಡಿಮೆ. ಅಕ್ಕಪಕ್ಕದ ರಾಜ್ಯಗಳಲ್ಲಿ ಜನಸಾಂದ್ರತೆ ಹೆಚ್ಚು. ಹಳ್ಳದ ಕಡೆ ನೀರು ಹರಿಯುವಂತೆ, ಅಕ್ಕಪಕ್ಕದ ರಾಜ್ಯದ ಜನರು ಹೊಟ್ಟೆಪಾಡಿಗಾಗಿ ಇಲ್ಲಿಗೆ ಬರುತ್ತಾರೆ. ಇದು ಸಂವಿಧಾನಾತ್ಮಕವಾಗಿ ತಪ್ಪಲ್ಲ. ಏಕೆಂದರೆ, ನಮ್ಮವರೂ ಹೊಟ್ಟೆಪಾಡಿಗಾಗಿ ಅತ್ತಇತ್ತ ಹೋಗಿದ್ದಾರೆ. ಒಂದೆರಡು ದಶಕಗಳಿಂದ ಮಾತ್ರವಲ್ಲ, ಒಂದೆರಡು ಶತಮಾನಗಳಿಂದಲೂ, ಈ ಕ್ರಿಯೆ ನಡೆಯುತ್ತಲೇ ಬಂದಿದೆ. ಹಿಂದೆ, ಹೊರಗಿನಿಂದ ಬಂದವರು ಕನ್ನಡನಾಡಿನ ಪರಿಸರದಲ್ಲಿ ಕರಗಿಹೋಗಿ, ಕನ್ನಡಿಗರಾಗಿಬಿಡುತ್ತಿದ್ದರು. ನಮಗೆ ಸ್ವಾತಂತ್ರ್ಯ ಬಂದಮೇಲೆ, ಅಕ್ಕಪಕ್ಕದ ರಾಜ್ಯದಿಂದ ಬಂದವರು ತಮ್ಮ ಪೂರ್ವಾಶ್ರಮದ ಚಹರೆಯನ್ನು, ಅಸ್ಮಿತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇದಕ್ಕೆ ಸಂವಹನ ಮಾಧ್ಯಮಗಳ, ಸಂಪರ್ಕ ಸಾಧನಗಳ ಮತ್ತು ಜೀವನ ಶೈಲಿಯ ಬದಲಾವಣೆಗಳ ಕೊಡುಗೆಯೂ ಇದೆ. ಇದನ್ನು ಕಂಡ ಸ್ಥಳೀಯರು ಒದರಾಡುತ್ತಾರೆ, ಒದ್ದಾಡುತ್ತಾರೆ. ಹೊಟ್ಟೆಪಾಡಿಗಾಗಿ ಬಂದವರು ಈ ನೆಲ, ಈ ಜಲ, ಈ ಭಾಷೆ ತಮ್ಮದೆಂದು, ಸ್ಥಳೀಯ ಪರಿಸರದಲ್ಲಿ ಒಂದಾಗಿಬಿಟ್ಟರೆ, ಈ ಸಮಸ್ಯೆ ಉದ್ಭವವಾಗುವುದಿಲ್ಲ. ಹಾಗಾದರೆ, ಇಂದು ಈ ಸಮಸ್ಯೆಗೆ ಕೊನೆ ಇಲ್ಲವೆ ? ಇದೆ.




ನಮ್ಮ ಘನ ಸರ್ಕಾರ, ಮೊದಲಿನಿಂದಲೂ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ದಿವ್ಯ ನಿರ್ಲಕ್ಷ್ಯಕ್ಕೆ ಗುರಿಮಾಡಿದೆ. ಉನ್ನತ ಶಿಕ್ಷಣದ ಕಡೆ ತನ್ನ ಗಮನವನ್ನು ಕೇಂದ್ರೀಕರಿಸಿದೆ. ಏಕೆಂದರೆ, ರಾಜಕಾರಣಿಗಳಿಗೆ ಅದು ಹಣದ ಹೊಳೆ ಹರಿಸುವ ಅಕ್ಷಯ ಪಾತ್ರೆ. ನಮ್ಮ ಹಿಂದಿನ 'ಬಜೆಟ್'ಗಳನ್ನು ಅವಲೋಕಿಸಿದರೆ ಸತ್ಯದರ್ಶನವಾಗುತ್ತದೆ. ಜೊತೆಗೆ 'ಓಟು ಬ್ಯಾಂಕಿನ' ಕಡೆ ಸದಾ ಅವರ ದೃಷ್ಟಿ ಇದ್ದೇ ಇರುತ್ತದೆ. ಸಾಹಿತಿಗಳು ಮತ್ತು ಕಲಾವಿದರು ನಾಡನ್ನು ಒಗ್ಗೂಡಿಸಿದರೆ, ರಾಜಕಾರಣಿಗಳು ಅದನ್ನು ಬಹಳ ನಾಜೂಕಾಗಿ ಒಡೆಯುತ್ತಾರೆ. ಮೊದಲಿನಿಂದಲೂ ಪ್ರಾಥಮಿಕ ಶಿಕ್ಷಣದ ಕಡೆ ಗಂಭೀರವಾಗಿ ಗಮನ ಹರಿಸಿ, ಪ್ರಾಮಾಣಿಕವಾಗಿ, ಕನ್ನಡವನ್ನು ಕಾನೂನುಬದ್ಧವಾಗಿ, ಸೂಕ್ತರೀತಿಯಲ್ಲಿ, ಅನುಷ್ಠಾನಗೊಳಿಸಿದ್ದರೆ, ಈ ಸಮಸ್ಯೆ ಈ ಪ್ರಮಾಣದಲ್ಲಿ ಇರುತ್ತಿರಲಿಲ್ಲ.

ಇಂತಹ ಸಂದರ್ಭದಲ್ಲಿ, ಅನ್ಯಭಾಷೀಯರನ್ನು ಗಡಿಪಾರು ಮಾಡಲು ಸಾಧ್ಯವಿಲ್ಲ. ಗುರುತಿನ ಚೀಟಿ ನೀಡುವುದು ಒಂದು ಮರೀಚಿಕೆ. ಹಾಗಾದರೆ ಮಾಡುವುದಾದರೂ ಏನು ? ಇನ್ನು ಮುಂದಾದರೂ ನಮ್ಮ ಸರ್ಕಾರ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆ, ಕನ್ನಡವನ್ನು ಪ್ರಾಥಮಿಕ ಹಂತದಲ್ಲೇ ತರಬೇಕು. ಅದು ನಿರಂತರವಾಗಿ ಮುಂದುವರಿಯುವಂತೆ ನೋಡಿಕೊಳ್ಳಬೇಕು. ಪ್ರಾಥಮಿಕ ಶಿಕ್ಷಣದ ಜೊತೆಗೆ ಚೆಲ್ಲಾಟವಾಡುವುದನ್ನು ನಿಲ್ಲಿಸಬೇಕು. ಎಲ್ಲಾ ಅನ್ಯಭಾಷೀಯರ ಶಾಲೆಗಳಲ್ಲಿ ಕನ್ನಡ ಉಪಾಧ್ಯಾಯರು ಇರುವಂತೆ ನೋಡಿಕೊಳ್ಳಬೇಕು. ಗಡಿ ಪ್ರದೇಶಗಳಲ್ಲಿ ಕನ್ನಡ ಶಾಲೆಗಳನ್ನು ಗಟ್ಟಿಗೊಳಿಸಬೇಕು. ಈ ಶಾಲೆಗಳು ಕನ್ನಡ ಮಕ್ಕಳಿಗೆ ಆಕರ್ಷಕ ಕೇಂದ್ರಗಳಾಗಬೇಕು. ಜೊತೆಗೆ, ಶಾಲೆಗಳಿಂದ ಹೊರಗುಳಿದ ಅನ್ಯಭಾಷೀಯರಿಗೆ, ಎಲ್ಲ ಕಡೆ ಕನ್ನಡ ಕಲಿಸುವ ನಿರಂತರ ವ್ಯವಸ್ಥೆ ಇರಬೇಕು. ಅವರಿಗೆ ಕನ್ನಡದ ಅನಿವಾರ್ಯತೆಯನ್ನು, ಅವಶ್ಯಕತೆಯನ್ನು ಮನಗಾಣಿಸುತ್ತಿರಬೇಕು. ಇದು ಏಕಕಾಲದಲ್ಲಿ, ನಿರಂತರವಾಗಿ, ಹತ್ತು ದಿಕ್ಕಿನಿಂದ ಆಗಲೇಬೇಕಾದ ಕೆಲಸ. ಒಂದು ಸಣ್ಣ ಅವಲೋಕನವನ್ನು ನಡೆಸಿದರೆ, ನಮ್ಮ ಹೊಸಗನ್ನಡವನ್ನು ಬೆಳೆಸಿದವರಲ್ಲಿ ಅನ್ಯಭಾಷೀಯರ ಪಾತ್ರವೇ ದೊಡ್ಡದು. ಕಿಟ್ಟೆಲ್, ರೈಸ್, ಸಂಸ, ಕೈಲಾಸಂ, ಮಾಸ್ತಿ, ಬೇಂದ್ರೆ, ಕಸ್ತೂರಿ, ರಾಜರತ್ನಂ, ನಿಸಾರ್ ಅಹಮದ್... ಹೀಗೆ ಈ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಆದ್ದರಿಂದ ಅನ್ಯಭಾಷೀಯರ ಬಗ್ಗೆ ಸುಮ್ಮನೆ ಕಿರಚಾಡುವುದಕ್ಕಿಂತ ಅವರ ಮನಃಪರಿವರ್ತಿಸುವುದು ಮುಖ್ಯ. ಇದಕ್ಕೆ ಸರ್ಕಾರ ಒತ್ತಾಸೆಯಾಗಿ ನಿಲ್ಲಬೇಕು, ಜನತೆ ಪ್ರೀತಿಯಿಂದ ಕನ್ನಡದ ಪರಿಮಳವನ್ನು ಹರಡಬೇಕು.


**ಚಿ. ಶ್ರೀನಿವಾಸರಾಜು**

ನಂ. ೨೧ (೮), 'ಚಿರಂಜೀವಿ', ಹಳೆಯ ಈಜುಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು - ೩



ಕೃಪೆ : ಆಕಾಶವಾಣಿ (೧೧.೧೦.೨೦೦೪)


## ಉತ್ತರೆಯ ಗರ್ಭಕ್ಕೇ ಬಾಣ

ರಾಮಾಯಣದಲೊಂದು
ರಾಮರಾಜ್ಯ ;
ಸೀತೆಗೊಂದು ಲಕ್ಷ್ಮಣ ರೇಖೆ.

ಮಹಾಭಾರತದಲೊಂದು
ಧರ್ಮ ಸಂಸ್ಥಾಪನೆ ;
ದ್ರೌಪದಿಯ ತುಟಿಗಳಿಗೆ
ಐದು ಬೀಗ ಮುದ್ರೆ.

ಇಂದ್ರನೈಭೋಗಕ್ಕೆ
ಮೈವೆತ್ತ ಅಹಲ್ಯೆಯ
ಎದೆಯ ಮೇಲೊಂದು ಕಲ್ಲು.

ಜಮದಗ್ನಿಯ
ಸಂಶಯದ ಸುಳಿಗೆ
ಸಿಲುಕಿದ ರೇಣುಕೆಯ
ತಲೆಯ ಬಲಿ.

ದುಷ್ಯಂತನ ರಾಜ ಮರೆವಿಗೆ
ಸಾಕ್ಷಿ ಶಕುಂತಲೆಗೆ
ಉಂಗುರದ ಅಭಿಜ್ಞಾನ.

ಸುನಾಮಿ ಆಕ್ರಂದನದಲ್ಲೂ
ಹೆಣ್ಣಿನ ಮಾರಾಟ.

ಧರ್ಮದ ಕತ್ತಿಯ ಮೊನೆಗೆ
ಹೆಣ್ಣಿನ ರಕ್ತದಾಸೆ
ಕೊನೆಗೂ
ಉತ್ತರೆಯ ಗರ್ಭಕ್ಕೇ ಬಾಣ.


ಮಾಧವಿ ಭಂಡಾರಿ,
ಕೆರೆಕೋಣ, ಅರೆಅಂಗಡಿ (ಅಂಚೆ), ಹೊನ್ನಾವರ ತಾಲೂಕು, ಉ. ಕ. ಜಿಲ್ಲೆ

HOSATHU Kannada Monthly / September 2006 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.






